# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ'ವನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಮುಖ್ಯರು. ಅವರು ಅದನ್ನು ೦೬ ಮೇ, ೧೯೭೯ರಲ್ಲಿ ಸ್ಥಾಪಿಸಿದರು. ಈ ಪ್ರತಿಷ್ಠಾನವನ್ನು ರಾಷ್ಟ್ರಕವಿ ಕುವೆಂಪು ಅವರು ೧೦ ಮಾರ್ಚ್, ೧೯೮೦ರಂದು ಉದ್ಘಾಟಿಸಿದರು. ಕರ್ನಾಟಕ ಸರ್ಕಾರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಸಾರ್ವಜನಿಕರ ಸಹಕಾರ, ಸಹಾಯಗಳಿಂದ ಬೆಂಗಳೂರಿನ ನರಸಿಂಹರಾಜ ಕಾಲೋನಿಯಲ್ಲಿ 'ಬಿ.ಎಂ.ಶ್ರೀ. ಕಲಾ ಭವನ' ನಿರ್ಮಾಣವಾಗಿದೆ. ಪ್ರತಿಷ್ಠಾನದ 'ಪ್ರೊ. ಎಂ.ವಿ. ಸೀತಾರಾಮಯ್ಯ ಸಂಶೋಧನಾ ಕೇಂದ್ರ'ದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆಯನ್ನು ಪಡೆದ ಪಿಎಚ್.ಡಿ., ಹಾಗೂ ಎಂ.ಫಿಲ್ ತರಗತಿಗಳು ನಡೆಯುತ್ತಿವೆ. ಪ್ರತಿಷ್ಠಾನ ಅಪರೂಪದ ಹಸ್ತಪ್ರತಿ ಭಂಡಾರವನ್ನು ಹಾಗೂ ಉತ್ತಮ ಗ್ರಂಥಭಂಡಾರವನ್ನು ಹೊಂದಿದೆ. ಹಸ್ತಪ್ರತಿ ವಿಜ್ಞಾನ ಮತ್ತು ಹಳಗನ್ನಡ ಅಧ್ಯಯನ ತರಗತಿಗಳನ್ನು ಪ್ರತಿಷ್ಠಾನ ನಡೆಸುತ್ತಿದೆ; ಮಾಸಿಕ 'ವಾರ್ತಾಪತ್ರ' 'ಹೊಂಗನಸ'ನ್ನು ಮತ್ತು ದ್ವೈವಾರ್ಷಿಕ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ'ವನ್ನು ಹಾಗೂ ಕಾಲಕಾಲಕ್ಕೆ ಉತ್ತಮ ಗ್ರಂಥಗಳನ್ನು ಪ್ರಕಟಿಸುತ್ತಿದೆ. ನಿರಂತರವಾಗಿ ಸಂಶೋಧನಾತ್ಮಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರತಿಷ್ಠಾನ ನಡೆಸಿಕೊಂಡು ಬರುತ್ತಿದೆ. ೨೦೦೪ರಲ್ಲಿ ಪ್ರತಿಷ್ಠಾನ ರಜತ ಮಹೋತ್ಸವವನ್ನು ಆಚರಿಸಿತು.

# ಪ್ರೊ. ವಿ.ಎಂ. ಇನಾಂದಾರ್
# ಬದುಕು – ಬರಹ

**ಡಾ. ವಿಜಯಾ ಸುಬ್ಬರಾಜ್**



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ, ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯.
ದೂರವಾಣಿ: ೨೬೬೧೫೪೭೭, ೨೬೬೭೬೭೭೩ ಇ–ಮೇಲ್: bmsritrust@gmail.com

**PROF. V.M. INAAMDAR BADUKU - BARAHA**
by : **Dr. Vijaya Subbaraj**

Published by : B.M. Sri Smaraka Prathisthana, 3rd Main Road, N.R. Colony, Bengaluru-19. Ph: 080-26615877

First Impression : 2016

Pages : x + 166

Copies : 500

Paper Used : 70 GSM N.S. Maplitho

Size : 1/8 Demy

Price : **Rs. 120/-**

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಮುಂಮಾತು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಮೂರು ದಶಕಗಳಿಗೂ ಮೀರಿದ ಅವಧಿಯಿಂದ ಕಾರ್ಯ ನಿರ್ವಹಿಸುತ್ತ ಕನ್ನಡ ಸಾಂಸ್ಕೃತಿಕ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುತ್ತ ಬಂದ ಸಂಸ್ಥೆ. ಇದರ ಬಗ್ಗೆ ನಾಡಿನ ಎಲ್ಲ ವಿದ್ವಾಂಸರೂ ಆದರಾಭಿಮಾನಗಳನ್ನು ಹೊಂದಿ ಸಂಸ್ಥೆಯೊಂದಿಗೆ ಸಹಕರಿಸುತ್ತಿದ್ದಾರೆ. ಹಾಗಾಗಿಯೇ ಅದರ ಪ್ರಕಟಣಕಾರ್ಯವೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ; ತಮ್ಮ ಹೊಚ್ಚ ಹೊಸ ಕೃತಿಗಳನ್ನು ಪ್ರಕಟಿಸಲು ನಮಗೆ ಅನುವುಮಾಡಿಕೊಡುತ್ತಿದ್ದಾರೆ.

ಪ್ರತಿಷ್ಠಾನದ ಮೂಲ ನೆಲೆ ಸಂಶೋಧನೆ. ಸಂಶೋಧನೆಯೆಂಬುದು ಹಿಂದಿನದನ್ನು ಕೆದಕುವುದಕ್ಕೆ ಮಾತ್ರ ಸೀಮಿತವಾದದ್ದೇನಲ್ಲ. ಎಲ್ಲ ಕಾಲದ ಸಂದರ್ಭ, ಸನ್ನಿವೇಶ, ಕೃತಿ, ಕಾರ್ಯ ಇವುಗಳಲ್ಲಿ ಅಂತರ್ಗತವಾದ ಸತ್ಯವನ್ನು ಗುರುತಿಸುವ ಕೆಲಸವೇ ಸಂಶೋಧನೆಯೆನ್ನಬಹುದೆಂದು ನನ್ನ ತಿಳಿವಳಿಕೆ. ಹಾಗಾಗಿ ಸಮಕಾಲೀನವಾದದ್ದರ ಬಗ್ಗೆಯೂ, ಶಾಶ್ವತದ ಜೊತೆಗೆ ಸದ್ಯದ ಬಗ್ಗೆಯೂ ಸಂಶೋಧನೆ ನಡೆಯಬೇಕಾದುದು, ಆವಶ್ಯಕ. ಸಂಶೋಧನೆಯ ಅರ್ಥ ಹುಡುಕಾಟ ಎಂದಲ್ಲವೇ? ಆಗಲೇ ಹೇಳಿದಂತೆ 'ಸತ್ಯ'ವನ್ನು ಶೋಧಿಸುವುದು. ಆದರೆ ಸತ್ಯ ಎಂದರೇನೆಂಬುದನ್ನೇ ಯಾರೂ ಖಚಿತವಾಗಿ ನಿರ್ವಚಿಸಲಾಗುವುದಿಲ್ಲ! ಒಂದು ಕಾಲಕ್ಕೆ ಸತ್ಯ ಎನ್ನಿಸಿಕೊಳ್ಳುವಂಥದು ಮತ್ತೊಂದು ಕಾಲಕ್ಕೆ ಹಾಗೆ ಕಾಣದೇ ಹೋಗಬಹುದು; ಅಥವಾ ಒಬ್ಬ ವ್ಯಕ್ತಿಗೆ ಸತ್ಯವೆನಿಸಿದ್ದು ಮತ್ತೊಬ್ಬನಿಗೆ ಹಾಗನ್ನಿಸದೇ ಇರಬಹುದು; ಅಷ್ಟೇಕೆ, ಒಬ್ಬನೇ ವ್ಯಕ್ತಿಗೆ ಒಮ್ಮೆ ಸತ್ಯವೆನ್ನಿಸಿದುದು ಕಾಲ ಸರಿದಂತೆ ತನ್ನ ಅನಿಸಿಕೆಯ ಬಗ್ಗೆ ಅವನಿಗೆ ಅನುಮಾನವುಂಟಾಗ ಬಹುದು. ಅಂದರೆ ಸತ್ಯ ಎಂಬುದು ಅನಂತಮುಖಿ; ಅದಕ್ಕನುಗುಣವಾಗಿ ಸಂಶೋಧನೆಯೂ. ಹಳೆಯದನ್ನು ಹಾಗೂ ಹೊಸದನ್ನು ಹೊಸದೃಷ್ಟಿಯಿಂದ ನೋಡುವ, ವಿಶ್ಲೇಷಿಸುವ, ಪರಿಭಾವಿಸುವ, ವ್ಯಾಖ್ಯಾನಿಸುವ, ಅದರ ಪ್ರಸ್ತುತತೆಯನ್ನು ವಿವೇಚಿಸುವ ಎಲ್ಲ ಬೌದ್ಧಿಕ ಸಾಹಸಗಳೂ ಸಂಶೋಧನೆಗಳೇ.

ಇಂತಹ ಸಂಶೋಧನೆ ಹೆಚ್ಚಾಗಬೇಕು, ಅರಿಯುವ, ಬಗೆಯುವ ಪ್ರಕ್ರಿಯೆ ಮೊನಚಾಗಬೇಕು, ಆಳವಾಗಬೇಕು. ಅದಕ್ಕಾಗಿ ಹಿರಿಯರ ಮಾರ್ಗದರ್ಶನ

ಬೇಕು, ಕಿರಿಯರ ಉತ್ಸಾಹ ಬೇಕು. ಪ್ರತಿಷ್ಠಾನವು ತಾನು ಆರಂಭಗೊಂಡ ಕಾಲದಿಂದ ಮೊದಲುಗೊಂಡು ಇಂತಹ ಕಾರ್ಯಗಳಿಗೆ ವೇದಿಕೆಯಾಗಿದೆ; ಉಪನ್ಯಾಸಗಳು, ವಿಚಾರ ಸಂಕಿರಣಗಳು, ಸಂವಾದಗಳು ಇವುಗಳ ಜೊತೆಗೆ ಎಂ.ಫಿಲ್ ಮತ್ತು ಪಿಎಚ್.ಡಿ ಅಭ್ಯರ್ಥಿಗಳಿಗೆ ತರಬೇತಿ ಮತ್ತು ಮಾರ್ಗದರ್ಶನಗಳು, ಪುಸ್ತಕ ಪ್ರಕಟಣೆ ಇವುಗಳ ಮೂಲಕ ಇಂಥ ಸಂಶೋಧನೆಗೆ ಪ್ರತಿಷ್ಠಾನವು ವೇದಿಕೆಯಾಗಿದೆ. ಈ ಕಾರ್ಯದಲ್ಲಿ ಎಲ್ಲರ ನೆರವು ಮತ್ತು ಪ್ರೋತ್ಸಾಹಗಳು ಆವಶ್ಯಕ.

ಹೊಸ ತಿಳಿವನ್ನು ಹೆಚ್ಚಿಸುವ ಕೆಲಸವಲ್ಲದೆ, ಪುಸ್ತಕ ಪ್ರಕಟಣೆಯ ಮೂಲಕವೂ ಜ್ಞಾನದ ಪರಿಧಿಯನ್ನು ವಿಸ್ತರಿಸುವ ಕೆಲಸವನ್ನು ಪ್ರತಿಷ್ಠಾನ ಹಿಂದಿನಿಂದಲೂ ಮಾಡುತ್ತ ಬಂದಿದೆ. ಆ ದಿಸೆಯಲ್ಲಿ ಪ್ರೊ. ಎಂ.ವಿ. ಇನಾಂದಾರ್ ಅವರನ್ನು ಕುರಿತ ಡಾ. ವಿಜಯ ಸುಬ್ಬರಾಜು ಅವರ ಈ ಪುಸ್ತಿಕೆ ಈಚಿನದು. ಪ್ರೊ. ಇನಾಂದಾರರು ಕಾದಂಬರಿ ಹಾಗೂ ವಿಮರ್ಶಾ ಕ್ಷೇತ್ರಗಳಲ್ಲಿ ಗಣನೀಯ ಕಾರ್ಯಗೈದಿರುವ ಹಿರಿಯರು. ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಈ ಕೃತಿಯನ್ನು ರಚಿಸಿಕೊಡಲು ಡಾ. ವಿಜಯ ಅವರನ್ನು ಕೇಳಿಕೊಳ್ಳಲಾಗಿತ್ತು. ಇನಾಂದಾರರ ಬದುಕು-ಬರಹಗಳನ್ನು ಆತ್ಮೀಯವಾಗಿಯೂ ತಲಸ್ಪರ್ಶಿಯಾಗಿಯೂ ಪರಿಚಯ ಮಾಡಿಕೊಡುವ ಈ ಗ್ರಂಥವನ್ನು ಓದುಗರು ಆದರದಿಂದ ಬರಮಾಡಿಕೊಳ್ಳುವರೆಂಬ ನಂಬಿಕೆಯಿದೆ.

ದಿನಾಂಕ : ೨೫-೧೨-೨೦೧೬

ಡಾ|| ಪಿ.ವಿ. ನಾರಾಯಣ
ಅಧ್ಯಕ್ಷರು
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

# ನನ್ನ ಮಾತು

ವಿ.ಎಂ. ಇನಾಂದಾರರ ಶತಮಾನೋತ್ಸವ ಮುಗಿದು ನಾಲ್ಕು ವರ್ಷ ಮುಗಿಯುತ್ತಿರುವ ಈ ಸಂದರ್ಭದಲ್ಲಿ ಅವರ ಬದುಕು-ಬರಹ ಕುರಿತು ಪುಸ್ತಕ ಹೊರಬರುತ್ತಿರುವುದು ಒಂದು ರೀತಿ ವಿಷಾದನೀಯವೇ! ಶತಮಾನೋತ್ಸವ ಸಮಯಕ್ಕೇ ಬಿಡುಗಡೆಯಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ಸಿದ್ಧತೆಗಳು ನಡೆದುವಾದರೂ, ಸಮಯಕ್ಕೆ ಸರಿಯಾಗಿ ಬಾರದೆ ಹೋಗಲು ಹಲವಾರು ಕಾರಣಗಳು, ಅಡಚಣೆಗಳು ಎದುರಾದವು. ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರು, ನೆನಗುದಿಗೆ ಬಿದ್ದಿದ್ದ ಈ ಕೃತಿಯ ಪ್ರಕಟಣೆಯ ಯೋಜನೆಯನ್ನು ಕೈಗೆತ್ತಿಕೊಂಡು, ನನಗೆ ಅವರ ಬದುಕು-ಬರಹ ವ್ಯಕ್ತಿತ್ವ ಕುರಿತ ಒಂದು ಕೃತಿಯನ್ನು ಬರೆದು ಕೊಡಲು ಹೇಳಿದರು. ನನಗೂ ಇದರಿಂದ ಬಹಳ ಸಂತೋಷವಾಯಿತು. ನಾನು ವಿದ್ಯಾರ್ಥಿಯಾಗಿ, ಅಧ್ಯಾಪಕಿಯಾಗಿ ಅವರ ಎಲ್ಲ ಕಾದಂಬರಿಗಳನ್ನು ಓದಿದ್ದೆ. ಅದರಲ್ಲಿಯೂ ಮೋಹಿನಿ, ಚಿತ್ರಲೇಖ, ಊರ್ವಶಿ, ಶಾಪ ಮೊದಲಾದುವಂತೂ ನನ್ನ ಅತ್ಯಂತ ಮೆಚ್ಚುಗೆಯ ಕಾದಂಬರಿಗಳಾಗಿದ್ದವು. ಈಗ ಕೃತಿ ಬರೆಯಬೇಕಾದ ಸಂದರ್ಭದಲ್ಲಿ ಅವರ ಕೃತಿಗಳನ್ನು ಮತ್ತೊಮ್ಮೆ ಓದುವ ಅವಕಾಶ ಸಿಕ್ಕಿತೆಂಬ ಸಂತೋಷದಲ್ಲಿ, ಕೂಡಲೇ ಬರೆಯಲು ಒಪ್ಪಿಕೊಂಡೆ.

ಇನಾಂದಾರರು ಬಹುಮುಖಿ ಪ್ರತಿಭೆ. ಅವರಲ್ಲೊಬ್ಬ ಅಧ್ಯಾಪಕ, ವಿಮರ್ಶಕ, ಕಾವ್ಯ ಮಿಮಾಂಸಕ, ನಾಟಕಕಾರ, ಸೃಜನಶೀಲ ಕಾದಂಬರಿಕಾರ, ವಿಡಂಬನಕಾರ, ಆಡಳಿತಗಾರ, -ಹೀಗೆ ಹತ್ತು ಹಲವಾರು ಪ್ರತಿಭೆಯ ಮುಖಗಳು ಅಡಗಿದ್ದವು. ಅವರ ಸೃಜನಶೀಲ ಬರಹಗಳಿಗೆ ನೈಜ ಬದುಕಿನ ಅನುಭವಗಳೇ ಪ್ರೇರಣೆ. ಒಂದೆಡೆ ಸ್ವಾನುಭವವಾದರೆ, ಜಗತ್ತಿನ ಮೂಲೆ ಮೂಲೆಗಳಲ್ಲಿ ನಡೆಯುವ ಸಂಗತಿಗಳು, ಸ್ಥಿತ್ಯಂತರಗಳು ಮನುಷ್ಯ ಬದಕಿನಲ್ಲಿನ ನೋವು ನಲಿವಿನ ಏರಿಳಿತಗಳು ಬದಲಾಗುವ ಮನುಷ್ಯ ಸ್ವಭಾವಗಳು, ನಮ್ಮ ಪರಂಪರೆ ಸಂಪ್ರದಾಯಗಳಲ್ಲಿನ ನಂಬಿಕೆಗಳು, ಕರ್ಮ ಸಿದ್ಧಾಂತಗಳು, ವಿಧಿಯ ನಿಗೂಢ ಪರಿಣಾಮಗಳು, ಪುನರ್ಜನ್ಮದಲ್ಲಿನ ನಂಬಿಕೆಗಳು ಇತ್ಯಾದಿ ಇತ್ಯಾದಿಗಳೆಲ್ಲವೂ ಅವರ ಬರಹದ ಹಿನ್ನೆಲೆಯ ಚಿಂತನೆಗಳಾಗಿದ್ದವು. ಜೊತೆಗೆ ಆಗ ತಾನೇ ಹೆಣ್ಣಿನ ಮೇಲಿನ ಪುರುಷಾಧಿಕಾರದ ನಿಯಂತ್ರಣಗಳು ಸಡಿಲಗೊಂಡು ಹೆಣ್ಣು ಶಿಕ್ಷಣ, ಉದ್ಯೋಗ

ಕ್ಷೇತ್ರಗಳಲ್ಲಿ ಪ್ರವೇಶ ಪಡೆಯಲು ಆರಂಭಿಸಿದ್ದಳು. ಹಾಗಾಗಿ ಪ್ರಗತಿಪರ ವಿಚಾರವಂತ, ಸ್ವತಂತ್ರ ಮನೋಭಾವದ ಹೆಣ್ಣಿನ ಬದುಕಿನ ಮಗ್ಗುಲುಗಳು, ಸೃಷ್ಟಿಯಾಗುವ ಸಂಘರ್ಷಗಳು ಮುಂತಾದವು ಪ್ರಮುಖವಾಗಿ ಅವರ 'ಮೋಹಿನಿ' ಕಾದಂಬರಿ ಸಂಪುಟಗಳಲ್ಲಿ ಅತ್ಯಂತ ವಿಸ್ತೃತವಾಗಿ ಚರ್ಚೆಗೆ ಒಳಗಾಗಿವೆ. ಪ್ರತಿಯೊಂದು ಕಾದಂಬರಿಯ ಹಿಂದೆ ಒಂದು ಸಿದ್ಧ ಸಂದೇಶ ಕೆಲಸ ಮಾಡಿದೆ. ಆಂಗ್ಲ, ಕನ್ನಡ, ಮರಾಠಿ ಭಾಷೆಗಳ ಮೇಲೆ ಅದ್ಭುತ ಹಿಡಿತವಿರಿಸಿಕೊಂಡಿದ್ದ ಇನಾಂದಾರರಿಗೆ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ ಖಾಂಡೇಕರರ 'ಯಯಾತಿ' ಕಾದಂಬರಿಯನ್ನು ಅತ್ಯಂತ ಸುಲಲಿತವಾಗಿ ಕನ್ನಡಕ್ಕೆ ಅನುವಾದಿಸಿ ಎರಡೂ ಭಾಷೆಯ ಓದುಗರಿಂದ ಅಪಾರ ಮೆಚ್ಚುಗೆ ಗಳಿಸಿಕೊಳ್ಳಲು ಸಾಧ್ಯವಾಯಿತು.

ಕನ್ನಡದಲ್ಲಿ ಬರೆಯುವ ಉದ್ದೇಶವಿಲ್ಲದಿದ್ದರೂ, ಯಾವುದೋ ಒಂದು ಕಾರಣಕ್ಕಾಗಿ, ಸವಾಲಿನಂತೆ, ತೆಗೆದುಕೊಂಡು ನಿರರ್ಗಳವಾಗಿ ಬರೆದು ಕನ್ನಡ ಓದುಗರ ಮೆಚ್ಚಿನ ಲೇಖಕರಾದರು. ಅಷ್ಟೇ ಅಲ್ಲದೆ ಅವರ ಸಮಕಾಲೀನ ಹಿರಿಯ ಲೇಖಕರಾದ ಕಾರಂತ ಕುವೆಂಪು ಮಾಸ್ತಿ, ಅನಕೃ ಮುಂತಾದವರ ಕೃತಿಗಳ ಅಧ್ಯಯನದ ಮೂಲಕ, ಕಾದಂಬರಿಯ ವಸ್ತು, ತಂತ್ರ, ಶೈಲಿ ಕುರಿತಾಗಿ ಚಿಂತನೆ ಮಾಡಿ, ತಮ್ಮದೇ ಆದ ಬರವಣಿಗೆಯ ಅನನ್ಯತೆಯನ್ನು ಸಾಧಿಸಿಕೊಂಡರು. ಪಾಶ್ಚಾತ್ಯ ಕಾವ್ಯ, ಸಾಹಿತ್ಯಗಳ ಅನುಸಂಧಾನ ಅವುಗಳ ಕುರಿತು ಕನ್ನಡ ಕಾವ್ಯ ವಿಮರ್ಶಕರಿಗೆ, ಅಧ್ಯಯನಕಾರರಿಗೆ ಅನುಕೂಲವಾಗುವಂತೆ ತೌಲನಿಕವಾಗಿ ಪಾಶ್ಚಾತ್ಯ ವಿಮರ್ಶೆಯ ಮಜಲುಗಳನ್ನು ಪರಿಚಯಿಸುವ ಬೃಹತ್ ಗ್ರಂಥವನ್ನು ರಚಿಸಿದರು.

ಅಂಗ್ಲ ಶಿಕ್ಷಣ, ಆಂಗ್ಲ ಪ್ರಾಧ್ಯಾಪಕ ವೃತ್ತಿ, ಪಶ್ಚಿಮ ರಾಷ್ಟ್ರಗಳಿಗೆ ಭೇಟಿ, ಪಶ್ಚಿಮ ಸಂಸ್ಕೃತಿ ಕುರಿತ ಚಿಂತನೆಗಳ ನಡುವೆಯೂ ಭಾರತೀಯ ಸಂಸ್ಕೃತಿಯ ಮಹಾನತೆಯನ್ನು, ಯಾವುದೋ ಒಂದು ರೀತಿಯಲ್ಲಿ ವಸ್ತು, ಪಾತ್ರ, ಸನ್ನಿವೇಶ, ಚರ್ಚೆಗಳ ಮೂಲಕ ಎತ್ತಿ ಹಿಡಿಯುತ್ತಿದ್ದರು. ಈ ಹಿನ್ನೆಲೆಯ ಮನೋಭಾವ ವಿದ್ದುದರಿಂದಲೇ ಕಾದಂಬರಿಗಳ ರಚನೆಯ ಮೊದಲಿಗೇ ಸನ್ನಿವೇಶ, ಪಾತ್ರಗಳು ರೂಪುಗೊಳ್ಳುತ್ತಾ, ಲೇಖಕರ ಆಲೋಚನೆಗಳಿಗೆ ಅನುಗುಣವಾಗಿ, ಸ್ವಭಾವ, ಪರಿಸರಗಳು ಮೈ ಪಡೆಯುತ್ತಾ ಹೋಗುತ್ತವೆ. ಕಾದಂಬರಿ ಹುಟ್ಟು, ಬೆಳವಣಿಗೆ ಮುಕ್ತಾಯದ ವಿಚಾರದಲ್ಲಿ ಸ್ಪಷ್ಟವಾದ ರೂಪುರೇಷೆಗಳನ್ನು ನಿರ್ಮಿಸಿಕೊಳ್ಳು ತ್ತಾರಾದರೂ ಕೆಲವೊಮ್ಮೆ, ಕಾದಂಬರಿಯ ಗತಿಶೀಲತೆಯೊಂದಿಗೆ ಆಕಸ್ಮಿಕ ಬದಲಾವಣೆಗಳಾಗುವುದು ಅನಿವಾರ್ಯವಾಗುತ್ತದೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ಪ್ರಯೋಗಶೀಲ ಮನೋಭಾವದೊಂದಿಗೆ ಕೈಯಾಡಿಸಿ, ತಮ್ಮ ಬಹುಮುಖಿ ಬರಹದ ಸಾಮರ್ಥ್ಯವನ್ನು ಸಾರಿ ತೋರಿದ್ದಾರೆ. ಬದುಕಿನ ಎಲ್ಲ ಅನುಭವಗಳಿಗೂ ತಮ್ಮನ್ನು ಒಡ್ಡಿಕೊಂಡು, ಅತ್ಯಂತ ಕ್ರಿಯಾಶೀಲ ವ್ಯಕ್ತಿಯಾಗಿ, ಬರಹಗಾರನಾಗಿ, ಒಳ್ಳೆಯ ಪ್ರಾಧ್ಯಾಪಕರಾಗಿ, ಆಡಳಿತಗಾರರಾಗಿ, ಅಪಾರ ಮನ್ನಣೆ, ಪ್ರೀತಿ ಸ್ನೇಹ ಗಳಿಸಿಕೊಂಡು ಸಾರ್ಥಕ ಜೀವನ ಪಯಣ ಮುಗಿಸಿದ ಇನಾಂದಾರರನ್ನು ಕುರಿತು ಬರೆಯಲು ಹೊರಡುವುದೇ ಒಂದು ಸಾಹಸ.

ಬರೆಯಲು ಒಪ್ಪಿಕೊಂಡೆನಾದರೂ ಅವರ ಕುರಿತ ವಿವರ ಸಂಗ್ರಹಣೆಗೆ ಎಷ್ಟು ಕಷ್ಟದ್ದೆಂಬುದು ಅರಿವಾಯಿತು. ಅವರು ಬದುಕಿದ್ದರೆ, ನೇರ ಸಂಪರ್ಕಿಸಿ, ಸಂದರ್ಶಿಸಿ ವ್ಯಕ್ತಿತ್ವ, ಗುಣ, ಸ್ವಭಾವ, ಮನೋಧರ್ಮಗಳ ಇಣುಕು ನೋಟವನ್ನಾದರೂ ಪಡೆಯಬಹುದಿತ್ತು. ಕೆಲವಾದರೂ ವಾಸ್ತವ ಸಂಗತಿಗಳನ್ನು ದಾಖಲಿಸಬಹುದಾಗಿತ್ತು. ಆದರೆ ಅದ್ಯಾವುದೂ ನನಗೆ ಸಾಧ್ಯವಾಗಲ್ಲ. ಅವರ ಕೃತಿಗಳು, ಅವರ ಕುರಿತಾದ ಲೇಖನಗಳು, ಅವರ ಆಪ್ತರು ದಾಖಲಿಸಿದ ಅವರ ಸ್ವಭಾವ ವ್ಯಕ್ತಿತ್ವಗಳು, ಅವರಿಗೆ ಸಲ್ಲಿಸಿದ ಅಭಿನಂದನಾ ಲೇಖನಗಳು ಅವರು ಆಪ್ತರಿಗೆ, ಅನ್ಯ ಲೇಖಕರಿಗೆ ನೀಡಿದ ಸಂದರ್ಶನಗಳು – ಇವೇ ನನ್ನ ಕೃತಿ ರಚನೆಗೆ ಲಭ್ಯವಾದ ಮಾಹಿತಿಗಳು. ಈ ಮಾಹಿತಿಗಳನ್ನು, ಪುಸ್ತಕಗಳನ್ನು ಒದಗಿಸಿ, ನನಗೆ ಸಹಕರಿಸಿದ ಶ್ರೀ ವೆಂಕಟೇಶಮೂರ್ತಿ, ಎಂ.ವಿ. ಅವರನ್ನು ಮತ್ತು ಇನಾಂದಾರರ ಮಗಳಾದ ಶ್ರೀಮತಿ ಮೀನಾ ವಾಂಗೀಕರ್ ಅವರನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕಾದ್ದು ನನ್ನ ಆದ್ಯ ಕರ್ತವ್ಯ. ಒಂದೇ ಒಂದು ದುರಂತವೆಂದರೆ ಮೀನಾ ವಾಂಗೀಕರ್, ನಾನು ಪುಸ್ತಕವನ್ನು ಬರೆಯುತ್ತಿದ್ದುದನ್ನು ಕೇಳಿ ಬಹಳ ಸಂತೋಷಪಟ್ಟರಲ್ಲದೆ ಪುಣೆಯಿಂದ ಅವರಲ್ಲಿದ್ದ ಇನಾಂದಾರರ ಕೆಲವು ಕೃತಿಗಳನ್ನು ಅಂಚೆಯ ಮೂಲಕ ಕಳಿಸಿಕೊಟ್ಟು ಉಪಕರಿಸಿದವರು, ಈಗ ನಮ್ಮ ನಡುವೆ ಇಲ್ಲವಾಗಿರುವುದು ನನಗೆ ತೀರಾ ದುಃಖವಾಗಿದೆ.

ವಿ.ಎಂ. ಇನಾಂದಾರರಂತಹ ಒಬ್ಬ ಹಿರಿಯ ಲೇಖಕರನ್ನು ಜನಪ್ರಿಯ ಕಾದಂಬರಿಕಾರರನ್ನು ಕುರಿತು ಬರೆಯಲು ಅವಕಾಶ ಕಲ್ಪಿಸಿಕೊಟ್ಟದ್ದೇ ಅಲ್ಲದೆ ಅದನ್ನು ಪ್ರಕಟಿಸುತ್ತಿರುವ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರಿಗೂ, ಪುಸ್ತಕ ಪ್ರಕಟಣಾ ಸಮಿತಿ ಸದಸ್ಯರಿಗೂ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಧನ್ಯವಾದಗಳು
ವಿಜಯ ಸುಬ್ಬರಾಜ್

# ಪರಿವಿಡಿ

# ಪ್ರೊ. ವಿ.ಎಂ. ಇನಾಂದಾರ್ ಬದುಕು – ಬರಹ

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ ಮತ್ತು ಜನಪ್ರಿಯ ಕಾದಂಬರಿಕಾರರೆಂದು ನಲವತ್ತರ ದಶಕದಿಂದ ಗುರುತಿಸಿಕೊಂಡು ಎಂಬತ್ತರ ದಶಕದವರೆಗೂ ನಿರಂತರವಾಗಿ ಬರೆಯುತ್ತಾ ಬಂದವರು ವಿ.ಎಂ. ಇನಾಂದಾರ್. ಚಿತ್ರಲೇಖಾ, ಶಾಪ, ಮೋಹಿನಿ ಕಾದಂಬರಿಗಳು ಪಠ್ಯಗಳಾಗಿದ್ದು ವಿದ್ಯಾರ್ಥಿಗಳ ಮೆಚ್ಚುಗೆ ಪಡೆದದ್ದಲ್ಲದೆ ಜನಸಾಮಾನ್ಯ ಓದುಗರೂ ಕೂಡಾ ಅವರ ಕಾದಂಬರಿಗಳನ್ನು ಸ್ವಾಗತಿಸಿದ್ದುಂಟು. ವೃತ್ತಿಯಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದೂ ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಸಾಕಷ್ಟು ಮನ್ನಣೆಗೆ ಪಾತ್ರರಾಗಿದ್ದರು. ಕಾದಂಬರಿ ಕಾರರೆಂದೇ ಇಂದಿಗೂ ಅವರನ್ನು ಗುರುತಿಸಲಾಗುತ್ತಿದೆಯಾದರೂ ಸಾಹಿತ್ಯದ ಅನ್ಯ ಪ್ರಕಾರಗಳಾದ ನಾಟಕ, ವಿಮರ್ಶೆ, ಅನುವಾದ ಪ್ರಬಂಧ, ಜೀವನ ಚರಿತ್ರೆ, ಕಾವ್ಯ ಮೀಮಾಂಸೆ, ಅಂಕಣ ಬರೆಹ ಇತ್ಯಾದಿಗಳಲ್ಲಿಯೂ ಅವರ ಪ್ರಯೋಗಶೀಲ ಮನಸ್ಸು ಕೆಲಸ ಮಾಡಿ ವಿದ್ವಾಂಸರ ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿದೆ. ಇಂತಹ ಪ್ರಯೋಗಶೀಲ, ಸೃಜನಶೀಲ, ಚಿಂತನಶೀಲ, ವೈಚಾರಿಕ ಪ್ರಬುದ್ಧತೆಯ ಶಿಕ್ಷಣ ತಜ್ಞತೆಯ ವ್ಯಕ್ತಿಯಾಗಿದ್ದ ಇನಾಂದಾರರು ಹುಟ್ಟಿದ್ದು ಬೆಳಗಾವಿ ಜಿಲ್ಲೆಯ ಹುದಲಿಯಲ್ಲಿ. ೧ನೇ ಅಕ್ಟೋಬರ್ ೧೯೧೨ರಂದು. ಇವರ ತಂದೆ ಮಧ್ವರಾಯರು ಬಿಜಾಪುರದ ಪೋಸ್ಟ್ ಆಫೀಸಿನಲ್ಲಿ ದೀರ್ಘ ಕಾಲ ಸೇವೆ ಸಲ್ಲಿಸಿ ನಿವೃತ್ತರಾದವರು. ತಾಯಿ ಕಮಲಮ್ಮನವರು ಬಹಳ ಒಳ್ಳೆಯ ವಂಶದಿಂದ ಬಂದವರು. ಸ್ವಾತಂತ್ರ್ಯ ಹೋರಾಟಗಾರ, ಕರ್ನಾಟಕ ಕೇಸರಿ ಎಂದು ಕರೆಸಿಕೊಂಡಿದ್ದ ಗಂಗಾಧರರಾವ್ ದೇಶಪಾಂಡೆಯವರಿಂದಾಗಿ ಖ್ಯಾತಿಯನ್ನು ಪಡೆದಿದ್ದ ದೇಶಪಾಂಡೆ ಮನೆತನದವರು. ಇವರಿಗೆ ಮೂವರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು, ಮೂವರಲ್ಲಿ ಹಿರಿಯರೇ ವೆಂಕಟರಾಯರು.

ತಾಯಿ ದೇಶಪಾಂಡೆ ಮನೆತನದವರಾದರೆ, ತಂದೆಯ ಪೂರ್ವಿಕರು ಆಂಧ್ರದ ಕಡೆಯಿಂದ ಬಂದವರಾದ್ದರಿಂದ ಬಹುಶಃ ವೆಂಕಟೇಶ ಎಂಬ ಹೆಸರನ್ನು ಪ್ರೀತಿಯಿಂದ ಇವರಿಗೆ ಇಟ್ಟಿರಬೇಕು. ಇನಾಂದಾರರ ತಂದೆಯ ತಾತ ಬ್ರಿಟಿಷ್ ಸರಕಾರದಲ್ಲಿ ದೊಡ್ಡ ಹುದ್ದೆಯಲ್ಲಿದ್ದು ನಿವೃತ್ತರಾದವರು. ಧಾರವಾಡದಲ್ಲಿ ನ್ಯಾಯಾಧೀಶರಾಗಿದ್ದ ಕಾಲದಲ್ಲಿ ಅವರು ಕಟ್ಟಿಸಿದ ಬಾವಿ ಈಗಲೂ ಜಡ್ಜಿ

ಬಾವಿ ಎಂದು ಉಳಿದಿದೆಯಂತೆ. ಇವರಿಗೆ ವೆಂಕಟರಾಯ ಎಂಬ ಹೆಸರು ಬರಲು ಇವರ ಮುತ್ತಾತನ ಹೆಸರೇ ಕಾರಣವಾಗಿರಬೇಕು.

ಮೊದಲಿಗೆ ಎರಡೂ ಮನೆತನಗಳು (ಇನಾಂದಾರ ಮನೆತನ ಮತ್ತು ದೇಶಪಾಂಡೆ ಮನೆತನ) ಸಾಕಷ್ಟು ಆಸ್ತಿಪಾಸ್ತಿ ಹೊಂದಿದ್ದರೂ ಕಡೆ ಕಡೆಗೆ ಅದೆಲ್ಲ ಕರಗಿ ಹೆಸರು ಮಾತ್ರವೇ ಅವರ ಪಾಲಿನ ಆಸ್ತಿಯಾಗಿ ಉಳಿದಿತ್ತು. ಆದರೆ ಇವರ ತಂದೆ ತಾಯಿಗಳಿಗೆ ಮಗನನ್ನು ಚೆನ್ನಾಗಿ ಓದಿಸಿ ವಿದ್ಯಾವಂತನನ್ನಾಗಿ ಮಾಡಿ ಒಳ್ಳೆಯ ಹುದ್ದೆಯಲ್ಲಿ ಇರುವುದನ್ನು ನೋಡಬೇಕೆಂಬ ಆಸೆ. ಅದಕ್ಕಾಗಿಯೇ ಸಾಕಷ್ಟು ಕಷ್ಟಪಟ್ಟು ದುಡಿದರು. ಜೊತೆಗೆ ಇನಾಂದಾರರು ಬಾಲ್ಯದಿಂದಲೂ ಬಹಳ ಬುದ್ಧಿವಂತರಾಗಿದ್ದರು. ಕಷ್ಟಪಟ್ಟು ಓದುತ್ತಿದ್ದರು.

ಅವರ ವಿದ್ಯಾಭ್ಯಾಸ ಒಂದು ಕಡೆ ಎಂಬುದಾಗಿರಲಿಲ್ಲ. ಪ್ರಾಥಮಿಕ ಶಿಕ್ಷಣ ತಾಯಿಯ ತವರಾದ ಹುದಲಿಯಲ್ಲಿ ಸುಮಾರು ೧೯೨೨ರವರೆಗೆ ನಡೆಯಿತು. ಸಣ್ಣ ಹಳ್ಳಿ ಚೆಲುವಾದ ವಾತಾವರಣ ಅವರ ಮನಸ್ಸಿಗೆ ಆಹ್ಲಾದವನ್ನು ಕೊಟ್ಟಿತ್ತು. ಇವರು ಅಜ್ಜ ಅಜ್ಜಿಯರ ಮುದ್ದಿನ ಮೊಮ್ಮಗನಾಗಿ ಅವರ ಮನಸ್ಸಿಗೆ ಮುದ ನೀಡಿದ್ದರು.

ಮುಂದೆ ಮಾಧ್ಯಮಿಕ ವಿದ್ಯಾಭ್ಯಾಸವನ್ನು ಬೆಳಗಾವಿಯಲ್ಲಿ ಮುಗಿಸಿ ಪ್ರೌಢ ಶಿಕ್ಷಣಕ್ಕಾಗಿ ಅಥಣಿ ಮತ್ತು ಬಿಜಾಪುರಗಳಿಗೆ ಹೋದರು. ಆಗ ತಂದೆಗೆ ಬಿಜಾಪುರದಲ್ಲೇ ಕೆಲಸವಿತ್ತು. ೧೯೩೦ರಲ್ಲಿ ಮೆಟ್ರಿಕ್ ಪಾಸಾದರು. ಆ ಕಾಲದಲ್ಲಿ ಒಂದೇ ಸಲಕ್ಕೆ ಮೆಟ್ರಿಕ್ ಪಾಸಾಗುವುದು ದೊಡ್ಡ ಸಾಹಸವೆಂದೇ ಪರಿಗಣಿಸಲಾಗಿತ್ತು. ಎಷ್ಟೋ ಜನ ತಂದೆ ತಾಯಿಯರು ತಮ್ಮ ಮಕ್ಕಳು ಮೆಟ್ರಿಕ್ಕನ್ನೂ ಮುಗಿಸಲಾಗದ್ದನ್ನು ಕಂಡು ಬಹಳ ನಿರಾಶೆಗೊಂಡಿದ್ದರು. ಅಪರೂಪಕ್ಕೆ ಒಂದಿಬ್ಬರು ಪಾಸಾಗಿದ್ದರೆ, ಮುಂದೆ ಕಾಲೇಜಿಗೆ ಕಳಿಸಬೇಕೆಂದು ಆಲೋಚಿಸದೆ ಅಷ್ಟಕ್ಕೇ ತೃಪ್ತರಾಗುತ್ತಿದ್ದರು. ಆಗಿನ ಕಾಲದಲ್ಲಿ ಜೀವನ ಸಾಗಿಸುವುದೇ ಕಷ್ಟವಾಗಿತ್ತು. ಹೆಣ್ಣುಮಕ್ಕಳ ಮದುವೆಯ ಖರ್ಚಿನ ಹೊರೆಯ ಜೊತೆಗೆ ಓದಿನ ಖರ್ಚನ್ನು ನಿಭಾಯಿಸುವುದು ಕನಸು ಮನಸಿನಲ್ಲಿಯೂ ಸಾಧ್ಯವಿರಲಿಲ್ಲ. ಆದ್ದರಿಂದ ಮೆಟ್ರಿಕ್ ಮುಗಿಯುತ್ತಿದ್ದಂತೆ ಮಕ್ಕಳನ್ನು ಉದ್ಯೋಗದತ್ತ ದೂಡುತ್ತಿದ್ದರು. ಆದರೆ ಮಾಧ್ವರಾಯರು ಸಾಂಸಾರಿಕ ಸಮಸ್ಯೆಗಳಿಂದಾಗಿ ಮಗನ ಭವಿಷ್ಯಕ್ಕೆ ಅಡ್ಡಿ ಮಾಡುವುದು ಸರಿಯಲ್ಲವೆನಿಸಿ ಕಷ್ಟದ ನಡುವೆಯೂ ಮಗನನ್ನು ಕಾಲೇಜಿಗೆ ಸೇರಿಸಿದರು. ಇದರಿಂದ ನೆರೆಹೊರೆಯವರಲ್ಲಿ ಕೆಲವರು ಅಚ್ಚರಿಪಟ್ಟರೆ ಮತ್ತೆ ಕೆಲವರು ಅಸೂಯೆಪಟ್ಟರು. ಇನ್ನು ಕೆಲವರಂತೂ “ಇನ್ನೇನು ಇನಾಂದಾರರ ಮಗ ಪಿ.ಸಿ.ಎಸ್. ಪಾಸು ಮಾಡಿ ಬರುತ್ತಾನೆ. ಆಮೇಲೆ ಇನಾಂದಾರರನ್ನು ಮಾತಾಡಿಸುವುದು ಸಾಧ್ಯವೇ,

ಎಂದು ಕಟಕಿಯಾಡಿದ್ದೂ ಉಂಟಂತೆ. ಏನೇ ಆದರೂ, ಯಾರು ಎಷ್ಟೇ ಟೀಕಸಿದರೂ ವಿಚಲಿತರಾಗದ ತಂದೆ-ತಾಯಿ ಮಗನ ಓದಿಗೆ ಬೆಂಬಲವಾಗಿ ನಿಂತರು. ತಾಯಿಗಂತೂ ಮಗನ ಮೇಲೆ ಅಪಾರ ಭರವಸೆ ಮತ್ತು ಹೆಮ್ಮೆ.

ಕಾಲೇಜು ಓದೆಂದರೆ ಧಾರವಾಡಕ್ಕೇ ಹೋಗಬೇಕಾಯಿತು. ಧಾರವಾಡಕ್ಕೆ ಮಗನನ್ನು ಕಳಿಸುವುದೆಂದರೆ, ವಿದೇಶಕ್ಕೆ ಕಳಿಸಿದಂತೆ ಎಂಬುದು ಆಕೆಯ ಭಾವನೆ.

ಕಾಲೇಜು ಓದು ಸಾಮಾನ್ಯವಾದುದಲ್ಲ. ಆದ್ದರಿಂದ ಇನಾಂದಾರರ ಓದಿನ ಬಗ್ಗೆ ಮನೆಯಲ್ಲಿ ಎಲ್ಲರಿಗೂ ಹೆಮ್ಮೆ, ಎಷ್ಟೊಂದು ಪುಸ್ತಕಗಳು ಎಂದು ಅಚ್ಚರಿಪಡುತ್ತಿದ್ದರು. ರಜೆಯ ದಿನಗಳಲ್ಲಿ ಮನೆಗೆ ಬಂದಾಗ ಎಲ್ಲರಿಗೂ ಸಂಭ್ರಮವೋ ಸಂಭ್ರಮ. ಇವರಿಗೆ ವಿಶೇಷ ಗಮನ. ಇವರು ಟ್ರಂಕಿನಲ್ಲಿ ತುಂಬಿಸಿಕೊಂಡು ಬರುತ್ತಿದ್ದ ಪ್ರತಿಯೊಂದು ವಸ್ತುವನ್ನೂ ಪರೀಕ್ಷಿಸಿ ನೋಡುವ ಕುತೂಹಲ ಉಳಿದವರಿಗೆ. ಇನಾಂದಾರರೂ ಕೂಡಾ ತಮ್ಮ ತಂಗಿಯರೊಂದಿಗೆ ಬಹಳ ಸಲುಗೆಯಿಂದಲೇ ವರ್ತಿಸುತ್ತಿದ್ದರು. ಇದರ ನಡು ನಡುವೆ ತಾವು ಓದಿ ಮೆಚ್ಚಿಕೊಂಡಿದ್ಧ ಕಥೆ, ಕಾದಂಬರಿ, ನಾಟಕಗಳನ್ನು ಓದಿ ಹೇಳುವುದು, ಕಥೆ ಕಟ್ಟಿ ಅವರನ್ನು ರಂಜಿಸುವುದು ಮುಂತಾದ ಚಟುವಟಿಕೆಗಳಲ್ಲಿ ಸಮಯ ಕಳೆಯುತ್ತಿದ್ದರು. ಸ್ನೇಹಪರತೆ, ವಿನೋದಪರತೆ ಅಂದಿನ ದಿನಗಳಲ್ಲಿ ಇವರ ವ್ಯಕ್ತಿತ್ವದ ಭಾಗವಾಗಿತ್ತು.

ಬಿಜಾಪುರದಲ್ಲಿ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಶಿವಣಗಿ ಎಂಬ ಮಾಸ್ತರರ ಪ್ರಭಾವ ಅವರ ಮೇಲೆ ದಟ್ಟವಾಗಿದ್ದು, ಸಾಹಿತ್ಯದ ಕಡೆಗೆ ಒಲವನ್ನು ಬೆಳೆಸಿಕೊಂಡರು. ಸಂಸ್ಕೃತ-ಇಂಗ್ಲಿಷ್ ಸಾಹಿತ್ಯದ ಬಗ್ಗೆ ಅವರ ಆಸಕ್ತಿ ದಿನೇ ದಿನೇ ಹೆಚ್ಚಾಗುತ್ತಾ ಹೋಗುತ್ತಿತ್ತು. ಎಷ್ಟರಮಟ್ಟಿಗೆ ಇವರ ಸಾಹಿತ್ಯದ ಆಸಕ್ತಿ ಬೆಳೆಯಿತೆಂದರೆ ಧಾರವಾಡದ ಕರ್ನಾಟಕ ಕಾಲೇಜು ಮತ್ತು ಮುಂಬಯಿಯ ಎಲ್ಫಿನ್‌ಸ್ಟನ್ ಕಾಲೇಜುಗಳಲ್ಲಿ ಓದುವುದಕ್ಕೆ ಇಂಗ್ಲಿಷ್-ಸಂಸ್ಕೃತಗಳಲ್ಲಿ, ಇಂಗ್ಲಿಷ್ ಸಾಹಿತ್ಯವನ್ನು ಐಚ್ಛಿಕವಾಗಿ ಆಯ್ದುಕೊಂಡರು. ೧೯೩೪ರಲ್ಲಿ ಕರ್ನಾಟಕ ಕಾಲೇಜಿಂದ ಬಿ.ಎ. ಆನರ್ಸ್ ಪದವಿ ಪಡೆಯುವುದರ ಜೊತೆಗೆ ಇಂಗ್ಲಿಷಿನಲ್ಲಿ ಚಿನ್ನದ ಪದಕವನ್ನು ಗಳಿಸಿದರು. ಈ ಕಾಲೇಜಿನಲ್ಲಿ ಇವರಿಗೆ ಮತ್ತೊಂದು ವರದಾನವೂ ಸಿಕ್ಕಿತು. ಇಲ್ಲಿ ಓದುತ್ತಿದ್ದಾಗ ಸಂಸ್ಕೃತವನ್ನು ಬೋಧಿಸುತ್ತಿದ್ದ ಆದ್ಯರಂಗಾಚಾರ್ಯರ (ಶ್ರೀರಂಗರ) ಪರಿಚಯವು ಸಾಧ್ಯವಾಯಿತು. ಶ್ರೀರಂಗರ ನಾಟಕ ಚಟುವಟಿಕೆಗಳಿಂದ ಸಾಕಷ್ಟು ಪ್ರಭಾವಿತರಾಗಿ ತಾವೂ ಸಹ ಆ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಿದ್ದರು.

ಇದೇ ಶ್ರೀರಂಗರು ಇವರನ್ನು ನಾಟಕಗಳತ್ತ ಸೆಳೆದಿದ್ದರ ಜೊತೆಗೆ ಇಂಗ್ಲಿಷ್ ಸಾಹಿತ್ಯದ ರುಚಿಯನ್ನೂ ಹಚ್ಚಿದರು. ಸಂಸ್ಕೃತದ ಮೇಲೂ ಇನಾಂದಾರರ ಆಸಕ್ತಿ ಇತ್ತಾದರೂ, ಅದನ್ನೇ ಜೀವನೋಪಾಯ ಮಾರ್ಗವಾಗಿಸಲು ಸಾಧ್ಯವಿಲ್ಲವೆಂದು ಮನವರಿಕೆ ಮಾಡಿ ಇಂಗ್ಲೀಷ್ ಅಭ್ಯಾಸದಲ್ಲೇ ಹೆಚ್ಚಿಗೆ ತೊಡಗಿಸಿಕೊಳ್ಳುವಂತೆ ಬುದ್ಧಿ ಹೇಳಿದರು. ತಾವು ತಮ್ಮ ಅನುಭವದ ಮೂಲಕವಾಗಿ ಕಂಡುಕೊಂಡ ಸತ್ಯವನ್ನು ಮನದಟ್ಟು ಮಾಡಿಸಿ, ಸಂಸ್ಕೃತವನ್ನು ಬೇಕಾದರೆ ಸ್ವಾಧ್ಯಾಯದ ಮೂಲಕ ಇನ್ನಷ್ಟು ಪರಿಣತಿ ಪಡೆಯಲು ಮತ್ತು ಇಂಗ್ಲೀಷನ್ನು ಗಂಭೀರವಾಗಿ ಅಧ್ಯಯನ ಮಾಡಲು ಸಲಹೆ ನೀಡಿದರು.

ವಿಧೇಯ ವಿದ್ಯಾರ್ಥಿಯಂತೆ ಅವರ ಮಾತುಗಳನ್ನು ಇನಾಂದಾರ್ ಅನುಸರಿಸಿದರು. ಇಂಗ್ಲಿಷ್ ಸಾಹಿತ್ಯಮುಖಿಯಾಗಿ ಆಳವಾದ ಅಧ್ಯಯನದತ್ತ ಹೊರಳಿದರಾದರೂ ಅವರೊಳಗಿನ ನಾಟಕಾಸಕ್ತಿ ಜೀವಂತವಾಗಿತ್ತು. ಅಭಿನಯ ರೂಢಿಸಿಕೊಳ್ಳುವುದರ ಜೊತೆಗೆ ನಾಟಕ ರಚನೆಗೂ ಮುಂದಾದರು. ಶ್ರೀರಂಗರ ಪ್ರಬಲ ಪ್ರೇರಣೆಯಿಂದ, ಕನ್ನಡದಲ್ಲಿ ನಾಟಕ ರಚನೆ ಅಪರೂಪವಾಗಿದ್ದ ಕಾಲದಲ್ಲಿ (ಕೆಲವರನ್ನು ಹೊರತುಪಡಿಸಿ) ತಾವೂ 'ಬಿಡುಗಡೆ' ಎಂಬ ನಾಟಕವೊಂದನ್ನು ರಚಿಸಿದರು. ಮೊದಲ ಪ್ರಯತ್ನವಾಗಿ ರಚಿಸಿದ ಈ ನಾಟಕವನ್ನು ಮುಂಬಯಿ ಸರಕಾರ ಆ ವರ್ಷದ ಅತ್ಯುತ್ತಮ ನಾಟಕವೆಂದು ಪರಿಗಣಿಸಿ ಬಹುಮಾನವನ್ನು ನೀಡಿತು. ೧೯೩೫ರಲ್ಲಿ ರಚಿತವಾದ ಈ ನಾಟಕದ ಬಗ್ಗೆ ಶ್ರೀರಂಗರದೇ ವಿಮರ್ಶೆ ೧೯೫೮ರಲ್ಲಿ ಆಕಾಶವಾಣಿಯ ಮೂಲಕ ಪ್ರಸಾರವಾಯಿತು.

ಎಲ್ಲರ ನಿರೀಕ್ಷೆಯಂತೆ, ಆಸೆಯಂತೆ ವಿದ್ಯಾಭ್ಯಾಸವೇನೋ ಮುಗಿಯಿತು. ಎಲ್ಲ ಕಾಲದಲ್ಲೂ ಎದುರಾಗುವಂತೆ ವಿದ್ಯಾಭ್ಯಾಸ ಮುಗಿಯುತ್ತಿದ್ದಂತೆ ಉದ್ಯೋಗದ ಸಮಸ್ಯೆ ಕಾಡುತ್ತದೆ. ಉದ್ಯೋಗ ದೊರಕಿಸಿಕೊಳ್ಳಬೇಕಾದರೆ, ಆಯ್ಕೆ ಎಂಬುದು ಇರುವುದಿಲ್ಲ. ಯಾವ ಕೆಲಸ ಸಿಕ್ಕಿದರೂ ಸೈ ಎಂದು ಸೇರುವ ಕಾಲ. ಅಂತೂ ಇಂತೂ ಇವರು ಬಿಜಾಪುರದ ಸಿವಿಲ್ ಕೋರ್ಟಿನಲ್ಲಿ ೧೯೩೫ರಲ್ಲಿ ಆಕ್ಸ್‌ಫರ್ಡ್‌ನಿಂದ ಎಂ.ಎ. ಪಡೆದಿದ್ದ ಎ.ಜಿ. ವೇಲ್ಸ್ ಎಂಬ ನ್ಯಾಯಾಧೀಶರ ಕೈ ಕೆಳಗೆ ದುಭಾಷಿಯಾಗಿ ಸುಮಾರು ಆರು ವರ್ಷಗಳ ಕಾಲ ಕೆಲಸ ಮಾಡಿದರು. ಆಂಗ್ಲ ಭಾಷೆಯ ಮೇಲಿದ್ದ ಪ್ರಭುತ್ವವೇ ನಲವತ್ತೈದು ಮಂದಿ ಅಭ್ಯರ್ಥಿಗಳ ಮಧ್ಯೆ ಕೆಲಸ ಕೊಡಿಸಿತು. ಈ ಕೆಲಸಕ್ಕೆ ಅವರಿಗೆ ದೊರೆಯುತ್ತಿದ್ದುದು ಕೇವಲ ೫೦ ರೂ. ಸಂಬಳ. ಉದ್ಯೋಗವೇನೋ ದೊರೆಯಿತು. ಆ ಸಂಬಳದಲ್ಲಿ ಹೇಗೋ ಜೀವನವನ್ನೂ ಸಾಗಿಸಬಹುದಾಗಿತ್ತು. ಆದರೆ ಮಾಡುತ್ತಿರುವ ಕೆಲಸದಲ್ಲಿ ತೃಪ್ತಿ ಇರಲಿಲ್ಲ. ಅದೊಂದು ಬಗೆಯ ನಿರ್ಜೀವ ವೃತ್ತಿ. ಯಾಂತ್ರಿಕತೆ, ಏಕತಾನತೆ,

ನೀರವತೆಗಳು ಮನಸ್ಸಿಗೆ ಬೇಸರ ತರುತ್ತಿದ್ದುದು ಒಂದು ಕಡೆಯಾದರೆ, ದಿನನಿತ್ಯವೂ ಕೋರ್ಟಿಗೆ ಬರುತ್ತಿದ್ದ ಮೊಕದ್ದಮೆಗಳ ಮೂಲಕ ಪ್ರಪಂಚದಲ್ಲಿ ನಡೆಯುತ್ತಿದ್ದ ಮೋಸ, ವಂಚನೆ, ಅನ್ಯಾಯ, ದೌರ್ಜನ್ಯ, ಅಮಾನುಷತೆಗಳು ಸಂವೇದನಾಶೀಲ ಮನಸ್ಸಿಗೆ ತುಂಬ ಹಿಂಸೆಯಾಗಿ ಕಾಡುತ್ತಿತ್ತು. ಆದ್ದರಿಂದ ಅವರ ಕೈಲಿದ್ದ ಉದ್ಯೋಗದಲ್ಲಿ ಮುಂದುವರೆಯುವುದು ಅವರಿಗೆ ಸಾಧ್ಯವೇ ಆಗಲಿಲ್ಲ. ೧೯೪೦ರಲ್ಲಿ ರಾಜೀನಾಮೆ ನೀಡಿದರಾದರೂ ಮುಂದೆ ಇಲ್ಲಿ ಪಡೆದ ಅನುಭವಗಳನ್ನು ಸೃಜನಶೀಲ ಬರವಣಿಗೆಯಲ್ಲಿ ಅಚ್ಚುಕಟ್ಟಾಗಿ ಯಥಾರ್ಥವೆನಿಸುವ ರೀತಿಯಲ್ಲಿ ಬಳಸಿಕೊಂಡರು.

ಮೊದಲಿನಿಂದಲೂ ಅಧ್ಯಯನದಾಹಿಯಾಗಿದ್ದ ಇವರಿಗೆ ಮುಂದೆ ಓದಿ ಉನ್ನತ ಪದವಿ (degree) ಪಡೆಯಬೇಕೆಂಬ ಅದಮ್ಯ ಹಂಬಲದಿಂದ ಮುಂಬಯಿನ ಎಲ್ಫಿನ್‌ಸ್ಟನ್ ಕಾಲೇಜು ಸೇರಿದರು. ಅಲ್ಲಿ ೧೯೪೧ರಲ್ಲಿ ಇಂಗ್ಲಿಷಿನಲ್ಲಿ ಎಂ.ಎ. ಮಾಡಿದ್ದರ ಜೊತೆಗೆ ಅವರೊಳಗಿದ್ದ ಬರಹಗಾರ ಅಥವಾ ಸೃಜನಶೀಲತೆ ಹೊರಹೊಮ್ಮುವುದಕ್ಕೆ ಅಣಿಯಾಯಿತು. ಕಾಲೇಜು ಮ್ಯಾಗ್‌ಜಿನ್‌ಗಾಗಿ ದೀರ್ಘ ಲೇಖನಗಳನ್ನು ಬರೆದರು. ಸಂಸ್ಕೃತ ಸಾಹಿತ್ಯದ ಆಳವಾದ ಜ್ಞಾನ ಇದ್ದುದರಿಂದ ಮತ್ತು ಕಾಳಿದಾಸನ ನಾಟಕ ಸಾಹಿತ್ಯವನ್ನು ವಿಶೇಷವಾಗಿ ಓದಿಕೊಂಡಿದ್ದರಿಂದ "The Moral problem in Shakunthala" ಲೇಖನವನ್ನು ಬರೆದರು. ಮತ್ತೆ ೧೯೩೬ರಲ್ಲಿ "Heroins in Sanskrit Drama' ಎಂಬ ಪ್ರೌಢ ಪ್ರಬಂಧವನ್ನು ಬರೆದು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾದದ್ದೇ ಅಲ್ಲದೆ ಬೊಂಬಾಯಿ ವಿಶ್ವವಿದ್ಯಾಲಯದ ಮಾಂಡಲಿಕ ಚಿನ್ನದ ಪದಕವನ್ನೂ ಗಳಿಸಿಕೊಟ್ಟಿತು. ಕಾಲೇಜಿನಲ್ಲಿದ್ದಾಗ ಬರೆದಿದ್ದ "Moral problem in Shankunthala" ಪ್ರಬಂಧ ಮುಂದೆ ತ್ರಿವೇಣಿ ಪತ್ರಿಕೆಯಲ್ಲಿ ಪ್ರಕಟವಾಗಿ, ಅದರ ಸಂಪಾದಕರಾದ ರಾಮಕೋಟೀಶ್ವರರಾಯರು ಬಹಳವಾಗಿ ಆ ಲೇಖನವನ್ನು ಮೆಚ್ಚಿ ಕೊಂಡಾಡಿದ್ದೇ ಅಲ್ಲದೆ, ತಮ್ಮ ಮೆಚ್ಚಿಗೆಯ ಕುರುಹಾಗಿ ತಾವು ಹೊದ್ದಿದ್ದ ರೇಶಿಮೆಯ ಶಲ್ಯವನ್ನು ಇನಾಂದಾರರಿಗೆ ಹೊದಿಸಿಬಿಟ್ಟರಂತೆ. ಹಾಗೆ ಬಂದ ಶಲ್ಯವನ್ನು ಇವರು ಕಡೆತನಕ ಜತನದಿಂದ ಕಾಪಾಡಿಕೊಂಡು ಬಂದದ್ದೇ ಅಲ್ಲದೆ ಅದರ ಬಗ್ಗೆ ಅತಿಯಾದ ಪ್ರೀತಿ, ಗೌರವವನ್ನು ಇರಿಸಿಕೊಂಡಿದ್ದರಂತೆ. ಇದರಿಂದ ಉತ್ತೇಜನ ಪಡೆದು Vidushaka in Sanskrit Drama ಎನ್ನುವ ಪುಸ್ತಕ ಬರೆದು ಭಾರತೀಯ ವಿದ್ಯಾಭವನದ ಸುವರ್ಣ ಪದಕವನ್ನು ಗಳಿಸಿದರು.

ಓದಿನ ಜೊತೆ ಜೊತೆಗೆ ಹಲವು ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವುದನ್ನೂ ರೂಡಿಸಿಕೊಂಡರು. ಆದರೆ ಬರವಣಿಗೆಗೂ ಮೊದಲು ಒಂದು ಶಾಶ್ವತವಾದ ಉದ್ಯೋಗ ನೆಲೆಯನ್ನು ಕಂಡುಕೊಳ್ಳಬೇಕಾಗಿತ್ತು. ಜಯಂತಿ ಪತ್ರಿಕೆಯಲ್ಲಿ 'ವಿಹಾರಿ' ಹೆಸರಿನಲ್ಲಿ ಸಾಹಿತ್ಯ ವಿಹಾರಕ್ಕೆ ಅಂಕಣಗಳನ್ನು

ಬರೆಯುವುದರ ಜೊತೆಗೆ ತ್ರಿವೇಣಿ, ಜಯಂತಿ, ಪೆನ್ ಸಂಸ್ಥೆ ಪ್ರಕಟಿಸುತ್ತಿದ್ದ 'ಆರ್ಯನ್ ಪಾಥ್' ಮತ್ತು 'ಇಂಡಿಯನ್ ಪೆನ್ (PEN) ಪತ್ರಿಕೆಗಳಿಗೆ ಪುಸ್ತಕಾವಲೋಕನ ಬರೆಯುತ್ತಿದ್ದರು. ನಂತರ ಒಂದೆರಡು ವರ್ಷ ಕಾಲ ಪತ್ರಿಕೆಗಳ ಸಂಪಾದಕ ಸಹಾಯಕರಾಗಿ ಕೆಲಸ ಮಾಡಿದರು.

ಮುಂದೆ ಅವರು ೧೯೪೩ರಲ್ಲಿ ಮುಂಬಯಿಯ ಸಿಡ್ನಿಹ್ಯಾಂ ಕಾಲೇಜಿನಲ್ಲಿ ಕೆಲ ಕಾಲ ಅರೆಕಾಲಿಕ ಇಂಗ್ಲಿಷ್ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದು ಕಡೆಗೆ ಪೂರ್ಣಾವಧಿ ಉಪನ್ಯಾಸಕರಾಗಿ ನೇಮಕಗೊಂಡರು. ಅಲ್ಲಿಂದ ಮತ್ತೆ ಧಾರವಾಡದ ಕರ್ನಾಟಕ ಕಾಲೇಜಿಗೆ ವರ್ಗಾವಣೆ ಆದರು. ಅಂದು ಅದು ಮುಂಬಯಿ ಪ್ರೆಸಿಡೆನ್ಸಿಗೆ ಒಳಪಟ್ಟಿತ್ತು.

೧೯೪೭-೫೦ರವರೆಗೆ ಧಾರವಾಡದಲ್ಲಿದ್ದು, ೧೯೫೦-೫೨ರ ತನಕ ಅಹಮ್ಮದಾಬಾದಿನ ಗುಜರಾಥ ಕಾಲೇಜಿಗೆ ಉಪಪ್ರಾಧ್ಯಾಪಕರಾಗಿ ಬಡ್ತಿ ಪಡೆದು ಕೆಲಸ ಮಾಡಿದರು. ೧೯೫೨ರಿಂದ ಮತ್ತೆ ಧಾರವಾಡಕ್ಕೆ ಮರಳಿ ೫೮ರ ತನಕ ಕರ್ನಾಟಕ ಕಾಲೇಜಿನಲ್ಲಿಯೂ ಉಪ ಪ್ರಾಧ್ಯಾಪಕರಾಗಿ ಮುಂದುವರೆದು ೫೮-೬೦ರವರೆಗೆ ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ವೈಸ್ ಪ್ರಿನ್ಸಿಪಾಲರಾಗಿ, ೧೯೬೦-೬೭ರವರೆಗೆ ಉಡುಪಿಯ ಪೂರ್ಣಪ್ರಜ್ಞಾ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಬಡ್ತಿ ಪಡೆದರು. ಮುಂದೆ ಅದೇ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿಯೂ ಕೆಲಸ ಮಾಡಿದರು. ಕಡೆಯಲ್ಲಿ ೧೯೬೮ರಲ್ಲಿ ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿನಲ್ಲಿ ಒಂದು ವರ್ಷ ಕೆಲಸ ಮಾಡಿ ಸೇವಾ ನಿವೃತ್ತಿಯನ್ನು ಪಡೆದರು. ನಂತರ ಯುಜಿಸಿ ಗೌರವ ಪ್ರಾಧ್ಯಾಪಕರಾಗಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ೬೮-೭೦ರವರೆಗೆ ಎರಡು ವರ್ಷ ಕೆಲಸ ಮಾಡಿ ನಿವೃತ್ತಿ ಪಡೆಯುತ್ತಿದ್ದಂತೆಯೇ ಬ್ರಿಟಿಷ್ ಕೌನ್ಸಿಲ್‌ನ ಆಂಶಿಕ ಸಹಾಯದಿಂದ ಇಂಗ್ಲೆಂಡ್ ಮತ್ತು ಅಮೆರಿಕಕ್ಕೆ ಅಧ್ಯಯನಕ್ಕೆ ತೆರಳಿದರು.

ನಿರಂತರವಾಗಿ ಮೂರು ದಶಕಗಳಿಗೂ ಹೆಚ್ಚಾಗಿ ಶಿಕ್ಷಣ ಕ್ಷೇತ್ರದಲ್ಲಿ ಉಪನ್ಯಾಸಕರಾಗಿ, ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಹಲವು ನೆಲೆಗಳಲ್ಲಿ ಕೆಲಸ ಮಾಡಿದ ಇನಾಂದಾರರಿಗೆ ಶಿಕ್ಷಣ ವ್ಯವಸ್ಥೆಯ ಬಗ್ಗೆ, ವಿದ್ಯಾರ್ಥಿಗಳ ಮನೋಧರ್ಮದ ಬಗ್ಗೆ ಆಳವಾದ ಅರಿವಿತ್ತು. ವಿದ್ಯಾರ್ಥಿಗಳಲ್ಲಿ ತಾವಿರುವಂತೆ ಹೆಚ್ಚಿನ ಶಿಸ್ತನ್ನು ನಿರೀಕ್ಷಿಸುತ್ತಿದ್ದು, ಅದನ್ನು ತರಲು ಸಾಕಷ್ಟು ಪ್ರಯತ್ನಿಸಿದ್ದೂ ಉಂಟು. ಶಿಸ್ತು, ಸಂಯಮ, ಸಮಯಪಾಲನೆ, ಕಾರ್ಯಬದ್ಧತೆ ಮುಂತಾದವುಗಳನ್ನು ಅವರು ಯಾವುದೇ ಕ್ಷೇತ್ರದಿಂದಾಗಲಿ ನಿರೀಕ್ಷಿಸುತ್ತಿದ್ದರು. ■

# ವ್ಯಕ್ತಿತ್ವ ಮತ್ತು ಸ್ನೇಹ ಸಂಬಂಧಗಳು

ಯಾವುದೇ ವ್ಯಕ್ತಿ ಹುಟ್ಟನಿಂದ ಸಾಯುವವರೆಗೂ ಒಂದೇ ಬಗೆಯ ಸ್ವಭಾವ, ಗುಣಗಳನ್ನು, ನಡವಳಿಕೆಯನ್ನು ಹೊಂದಿರುವುದಾಗಲೀ, ಉಳಿಸಿಕೊಂಡಿರುವುದಾಗಲೀ ಸಾಧ್ಯವಿಲ್ಲ. ಕಾಲಕಾಲಕ್ಕೆ, ಪರಿಸ್ಥಿತಿ, ಸನ್ನಿವೇಶಗಳಿಗೆ ತಕ್ಕಂತೆ ತನ್ನ ಸ್ವಭಾವ, ಗುಣಗಳಲ್ಲಿ ಬದಲಾವಣೆಗಳನ್ನು ಅನಿವಾರ್ಯವೆಂಬಂತೆ ತಂದುಕೊಳ್ಳುತ್ತಾನೆ. ಹಾಗೆಯೇ ಇನಾಂದಾರರು ತಮ್ಮ ಆರಂಭದ ದಿನಗಳಲ್ಲಿ, ತಮ್ಮ ಕುಟುಂಬದ ಸದಸ್ಯರ ಒಡನಾಟದಲ್ಲಿ ಸಾಕಷ್ಟು ಸ್ನೇಹ, ಪ್ರೀತಿ, ಸಲುಗೆಯಿಂದಲೇ ಇರುತ್ತಿದ್ದರು. ತಾಯಿಯನ್ನು ಅತಿಯಾಗಿ ಪ್ರೀತಿಸುತ್ತಿದ್ದರು. ಅವಶ್ಯಕತೆ ಬಿದ್ದಾಗ ತಾಯಿಗೆ ಅಡಿಗೆ ಮನೆ ಕೆಲಸಗಳಲ್ಲಿ, ತಂಗಿಯರನ್ನು ಶಾಲೆಗೆ ಕಳಿಸಲು ಸಿದ್ಧ ಮಾಡುತ್ತಿದ್ದ ಕೆಲಸಗಳಲ್ಲಿ ಸಹಕರಿಸುತ್ತಿದ್ದರು. ತಂಗಿಯರೊಂದಿಗೆ ವಿನೋದಪ್ರಿಯರಾಗಿ ನಡೆದುಕೊಳ್ಳುತ್ತಿದ್ದರು, ಕೆಲವೊಮ್ಮೆ ಕೀಟಲೆ ಮಾಡಿ ನಗಿಸುತ್ತಿದ್ದರು. ರೋಚಕವಾದ ಕಥೆಗಳನ್ನು ಹೇಳಿ ರಂಜಿಸುತ್ತಿದ್ದರು. ಸ್ವಲ್ಪ ಪ್ರಬುದ್ಧ ವಯಸ್ಸಿಗೆ ಬಂದ ಮೇಲೆ ಇಂಗ್ಲಿಷ್ ಸಾಹಿತ್ಯ ಕೃತಿಗಳ ಅಂದರೆ ಕಾದಂಬರಿ, ನಾಟಕಗಳ ಕುರಿತು ಅವರೊಂದಿಗೆ ಚರ್ಚಿಸುತ್ತಿದ್ದರು. ಅವುಗಳಲ್ಲಿನ ಸೊಗಸನ್ನು ವಿವರಿಸುತ್ತಿದ್ದರು. ಆದರೆ ಕ್ರಮೇಣ ಶೈಕ್ಷಣಿಕವಾಗಿ ಮುಂದುವರೆದಂತೆ ಹಲವು ಕಾರಣಗಳಿಂದಾಗಿ ವಿಶಾಲ ಜಗತ್ತಿನೊಂದಿಗೆ ಬೆರೆಯಬೇಕಾದಾಗ, ಹಲವು ವೃತ್ತಿಗಳಲ್ಲಿ ತೊಡಗಿದ್ದಾಗ ಸಹಜವಾಗಿ ಅವರು ಸ್ವಲ್ಪ ಮಟ್ಟಿಗೆ ಗಂಭೀರವಾದರು. ವಿನಾಕಾರಣ ಸ್ನೇಹಿತರ ಗುಂಪು ಕಟ್ಟಿಕೊಳ್ಳುತ್ತಿರಲಿಲ್ಲ ಸ್ನೇಹಿತರ ಆಯ್ಕೆಯಲ್ಲೂ ಒಂದು ಶಿಸ್ತನ್ನು ರೂಢಿಸಿಕೊಂಡಿದ್ದರು. ಮಾತಿನಲ್ಲೂ ಮಿತಿ. ಆಡುವ ಒಂದೊಂದು ಮಾತಿನಲ್ಲೂ ತೂಕವಿರುತ್ತಿತ್ತು; ವಿವೇಕ, ವಿವೇಚನೆ ಇರುತ್ತಿತ್ತು.

ಹೊರಗಡೆ ಜನರೊಂದಿಗಾಗಲಿ, ಮನೆಯವರ ಜೊತೆಯಾಗಲಿ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಅವರ ಬದಲಾದ ಸ್ವಭಾವವನ್ನು ಗುರುತಿಸಿ ಅವರ ಸೋದರಿ, ಪತ್ರಕರ್ತೆ, ಸುಶೀಲಾ ಕೊಪ್ಪರ್ ಹೇಳಿದ ಮಾತುಗಳು ಗಮನಾರ್ಹವೆನಿಸುತ್ತದೆ. "ಇತ್ತೀಚೆಗೆ ಇಂಥ ಸುದಿನಗಳೇ ನಮ್ಮ ಪಾಲಿಗಿಲ್ಲ ಎನಿಸುತ್ತದೆ. ಹಿಂದಿನಂತೆ ಅಣ್ಣ ನೀಡುತ್ತಿದ್ದ ಆ ಸಾಹಿತ್ಯ ಸುಧೆಯನ್ನು ಸವಿಯುವ ಅವಕಾಶವೇ ಸಿಕ್ಕುವುದಿಲ್ಲ. ನಮ್ಮಣ್ಣ ಗಂಭೀರವಾಗಿ ಬಿಟ್ಟಿದ್ದಾನೆ. ಕೆಲಸ

ಕಾರ್ಯಗಳೂ ತುಂಬಾ ಹೆಚ್ಚಿವೆ. ನಿಶ್ಚಿತ ಅವಧಿಯಲ್ಲಿ ಆ ಬರವಣಿಗೆಗಳೆಲ್ಲ ಮುಗಿಯಬೇಕು. ಸದಾ ಆ ಕುರಿತು ಚಿಂತನ. ಪ್ರಪಂಚದಲ್ಲಿ ನಡೆಯುವ ಘಟನೆಗಳನ್ನು ಕುರಿತು ಯೋಚನೆ. ಅದಕ್ಕಾಗಿ ತಾನೇನೂ ಮಾಡಲಾಗದ್ದಕ್ಕೆ ಅನೇಕ ಬಾರಿ ನಿಸ್ಸಾಹಯಕತೆ ಕಂಡುಬರುತ್ತದೆ" ಎಂಬ ಮಾತುಗಳಲ್ಲಿ ಅಣ್ಣ ಗಂಭೀರವಾಗುವುದಕ್ಕೆ ನಿಜವಾದ ಕಾರಣಗಳಿವೆ ಎನ್ನುವುದನ್ನು ಅರ್ಥ ಮಾಡಿಕೊಂಡಿರುವುದು ಕಾಣಿಸುತ್ತದೆ. ಜೊತೆಗೆ ಅವರ ಸಂವೇದನಾಶೀಲತೆಯ ಮೇಲೂ ಬೆಳಕು ಬೀಳುತ್ತದೆ. ಹೆಣ್ಣುಮಕ್ಕಳಿಗೆ ಓದಿನ ಅವಶ್ಯಕತೆ ಇಲ್ಲವೆಂಬ ಅಭಿಪ್ರಾಯ ಪ್ರಚಲಿತವಿದ್ದ ಕಾಲದಲ್ಲಿ ತಂಗಿಯರ ಓದಿಗೆ ಪ್ರೋತ್ಸಾಹ ನೀಡುವ ದಿಟ್ಟತನ ತೋರಿಸಿದ್ದರು. ಹಾಗೆಯೇ ಅವರ ಮದುವೆ ವಿಚಾರದಲ್ಲಿಯೂ ಜಾಗರೂಕತೆಯಿಂದಿದ್ದು, ಅವರ ಕುಟುಂಬದ ಹಿನ್ನೆಲೆ, ಹುಡುಗನ ಅರ್ಹತೆಗಳನ್ನು ಗಮನಿಸಿಬೇಕೆಂಬ ಅನಿವಾರ್ಯತೆಯನ್ನು ಮನಗಂಡಿದ್ದರು. ವಯಸ್ಸು, ವಿದ್ಯೆ, ಉದ್ಯೋಗ – ಇವೆಲ್ಲವೂ ಮನೆಮಗಳನ್ನು ಮದುವೆ ಮಾಡಿ ಕಳಿಸುವಾಗ ಗಮನಿಸಬೇಕಾದ ಅಗತ್ಯವಿದೆ ಎಂದು ಬಲವಾಗಿ ನಂಬಿದ್ದರಿಂದಲೇ ಹದಿನಾಲ್ಕರ ಹರೆಯದ ತಂಗಿಯನ್ನು ವಯಸ್ಸಾದ ಶ್ರೀಮಂತ ಯುವಕನೊಂದಿಗೆ ಮದುವೆಯಾಗುವುದನ್ನು ತಪ್ಪಿಸಿದರು.

ತಂಗಿಯ ಗಂಡ ಕೊಪ್ಪರ್, ವಿ.ವಿ. ಜೋಶಿ ಅವರುಗಳೊಂದಿಗೆ ಬಹಳ ಸಲುಗೆ ಸ್ನೇಹಗಳೊಂದಿಗಿದ್ದು, ಪ್ರಪಂಚದ ಹತ್ತಾರು ವಿಷಯಗಳ ಬಗ್ಗೆ, ಸಾಹಿತ್ಯವೂ ಸೇರಿದಂತೆ ಚರ್ಚೆ, ಹರಟೆಗಳಲ್ಲಿ ನಿರಂತರ ಭಾಗವಹಿಸುತ್ತಿದ್ದರು. ತುಂಟತನದ ಮಾತುಗಳಾಡುತ್ತಿದ್ದರು. ಬೇರೆ ಬೇರೆ ಗೆಳೆಯರ ಬಗ್ಗೆ ಟೀಕೆ, ಟಿಪ್ಪಣಿ, ಲೇವಡಿಗಳ ಮೂಲಕ ಖುಷಿಪಡುತ್ತಿದ್ದರು.

ತಮ್ಮ ಸ್ವಂತ ತಂಗಿಯರು, ತಮ್ಮ ಮಕ್ಕಳು, ನೆರೆಹೊರೆಯವರ ಮಕ್ಕಳು ಎಂಬ ಭೇದವಿಲ್ಲದಂತೆ ಎಲ್ಲ ಮಕ್ಕಳಿಗೆ, ಭಾಷಣಗಳನ್ನು ಕಲಿಸುವುದೋ, ಅಡಿಗೆ ಮಾಡುವುದನ್ನು ತಪ್ಪು ತಪ್ಪಾಗಿ ಹೇಳಿಕೊಟ್ಟು ತಮಾಶೆ ಮಾಡಿ ಆನದಂದಿಸುವುದೋ ಅವರ ಸ್ವಭಾವವಾಗಿತ್ತು. ಅವಕಾಶ ಸಿಕ್ಕಾಗಲೆಲ್ಲ ಚುಡಾಯಿಸುವುದು, ಗಲಾಟೆ ಮಾಡಿದಾಗ, 'ಗ್ರಾಂಡ್ ಸನ್ಸ್‌ಗೆ' ಬದಲಾಗಿ 'ಗ್ರಾಂಡ್ ಸಿನ್ಸ್ !' ಎಂದು ಹೇಳಿ ನಗುವುದು ಎಲ್ಲವೂ ನಡೆಯುತ್ತಿದ್ದರೂ ಇವರೊಂದಿಗೆ ಸಲುಗೆಯಿದ್ದಷ್ಟೇ ಭಯವೂ ಇರುತ್ತಿತ್ತು. ಮನೆಯವರಿಗಾಗಲೀ, ಮಕ್ಕಳಿಗಾಗಲೀ, ಬೇರೆಯವರಿಗಾಗಲೀ ಇವರ ವಸ್ತುಗಳನ್ನು ಮುಟ್ಟುವುದಕ್ಕೆ ಹೆದರಿಕೆ. ಕೇಳಿ ಪಡೆಯುವುದಕ್ಕೂ ಹೆದರಿಕೆ, ಕೈ ಹಿಡಿದ ಹೆಂಡತಿಗೂ ಗಂಡನನ್ನು ಕೇಳುವಷ್ಟು ಧೈರ್ಯ ಇರುತ್ತಿರಲಿಲ್ಲ. ಕೊಡಬಾರದೆಂಬ ನಿಲುವಿಲ್ಲದಿದ್ದರೂ ಕೊಟ್ಟರೆ ಹಾಳು

ಮಾಡಿಯಾರೆಂಬ ಆತಂಕದಿಂದ ತಮ್ಮ ವಸ್ತುಗಳನ್ನು ಜತನದಿಂದ ಕಾಯ್ದಿರಿಸಿಕೊಳ್ಳುತ್ತಿದ್ದರು. ಪುಸ್ತಕಗಳು, ಕಾಗದದ ಹಾಳೆಗಳು, ಪಿನ್ನುಗಳು, ಪೆನ್ನುಗಳು, ಸ್ಟಾಂಪುಗಳು, ಲಕೋಟೆಗಳು – ಇಂಥವೆಲ್ಲ ಅವರ ಅಮೂಲ್ಯ ಆಸ್ತಿ. ಇವುಗಳ ಜೊತೆಗೆ ಅವರಲ್ಲಿದ್ದ ಬೃಹತ್ ಗ್ರಂಥಭಂಡಾರ. ತಮ್ಮ ಸಂಪಾದನೆಯ ಸಾಕಷ್ಟು ಭಾಗ ಪುಸ್ತಕಗಳಿಗೆ ಖರ್ಚಾಗುತ್ತಿತ್ತು. ಆಂಗ್ಲ ಸಾಹಿತ್ಯ, ಕನ್ನಡ ಸಾಹಿತ್ಯ ಎಂಬ ಭೇದವಿಲ್ಲದೆ, ಸಾಹಿತ್ಯ ಸಂಬಂಧಿ ಪುಸ್ತಕಗಳ ಜೊತೆಗೆ ಬೇರೆ ಬೇರೆ ವಿಷಯ ಸಂಬಂಧಿ ಪುಸ್ತಕಗಳೂ ಇರುತ್ತಿದ್ದುವಂತೆ. ಅವರಲ್ಲಿನ ಪುಸ್ತಕರಾಶಿ ಎಷ್ಟಿತ್ತೆಂದರೆ, ಒಮ್ಮೆ ೧೯೫೫ರಲ್ಲಿ ಧಾರವಾಡದಿಂದ ಮಂಗಳೂರಿಗೆ ವರ್ಗಾವಣೆ ಆಗಿ ಪುಸ್ತಕಗಳನ್ನು, ಕಪಾಟುಗಳನ್ನು ಸಾಗಿಸುವಾಗ ಕೆಲಸದವರು ಅಚ್ಚರಿಪಟ್ಟು, ಇವರೇನು ಪುಸ್ತಕದ ಅಂಗಡಿ ಇಟ್ಟುಕೊಂಡಿರುವರೇ ಎಂದು ತಮ್ಮ ತಮ್ಮಲ್ಲಿ ಮಾತಾಡಿಕೊಂಡರಂತೆ. ಪುಸ್ತಕಗಳ ಬಗ್ಗೆ ಅಪಾರ ಅಭಿಮಾನ, ಆಸ್ತಿಪಾಸ್ತಿ ಹೋದರೂ ಚಿಂತೆಯಿಲ್ಲ, ಪುಸ್ತಕಗಳನ್ನು ಕಳೆದುಕೊಳ್ಳಲು ಇಷ್ಟಪಡುತ್ತಿರಲಿಲ್ಲ. ಆದ್ದರಿಂದಲೇ ಪುಸ್ತಕಗಳನ್ನು ಹಿಂತಿರುಗಿಸದಿದ್ದರೆ, ಹಾಳು ಮಾಡಿದರೆ ಸಹಿಸುತ್ತಿರಲಿಲ್ಲ.

ಎಂ.ವಿ. ವೆಂಕಟೇಶ ಮೂರ್ತಿಯವರು ಅವರ ಆಪ್ತರೂ ಮತ್ತು ಅವರಿಗೆ ತೀರಾ ಸನಿಹದಲ್ಲಿದ್ದವರಾದ್ದರಿಂದ ಇವರ ಶಿಸ್ತು, ಸ್ವಭಾವ, ನಡವಳಿಕೆಗಳ ಬಗ್ಗೆ ಅಧಿಕೃತವಾಗಿ ಮಾತಾಡಬಲ್ಲರು; ಬರೆಯಬಲ್ಲರು. ಇವರ ಬರಹದ ಶಿಸ್ತಿನ ಬಗ್ಗೆ, ಕ್ರಮದ ಬಗ್ಗೆ, ಬರಹದ ಚೆಲುವು, ಸ್ಫುಟತೆ, ಮುದ್ದಾದ ಅಕ್ಷರಗಳ, ಚಿತ್ತಿಲ್ಲದೆ ಬರೆಯುವುದರ ಬಗ್ಗೆ ಒಂದು ಲೇಖನದಲ್ಲಿ ದಾಖಲಿಸಿ ಮೆಚ್ಚುಗೆಯ ಭಾವವನ್ನು ವ್ಯಕ್ತಪಡಿಸಿದ್ದಾರೆ. ಮಾಡುವ ಪ್ರತಿಯೊಂದು ಕೆಲಸದ ಬಗ್ಗೆಯೂ ಅತಿಯಾದ ಆಸ್ಥೆ ವಹಿಸುತ್ತಾರೆ. ಲಕೋಟೆಗಳನ್ನು ತಾವೇ ಸಿದ್ಧ ಮಾಡಿಕೊಳ್ಳುವುದು ವಿಳಾಸ ಬರೆಯುವುದು ಸ್ಟಾಂಪು ಹಚ್ಚುವುದು ಮುಂತಾದ ಕೆಲಸಗಳನ್ನು ಸ್ವತಃ ಮಾಡಿಕೊಳ್ಳೂತ್ತಿದ್ದರಂತೆ. ಪ್ರತಿಯೊಂದು ವಿಷಯದ ಕಡೆ ಗಮನವಿರಿಸುತ್ತಿದ್ದರಲ್ಲದೆ ಸಮಯ ಪ್ರಜ್ಞೆಯನ್ನು ಎಲ್ಲ ಸಂದರ್ಭ, ಸನ್ನಿವೇಶಗಳಲ್ಲಿಯೂ ಕಾಪಾಡಿಕೊಂಡಿದ್ದರು.

ಅಷ್ಟೇ ಅಲ್ಲದೆ ಮೂರ್ತಿಯವರು ಇವರನ್ನು 'ಮಿತಭಾಷಿ, ಮಾತಿಗಿಂತ ಹೆಚ್ಚು ಮೌನಪ್ರಿಯರು. ಹಿತಮಿತ ಮೃದುವಚನ ಎಂಬ ವಿಶೇಷಣ ಇವರಿಗೆ ಒಪ್ಪುತ್ತಿತ್ತಾದರೂ ಸ್ಮಿತಭಾಷಿ ಎಂದು ಹೇಳಲಾಗುತ್ತಿರಲಿಲ್ಲ. ಸದಾ ಹೆಚ್ಚು ಅಂತರ್ಮುಖಿಯಾಗುತ್ತಿದ್ದರು." ಹಣದ ವೆಚ್ಚದ ವಿಚಾರದಲ್ಲಿ ಅವರ ಕೈಬಿಗಿ ಹಿಡಿತ; ಎಷ್ಟೋ ಅಷ್ಟೇ! ಆಡಂಬರವಿಲ್ಲ. ಯಾವುದೇ ವ್ಯವಹಾರದಲ್ಲಿಯಾಗಲೀ, ನಿರಾಡಂಬರತೆ ಎದ್ದು ಕಾಣುತ್ತಿತ್ತು. ಈ ಧಾರಾಳವಲ್ಲದ ನಡೆ–ನುಡಿ, ಕೈಬಿಗಿ

ಇವು ಅವರನ್ನು high brow ಗರ್ವಿ, ಅಹಂಕಾರಿ ಇತ್ಯಾದಿ ಅಪಪೃಥೆಗೂ ಈಡು ಮಾಡಿತ್ತು. ಆದರೆ ಅಂಥ ಟೀಕೆಯತ್ತ ಅವರದು ದಿವ್ಯ ನಿರ್ಲಕ್ಷ್ಯ. ತಮ್ಮ ಮಾತು, ತಮ್ಮ ಕೆಲಸ, ತಮ್ಮ ಹಣ, ಇತರರ ಮಾತಿಗೆ ಲಕ್ಷ್ಯ, ಲೆಕ್ಕ, ಗಣನೆ ಸಲ್ಲ" ಎಂದು ಇವರ ಬಗ್ಗೆ ವಿವರಿಸುತ್ತಾರೆ.

ಬಡತನದ ಅನುಭವವಿತ್ತು. ಹಣದ ಬೆಲೆ ಗೊತ್ತಿತ್ತು. ಸ್ವಪ್ರಯತ್ನದಿಂದ ಕಷ್ಟ ಪಟ್ಟು ಹಂತ ಹಂತವಾಗಿ ಬೆಳೆದು ಸಮಾಜದಲ್ಲಿ ಗೌರವ ಪ್ರತಿಷ್ಠೆಗಳನ್ನು ಗಳಿಸಿ ಕೊಂಡಿದ್ದರೂ ನೋಟಕ್ಕೆ ಅಹಂಕಾರಿಯೆಂಬಂತೆ ಕಂಡರೂ ನಿಗರ್ವಿ, ನಿರಹಂಕಾರಿ. ಆದರೆ ಎಲ್ಲಿಯಾದರೂ ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ಬಂದಲ್ಲಿ ತಮ್ಮ ಮಾತಿಗೆ ಬೆಲೆ ಕೊಡುತ್ತಿಲ್ಲವೆಂಬ ಭಾವನೆ ಬಂದಲ್ಲಿ, ಸುಮ್ಮನೆ ಬಿಡುತ್ತಿರಲಿಲ್ಲ. ಸನ್ನಿವೇಶ ಸಂದರ್ಭಾನುಗುಣವಾಗಿ ಎಲ್ಲ ಬಗೆಯ ಭಾವಸ್ಪಂದನಗಳಿಗೆ, ಪ್ರತಿಕ್ರಿಯೆಗಳಿಗೆ ಒಳಗಾಗುತ್ತಿದ್ದರೆಂಬುದಕ್ಕೆ ಮೂರ್ತಿಯವರು ತಮ್ಮ ಪ್ರತ್ಯಕ್ಷ ಅನುಭವವನ್ನು ಹೀಗೆ ದಾಖಲಿಸಿದ್ದಾರೆ. ಪಿ.ಸೀ, ರಾವ್ ಬಹದ್ದೂರ್, ಜೋಶಿ– ಇವರುಗಳ ಜೊತೆಗೂಡಿ ಬಿಜಾಪುರಕ್ಕೆ ಹೋಗಿದ್ದ ಸಂದರ್ಭವಂತೆ. ಗೋಲ್ ಗುಂಬಜ್ ಮಾಯಾಲೋಕ ಅವರನ್ನು ಆಕರ್ಷಿಸಿದ್ದು. ತಮ್ಮ ಆನಂದವನ್ನು ಮಕ್ಕಳಂತೆ ಕೇಕೆ ಹಾಕಿ ನಕ್ಕಾಗ, ಸಿಳ್ಳು ಹಾಕಿದಾಗ ಅವರ ಪ್ರತಿಧ್ವನಿ ಅಲೆ ಅಲೆಯಾಗಿ ಬಂದದ್ದನ್ನು ಕೇಳಿಸಿಕೊಂಡು ಆನಂದ ಪಟ್ಟ ಸನ್ನಿವೇಶ ಮೂರ್ತಿಯವರಿಗೆ ಅಚ್ಚರಿಯುಂಟು ಮಾಡಿತ್ತಂತೆ. ಈ ರೀತಿ ನಡೆದು ಕೊಂಡದ್ದನ್ನು ನೋಡಿದ ಮೂರ್ತಿಯವರಿಗೆ ಇದೇ ಇವರ ಸಹಜ ಸ್ವಭಾವ ಅನಿಸಿದ್ದು ಆ ಕ್ಷಣಕ್ಕೆ ಸ್ವಾಭಾವಿಕವೇ! ಆದರೆ ಮತ್ತೊಂದು ಸಂದರ್ಭದಲ್ಲಿ, ಬಾದಾಮಿ ಪ್ರವಾಸಿ ಮಂದಿರದಲ್ಲಿ, ತಮಗೆ ವಿಶ್ರಾಂತಿಗೆ ಮತ್ತು ಮಧ್ಯಾಹ್ನದ ಊಟಕ್ಕೆ ವ್ಯವಸ್ಥೆ ಮಾಡಿಕೊಡಲು ಅಲ್ಲಿನ ಮೇಲ್ವಿಚಾರಕ ಹಿಂದು ಮುಂದು ನೋಡಿದ್ದಕ್ಕೆ ಅವನ ಮೇಲೆ ರೇಗಾಡಿದ ರೀತಿ ಹಿಂದಿನ ಅನುಭವಕ್ಕಿಂತ ಭಿನ್ನವೆನಿಸಿದಾಗ ಮೂರ್ತಿಯವರಿಗೆ ದ್ವಂದ್ವಸ್ಥಿತಿಯಲ್ಲಿ ಯೋಚಿಸುವಂತಾಯಿತಾದರೂ, ನಂತರ ಅವರು ನಗುತ್ತ 'ಬಾಯಿದ್ದವನು ಮಾತ್ರ ಬದುಕ ಬಲ್ಲ' ಎಂಬ ಮಾತನ್ನು ತಿಳಿಸಿದರಂತೆ!

ಸ್ನೇಹ, ಸಂಬಂಧಗಳು, ಪ್ರೀತಿ ವಾತ್ಸಲ್ಯಗಳು ಕೇವಲ ಮನೆಯವರೊಂದಿಗೆ ಮಾತ್ರವಲ್ಲ, ಸಮಾಜದಲ್ಲಿ ಬದುಕುವಾಗ ಎಷ್ಟೊಂದು ಮಂದಿಯ ಜೊತೆ, ಬೇರೆ ಬೇರೆ ಸನ್ನಿವೇಶ; ಸಂದರ್ಭಗಳಲ್ಲಿ ಕೆಲಸ ಮಾಡಬೇಕಾಗಿರುತ್ತದೆ; ಒಡನಾಟದಲ್ಲಿ ಇರಬೇಕಾಗುತ್ತದೆ. ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ ವಲಯಗಳಲ್ಲಿ ಕೆಲಸ ಮಾಡುವಾಗ ಸಂದರ್ಭಾನುಸಾರಿಯಾಗಿ ಇವರ ವ್ಯವಹಾರ,

ನಡವಳಿಕೆ, ಮಾತುಕತೆ ಭಿನ್ನಭಿನ್ನವಾಗಿ ಇರಬೇಕಾದುದು ಸಹಜವಾಗಿರುತ್ತದೆ. ಗಂಭೀರವಾಗಿ. ನಿಷ್ಠುರವಾಗಿ, ವೈನೋದಿಕವಾಗಿ ಸಮಯಾನುಸಾರಿಯಾಗಿ ವ್ಯವಹರಿಸಬೇಕಾಗುತ್ತದೆ. ನಿಷ್ಠುರತೆ, ಅಹಂಕಾರ, ಗರ್ವಗಳೇ ಇವರ ವ್ಯಕ್ತಿತ್ವದ ಭಾಗವಾಗಿದ್ದರೆ, ಸಾಹಿತಿಗಳು ಸ್ನೇಹಿತರು ಇವರ ಮನೆಯಲ್ಲಿ ಸಮಾವೇಶಗೊಳ್ಳುತ್ತಿರಲಿಲ್ಲ. ಸಾಮಾನ್ಯವಾಗಿ ಡಾ.ಶಿವರಾಮ ಕಾರಂತರು, ರಾವ್ ಬಹದ್ದೂರ್, ಪಿ.ವಿ.ಜೋಶಿ, ಕು.ಶಿ. ಹರಿದಾಸಭಟ್, ಪ್ರೊ. ಕೆ. ವೆಂಕಟರಾಮಪ್ಪ, ಪ್ರೊ.ವಿ.ಸೀ ಪರಮೇಶ್ವರ ಭಟ್ಟ, ಹಾಮಾ ನಾಯಕ, ಡಾ. ಎಚ್. ಕೆ. ರಂಗನಾಥ ಮುಂತಾದವರು ಇವರ ಮನೆಯಲ್ಲಿ ಸೇರುತ್ತಿದ್ದರಂತೆ. ಸೇರಿ ಬಿಟ್ಟರೆ ಇಡೀ ದಿನ ಎಲ್ಲರಿಗೂ ಸಾಹಿತ್ಯದ ರಸದೌತಣದ ಆನಂದ ಧಾರಾಳವಾಗಿ ದೊರೆಯುತ್ತಿತ್ತಂತೆ.

ಇನ್ನು ತಮ್ಮದೇ ಮೂವರು ಮಕ್ಕಳಿಗೆ ಈ ಉದ್ದಾಮ ಸಾಹಿತಿಗಳ ಪರಿಚಯ, ಸಾಹಿತ್ಯದ ಬಗೆಗಿನ ಚರ್ಚೆಗಳು ದಕ್ಕುತ್ತಿತ್ತಲ್ಲಿದೆ. ಅವಕಾಶ ಸಿಕ್ಕಾಗಲೆಲ್ಲ ತಮ್ಮ ಬಿಗು ಮುಖ ಸಡಿಲಿಸಿ ಹಾಸ್ಯ, ವಿಡಂಬನೆ ಮಾತುಗಳಿಂದ ಅವರನ್ನು ರಂಜಿಸುತ್ತಿದ್ದರು. ಮಕ್ಕಳ ಜೊತೆ ಮಗುವಾಗಿ ಇರುತ್ತಿದ್ದರು. ಏನೇ ಆದರೂ ಎಷ್ಟು ಸಲುಗೆಯಿಂದಿದ್ದರೂ ಮಕ್ಕಳನ್ನು ಶಿಸ್ತಿನಲ್ಲಿ ಇರಿಸಿದ್ದರು. ಅವರಿಗೆ ಆಧುನಿಕತೆಯ ಫ್ಯಾಷನ್ನುಗಳು ಇಷ್ಟವಿರುತ್ತಿರಲಿಲ್ಲ. ಸರಳವಾದ ಉಡುಗೆ ತೊಡುಗೆಯನ್ನೇ ವಿಧಿಸುತ್ತಿದ್ದರು. ಕನ್ನಡ ಭಾಷೆ, ಸಂಸ್ಕೃತಿಗೇ ಒತ್ತು ನೀಡುತ್ತಿದ್ದರು. ಆದರೆ ಇಂಗ್ಲಿಷ್ ಸಾಹಿತ್ಯದ ಪರಿಚಯವನ್ನು ಮಕ್ಕಳಿಗೆ ಕೊಟ್ಟಿದ್ದರು. ಷೇಕ್ಸ್‌ಪಿಯರ್, ಮಿಲ್ಟನ್. ವರ್ಡ್ಸ್‌ವರ್ತ್, ಕಾಳಿದಾಸ, ಭಾಸ, ಬಾಣ ಕುರಿತಾದ ಚರ್ಚೆಯಲ್ಲಿ ಮಕ್ಕಳೂ ಭಾಗವಹಿಸುವಂತೆ ನೋಡಿಕೊಳ್ಳುತ್ತಿದ್ದರು.

ಕುಟುಂಬದವರ ಜೊತೆ ತಮ್ಮ ಕಥೆ, ಕಾದಂಬರಿಗಳ ಕಥಾನಕಗಳ ಬಗ್ಗೆ ಮುಕ್ತವಾಗಿ ಚರ್ಚಿಸುತ್ತಿದ್ದರು. ಮನೆಯ ಕಷ್ಟ ಸುಖ, ಪ್ರಪಂಚದಲ್ಲಿನ ಆಗು ಹೋಗುಗಳು, ತಾಯಿ ತಂದೆಯ ಪ್ರೀತಿ ವಿಶ್ವಾಸಗಳು, ಮನೆಯ ಆರ್ಥಿಕ ಸ್ಥಿತಿಯ ಇತಿ ಮಿತಿಗಳು, ತಾಯಿ ಕಷ್ಟಪಟ್ಟು ಸಂಸಾರ ನಿರ್ವಹಣೆ ಮಾಡುತ್ತಿದ್ದುದು, ತಮಗಾಗಿ ಆಕೆ ಮಾಡುತ್ತಿದ್ದ ತ್ಯಾಗ, ತಂದೆಯ ಸಾಹಿತ್ಯ ಇತಿಹಾಸಗಳ ಬಗೆಗಿನ ಆಸಕ್ತಿ ಎಲ್ಲ ವಿಷಯಗಳೂ ಚರ್ಚೆಯ ಭಾಗವಾಗಿರುತ್ತಿದ್ದವು.

ಒಟ್ಟಿನಲ್ಲಿ ಇವರದು ಅತ್ಯಂತ ಸಂಕೀರ್ಣ ವ್ಯಕ್ತಿತ್ವ ಇಂತಹ ವ್ಯಕ್ತಿತ್ವದ ಇನಾಂದಾರ್ ಅನೇಕ ಕಾಲೇಜುಗಳಲ್ಲಿ ಬೇರೆ ಪ್ರದೇಶಗಳಲ್ಲಿ ಕೆಲಸ ಮಾಡಿದರು. ಅವರ ಬಹು ಮುಖ ವ್ಯಕ್ತಿತ್ವ ಸ್ವಭಾವಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಜವಾಬ್ದಾರಿಗಳನ್ನು ನಿರ್ವಹಿಸುವಾಗ ನಡೆದುಕೊಳ್ಳುತ್ತಿದ್ದ ರೀತಿಯನ್ನು, ವಿದ್ಯಾರ್ಥಿಗಳೊಂದಿಗೆ

ಸಹೋದ್ಯೋಗಿಗಳೊಂದಿಗೆ. ಅಧಿಕಾರಿಗಳೊಂದಿಗೆ ವ್ಯವಹಾರಿಸುವಾಗ ಗಮನಿಸಿದ ಹಲವರ ಅಭಿಪ್ರಾಯಗಳನ್ನು ಓದಿದರೆ ಸಾಧ್ಯವಾಗುತ್ತದೆ.

ಇನಾಂದಾರರು ಗಾಢ ಸ್ನೇಹ ಹೊಂದಿದ್ದ ಕು.ಶಿ.ಹರಿದಾಸಭಟ್ಟರೂ ಒಂದು ಸಂದರ್ಭದಲ್ಲಿ ಇನಾಂದಾರರ ಸ್ನೇಹದ ಬಗ್ಗೆ ಹೀಗೆ ಹೇಳುತ್ತಾರೆ. "ಇನಾಂದಾರರು ನನಗೆ ತೀರಾ ತೀರಾ ಒಳಸುತ್ತಿನಲ್ಲಿ ಒಂದು ಸ್ಥಾನವನ್ನು ಕೊಟ್ಟಿರುವುದನ್ನು ನಾನು ನನ್ನ ಜೀವನದ ಒಂದು ಸೌಭಾಗ್ಯವೆಂದು ತಿಳಿದಿದ್ದೇನೆ. ಸುಲಭದಲ್ಲಿ ಸ್ನೇಹ ಕೊಡುವಂಥವರೂ ಅಲ್ಲ; ತೆಗೆದುಕೊಳ್ಳುವಂಥವರೂ ಅಲ್ಲ.... ಎಂಬುದರಿಂದ ಈ ನಮ್ಮ ಸ್ನೇಹಕ್ಕೆ ಇಷ್ಟು ಗಾಢವಾದ ಬೆಲೆ ಆವಾಹಿತವಾಗುತ್ತದೆ" ಎಂದು. ಈ ಮಾತಿನಲ್ಲಿ ಇನಾಂದಾರರ ಸ್ನೇಹಿತರ ಆಯ್ಕೆಯಲ್ಲಿನ ನಿಲುವು, ವಿವೇಕಗಳು ಸ್ಪಷ್ಟವಾಗುತ್ತದೆ. ಇಂಥ ಸ್ನೇಹಿತರಿಂದ ಹೆಚ್ಚು ಕಲಿಯುವುದಕ್ಕೆ, ಮುಕ್ತವಾದ ಟೀಕೆ. ವಿಮರ್ಶೆಗಳಿಗೆ ಅವಕಾಶ ಉಂಟಾಗುವುದಲ್ಲದೆ ಅಮೂಲ್ಯವಾದ ಸ್ನೇಹ ಬಂಧನವೂ ಸಡಿಲಗೊಳ್ಳುವುದಿಲ್ಲ. ಹೀಗಿದ್ದುದರಿಂದಲೇ ಕು.ಶಿ. ಹರಿದಾಸಭಟ್ಟರು. ಕರ್ನಾಟಕ ಸರಕಾರದಲ್ಲಿ ದಕ್ಷ ಆಡಳಿತಗಾರರೆನಿಸಿಕೊಂಡಿದ್ದ ಪಿ.ವಿ. ಜೋಶಿಯವರೂ ಇಂಗ್ಲಿಷ್, ಸಂಸ್ಕೃತ ಸಾಹಿತ್ಯವನ್ನು ಚೆನ್ನಾಗಿ ಬಲ್ಲವರಾಗಿದ್ದು ಅವುಗಳ ಕುರಿತು ಭಾವಾವೇಶದೊಂದಿಗೆ ಸಾಹಿತ್ಯ ಸಂಗ್ರಾಮಕ್ಕೆ ಮುಂದಾಗುತ್ತಿದ್ದರೂ ಇನಾಂದಾರರು ಸಂಯಮವನ್ನು ಒಂದಿಷ್ಟೂ ಬಿಟ್ಟು ಕೊಡದೆ ಉತ್ತರಿಸುತ್ತಿದ್ದ ಪರಿಯನ್ನು ಪ್ರಸ್ತಾಪಿಸಿದ್ದಾರೆ.

ಕು.ಶಿ. ಹರಿದಾಸಭಟ್ಟರೊಂದಿಗೆ ಇನಾಂದಾರರ ಸ್ನೇಹ ಗಾಢವಾದದ್ದು. ಉಡುಪಿಯಲ್ಲಿ ಭಟ್ಟರು ಆಗ ಪ್ರಿನ್ಸಿಪಾಲರಾಗಿದ್ದರು. ಇಬ್ಬರೂ ಸಮವ್ಯಸನಿಗಳು. ಪ್ರತಿದಿನ ಸಂಜೆ ಭೇಟಿಯಾಗಿ ಅಂದಂದಿನ ಅನುಭವಗಳನ್ನು ಹಂಚಿಕೊಳ್ಳುತ್ತಾ ಓದಿದ ಪುಸ್ತಕಗಳ ಬಗ್ಗೆ ಚರ್ಚಿಸುತ್ತಾ ಮತ್ತೆ ಇನ್ನೂ ಹಲವಾರು ವಿಷಯಗಳ ಕುರಿತು ಮಾತನಾಡುತ್ತಾ ಕಳೆಯುತ್ತಿದ್ದರಂತೆ. ಎಲ್ಲಿಗಾದರೂ ಹೋಗ ಬೇಕಾದರೂ ಕೂಡಿಯೇ ಹೋಗುತ್ತಿದ್ದರಂತೆ. ಆ ಪಯಣದ ಅವಧಿಯಲ್ಲಿ ಭಟ್ಟರಿಗೆ ಇನಾಂದಾರರ ವ್ಯಕ್ತಿತ್ವದ ಕೆಲವು ಮುಖಗಳು ಪರಿಚಯವಾಗುತ್ತಿದ್ದವಂತೆ, ಅಲ್ಲದೆ ಅಲ್ಲಿವರೆಗಿನ ಅನುಭವಕ್ಕಿಂತ ಭಿನ್ನವಾದ ಮತ್ತೊಂದು ಮುಖ ಅನಾವರಣವಾಗುತ್ತಿತ್ತಂತೆ. ಒಮ್ಮೆ ಮೈಸೂರಿಗೆ ಸಹ ಅಧ್ಯಾಪಕರು ಮತ್ತು ಇನಾಂದಾರರ ಜೊತೆ ಹೋಗಬೇಕಾಗಿ ಬಂದಿತಂತೆ. ಹೋಗುವಾಗ ಇನಾಂದಾರರ ಹೊರತಾಗಿ ಮಿಕ್ಕವರೆಲ್ಲರೂ ಒಬ್ಬರಿಗೊಬ್ಬರು. ಮಾತಿನ ಜಟಾಪಟಿಯಲ್ಲಿ ತೊಡಗಿದ್ದರಂತೆ. ಬರುವಾಗಲೂ ಪರಿಸ್ಥಿತಿ ಹೀಗೇ ಇತ್ತಂತೆ. ಆದರೆ ಇನಾಂದಾರರು ಮಾತ್ರ ತುಟಿ ಎರಡು ಮಾಡದೆ ದಿವ್ಯ ಮೌನದ ಸ್ಥಿತಿಯಲ್ಲಿ

ಮೂಕ ಪ್ರೇಕ್ಷಕರಾಗಿ, ಅವರ ಮಾಮೂಲಿ ಗಾಂಭೀರ್ಯದೊಂದಿಗೆ ಕುಳಿತಿದ್ದರಂತೆ. ಜೊತೆಗಿದ್ದ ಇತರೆ ಪ್ರಿನ್ಸಿಪಾಲರುಗಳು ಮತ್ತು ಉಳಿದವರು ಇದನ್ನು ನೋಡಿ ಅಚ್ಚರಿಪಟ್ಟುದೇ ಅಲ್ಲದೆ ಹೇಗಾದರೂ ಮಾಡಿ ಅವರ ಈ ಬಗೆಯ ಮೌನವನ್ನು ಮುರಿಯಬೇಕೆಂದೂ ಮುರಿದವರಿಗೆ ಬಹುಮಾನವನ್ನೂ ನೀಡಬೇಕೆಂದು ನಿರ್ಧರಿಸಿದರಂತೆ. ಅಂತೂ ಇಂತೂ ಒಬ್ಬರಿಂದ ಈ ಮೌನ ಭಂಗವಾಗಿ. ಬಹುಮಾನಕ್ಕೆ ಭಾಜನರೂ ಆದರಂತೆ. ಈ ಘಟನೆಯ ನಂತರ. ಎಲ್ಲರೂ ದಿಗ್ಭ್ರಾಂತರಾಗುವ ಮಟ್ಟಿಗೆ ಇನಾಂದಾರರು ವಾಚಾಳಿಗಳಾಗಿ ಬದಲಾದರಂತೆ. ಈ ವಾಚಾಳಿತನದ ಸೋಂಕು ಅಂಟಿಸಿದವರೂ ಯಾವಾಗಲೂ ಹೆಮ್ಮೆ ಪಡುತ್ತಿದ್ದರಂತೆ. ವಿಶ್ವವಿದ್ಯಾಲಯದ ಸೆನೇಟು, ಸಿಂಡಿಕೇಟು ಸಭೆಗಳಲ್ಲಿ ಸಾಮಾನ್ಯವಾಗಿ ಅವರೇ ಹೆಚ್ಚಿಗೆ ಮಾತಾಡುತ್ತಿದ್ದರಂತೆ.

ಯಾವಾಗಲೂ ಇನಾಂದಾರರಿಗೆ ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿ, ಕಾಲೇಜಿನ ಅಭಿವೃದ್ಧಿಯ ಕಾಳಜಿಯೇ ಹೆಚ್ಚಾಗಿ ಇರುತ್ತಿದ್ದುದರಿಂದ ಪ್ರಾಧ್ಯಾಪಕರಾಗಿದ್ದ ಪ್ರಾಂಶುಪಾಲರಾಗಿದ್ದ ಅವಧಿಗಳಲ್ಲಿ ಸಾಕಷ್ಟು ಒಳ್ಳೆಯ ಕೆಲಸಗಳನ್ನು ಮಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಪೂರ್ಣಪ್ರಜ್ಞಾ ಕಾಲೇಜಿಗೆ ಸಲ್ಲಿಸಿದ ಅತ್ಯಂತ ಮಹತ್ವದ ಸೇವೆಗಳೆಂದರೆ ಅಧ್ಯಯನ- ಅಧ್ಯಾಪನ ರೀತಿ ವಿಧಾನಗಳನ್ನು ರೂಪಿಸಿದ್ದು. ತಮಗಿಂತ ಕಿರಿಯರಾಗಿದ್ದವರು, ತರುಣ ಅಧ್ಯಾಪಕರು - ಮೊದಲಾದವರಿಗೆ ಒಳ್ಳೆಯ ಮಾರ್ಗದರ್ಶನ ನೀಡಿ. ಅವರು ಬೌದ್ಧಿಕವಾಗಿ ಬೆಳೆಯಲೂ ಸಾಕಷ್ಟು ಪ್ರೋತ್ಸಾಹ ನೀಡುತ್ತಿದ್ದರು. ಜೊತೆಗೆ ಕಾಲೇಜಿನ ಅಧಿಕಾರಿ ವರ್ಗ ಮತ್ತು ಅಧ್ಯಾಪಕರ ನಡುವೆ ಒಂದು ಬಗೆಯ ಆತ್ಮೀಯ ಸ್ನೇಹ ಸಂಬಂಧವನ್ನು ಗಾಢಗೊಳಿಸುವ ಪರಿಸರವನ್ನು ನಿರ್ಮಾಣ ಮಾಡಿದರು. ಅಧ್ಯಾಪಕರುಗಳ ಬಗ್ಗೆ ಗೌರವ ಮೂಡುವಂತಹ ವಾತಾವರಣ ಸೃಷ್ಟಿಸಿದರು. ಕಾಲೇಜಿಗೆ ಸಂಬಂಧಿಸಿದಂತೆ ಯಾವುದೇ ವಿಷಯವಾಗಲೀ, ಸಮಸ್ಯೆಯಾಗಲೀ ಸೌಹಾರ್ದಯುತವಾದ ರೀತಿಯಲ್ಲಿ ನಿರ್ವಹಿಸಿ, ಪರಿಹರಿಸುತ್ತಿದ್ದರು. ಅವರ ಆ ಬಗೆಯ ಕಾರ್ಯಶೈಲಿಯನ್ನು ಹರಿದಾಸಭಟ್ಟರು ಪದೇ ಪದೇ ಅನೇಕ ಘಟನೆಗಳ ಮೂಲಕ ಅನುಭವಕ್ಕೆ ಬಂದುದನ್ನು ನೆನಪಿಸಿಕೊಳ್ಳುತ್ತಿದ್ದರು. ಅಂತಹ ಒಂದು ಘಟನೆಯನ್ನು ತಮ್ಮ ಲೇಖನವೊಂದರಲ್ಲಿ ನೆನಪಿಸಿಕೊಂಡಿದ್ದಾರೆ. ೧೯೬೭-೬೮ ರ ಸುಮಾರಿನಲ್ಲಿ ಕರ್ನಾಟಕದಲ್ಲಿ ಕಾಲೇಜು ಶಿಕ್ಷಣಕ್ಕೆ ಹೊಸದಾಗಿ ಒಂದು ನಿರ್ದೇಶನಾಲಯ ರಚಿತವಾಗಿದ್ದು ಅದಕ್ಕೆ ದಾವರ್ ಎಂಬವರು ನಿರ್ದೇಶಕರಾಗಿದ್ದರಂತೆ. ಆಗ ಯಾವುದೋ ಒಂದೂರಿನ ಕಾಲೇಜಿನ ಪ್ರಿನ್ಸಿಪಾಲರು ಹಾಜರಾತಿ ವಿಷಯದಲ್ಲಿ ಒಂದು ತೊಡಕಿಗೆ ಸಿಲುಕಿಕೊಂಡಿದ್ದರಂತೆ. ೨೦-೩೦ ವಿದ್ಯಾರ್ಥಿಗಳ ಭವಿಷ್ಯದ ಪ್ರಶ್ನೆಯಾಗಿದ್ದು, ಪ್ರಿನ್ಸಿಪಾಲರುಗಳ ತಲೆಗೆ ಬಂತಂತೆ.

ಆ ಸಂದರ್ಭದಲ್ಲಿ ದಾವರ್ ಇನಾಂದಾರರೊಂದಿಗೆ ಪರಾಮರ್ಶಿಸಿ ಸಮಸ್ಯೆಗೆ ಪರಿಹಾರ ಕಾಣಿಸಿದರಂತೆ. ಅದೇ ರೀತಿ ಗ್ರಾಂಟ್ (ಅನುದಾನ) ಗೆ ಸಂಬಂಧಿಸಿದಂತೆ ಸಮಸ್ಯೆಯಾದಾಗ, ಇನಾಂದಾರರ ಮಧ್ಯ ಪ್ರವೇಶದಿಂದ ದಾವರ್ ಅವರಿಂದ ಗ್ರಾಂಟ್ ಮಂಜೂರು ಮಾಡಿಸಿಕೊಂಡರಂತೆ. ಇನಾಂದಾರರ ಮಾತಿಗೆ ದಾವರ್ ಇಷ್ಟೊಂದು ಬೆಲೆಕೊಡುತ್ತಿದ್ದುದು, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇಬ್ಬರೂ ಸಹೋದ್ಯೋಗಿಗಳಾಗಿದ್ದುದೇ ಅಲ್ಲದೆ, ಇನಾಂದಾರರ ಮೇಲೆ ದಾವರ್ ಅವರಿಗಿದ್ದ ಅಭಿಮಾನ, ಗೌರವಗಳ ಕಾರಣದಿಂದ ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಇಷ್ಟೆಲ್ಲ ಇದ್ದರೂ ಇನಾಂದಾರರು ಸ್ನೇಹಸುಲಭರಲ್ಲ. ಇದಕ್ಕೆ ಅವರಲ್ಲಿದ್ದ ಬಿಗುಮಾನ ಮತ್ತು ಬಿಗುತನಗಳೇ ಕಾರಣವೆಂಬ ಆರೋಪ ಇದ್ದೇ ಇರುತ್ತಿತ್ತು. ಯಾರೇ ಆಗಲಿ ಅವರ ನಿಕಟ ಸಂಪರ್ಕಕ್ಕೆ ಬಂದ ಹೊರತು ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಸಾಧ್ಯವಾಗುವುದಿಲ್ಲ ಎನ್ನುವವರೂ, ಅಭಿಮಾನಿಗಳೂ ಇದ್ದಾರೆ. ಇದಕ್ಕೆಲ್ಲ ಕಾರಣ ಇನಾಂದಾರರು ಯಾರನ್ನೆಂದರೆ ಅವರನ್ನು ಹತ್ತಿರಕ್ಕೆ ಸೇರಿಸಿಕೊಳ್ಳುವುದಿಲ್ಲ. ಸ್ನೇಹಿತರ ಆಯ್ಕೆಯಲ್ಲಿ ಬಹಳ ಜಾಗರೂಕತೆ ವಹಿಸುತ್ತಾರೆ. ತಮ್ಮ ಸ್ವಭಾವ, ಅಭಿರುಚಿ, ಮನೋಧರ್ಮಗಳಿಗೆ ಹೊಂದಿಕೆಯಾಗದ ಹೊರತು ಸ್ನೇಹ ಹಸ್ತ ಮುಂದಾಗುವುದಿಲ್ಲ. ಅದಕ್ಕಾಗಿಯೇ ಅವರ ಕುರಿತು ತಪ್ಪು ಕಲ್ಪನೆಗೆ ದಾರಿಯಾಗಿರುವುದೂ ಉಂಟು. ಇನಾಂದಾರರ ಹೊರ ನೋಟದ ಕಾಠಿನ್ಯದ ಅಂತರಾಳದಲ್ಲಿ ಸ್ನೇಹದ ಸೆಲೆ ಇರುವುದು ಸಾಕಷ್ಟು ಬಾರಿ ಹರಿದಾಸಭಟ್ಟರಿಗೆ ಅನುಭವಕ್ಕೆ ಬಂದಿದೆ. ಸ್ನೇಹಕ್ಕಾಗಿ ಅವರು ಹಾತೊರೆಯುವುದಿಲ್ಲವಾದರೂ ಅವರ ಸ್ನೇಹಕ್ಕೆ ಹಾತೊರೆದು ಬಂದವರಿಗೆ ಅವರ ಆತ್ಮೀಯವಾದ ಸ್ವಾಗತವಂತೂ ಶತಃಸಿದ್ಧ. ಅನೇಕ ವೇಳೆ ಕಷ್ಟದಲ್ಲಿ ಇರುವ ಸ್ನೇಹಿತರಿಗೆ ಅವರ ಆತ್ಮಾಭಿಮಾನಕ್ಕೆ ಧಕ್ಕೆ ಉಂಟಾಗದ ರೀತಿಯಲ್ಲಿ ನೆರವಿಗೆ ಮುಂದಾಗಿದ್ದಾರೆ.

ವಿದ್ಯಾರ್ಥಿಗಳ ಜೊತೆಗೂ ಅವರ ಸಂಬಂಧ ಬಹಳ ಸೌಹಾರ್ದಯುತವಾಗಿ ಇರುತ್ತಿತ್ತು. ಎಲ್ಲ ವಿದ್ಯಾರ್ಥಿಗಳೂ ಅವರನ್ನು ಬಹಳ ಪ್ರೀತಿ ಗೌರವಗಳಿಂದ, ಕಾಣುತ್ತಿದ್ದರು. ಅದಕ್ಕೆ ಕಾರಣ ಇನಾಂದಾರರು ತಮ್ಮ ವಿದ್ಯಾರ್ಥಿಗಳನ್ನೆಲ್ಲ, ತಮ್ಮ ಅದ್ಭುತವಾದ, ಆಕರ್ಷಕವಾದ ಉದ್ಬೋಧಕವಾದ ಶೈಲಿಯಿಂದ ಗತ್ತು–ಗಾಂಭೀರ್ಯಗಳಿಂದ ನಿಯಂತ್ರಿಸುತ್ತಿದ್ದರೇ ಹೊರತು, ಒಂದಾದರೂ ಕೆಟ್ಟ ಮಾತನ್ನು ಆಡಿದ್ದಿಲ್ಲ; ಅವರನ್ನು ಬೈದದ್ದಿಲ್ಲ. ನೋಡಲು ಸಾಧಾರಣ ನಿಲುವು ಸ್ಥೂಲ ಶರೀರ, ನೀಟಾದ ಸೂಟು, ಅದಕ್ಕೊಪ್ಪುವ ಟೈ, ಮಿಂಚುವ ಫುಲ್ ಬೂಟ್ಸ್, ಕನ್ನಡಕ, ಏರಿಕೊಂಡ ಹುಬ್ಬುಗಳು, ವಿಶಾಲ ಹಣೆ. ಕಪ್ಪು ಮಿಶ್ರಿತ ನೆರೆಗೂದಲು, ಕೈಯಲ್ಲೊಂದು ಅನಿವಾರ್ಯವಾದ ದಪ್ಪ ಬೈಂಡಿನ ದಪ್ಪ ಪುಸ್ತಕ – ಇದು

ಇನಾಂದಾರರ ಬಾಹ್ಯ ವ್ಯಕ್ತಿತ್ವ. ಇನಾಂದಾರರು ಕಾಲೇಜಿನ ಕಾರಿಡಾರ್‌ನಲ್ಲಿ ಬರುತ್ತಿದ್ದಂತೆ ಬೂಟುಗಳ ಖಟ್ ಖಟ್ ಸದ್ದು ಕೇಳಿಸುತ್ತಿದ್ದಂತೆ ವಿದ್ಯಾರ್ಥಿಗಳು ಗಪ್‌ಚಿಪ್ ಆಗುತ್ತಿದ್ದರು. ಇನ್ನು ಅವರು ತರಗತಿ ಒಳಗೆ ಪ್ರವೇಶಿಸಿ ಪಾಠ ಮಾಡಲು ಶುರುಮಾಡಿದರೆ, ಅದರಲ್ಲಿಯೂ ನಾಟಕ ಪಾಠವೆಂದರೆ ವಿದ್ಯಾರ್ಥಿಗಳು ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದರು. ಪಾಠ ಮಾಡುತ್ತಿದ್ದ ತರಗತಿ ವಿದ್ಯಾರ್ಥಿಗಳ ಜೊತೆಗೆ ಅಕ್ಕಪಕ್ಕದ ತರಗತಿಗಳ ವಿದ್ಯಾರ್ಥಿಗಳೂ ಪಾಠ ಕೇಳಲು ಬರುತ್ತಿದ್ದರು.

ಪಾಠ ಪ್ರವಚನಗಳಷ್ಟೇ ಸಮರ್ಥವಾಗಿ ಕಾಲೇಜಿನ ಆಡಳಿತವನ್ನೂ ನಡೆಸುತ್ತಿದ್ದರು. ಸಮಯ ಸಂದರ್ಭಗಳಿಗೆತಕ್ಕಂತೆ ಗಂಭೀರವಾಗಿಯೂ ಸಲುಗೆಯಿಂದಲೂ ಉತ್ಸಾಹದಿಂದಲೂ ವರ್ತಿಸುತ್ತಿದ್ದರು. ಮೂಲತಃ ಶಿಸ್ತೆಂಬುದು ಅವರ ಸ್ವಭಾವಜನ್ಯವಾದದ್ದು. ಎಂತಹ ಪರಿಸ್ಥಿತಿಯಲ್ಲಿಯೇ ಆಗಲಿ ಶಿಸ್ತನ್ನು ಬಿಟ್ಟುಕೊಡುತ್ತಿರಲಿಲ್ಲ; ನಿಯಮಗಳನ್ನು ಮೀರುತ್ತಿರಲಿಲ್ಲ. ಮೀರುವುದನ್ನು ಮತ್ತು ಮೀರುವವರನ್ನು ಸಹಿಸುತ್ತಲೂ ಇರಲಿಲ್ಲ.

ಶಿಕ್ಷಣ, ಪಾಠ ಪ್ರವಚನಗಳ ಸಂಬಂಧವಾಗಿ ಮಾತ್ರವಲ್ಲದೆ, ಕಾಲೇಜಿನಲ್ಲಿ ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳ ಕಡೆಗೂ ಅವರು ಗಮನ ನೀಡುತ್ತಿದ್ದರು. ಪ್ರಿನ್ಸಿಪಾಲರಾದ ಮೇಲಂತೂ ತಾವು ಕೆಲಸಮಾಡಿದ ಕಾಲೇಜುಗಳಲ್ಲಿನ ಕನ್ನಡ ಸಂಘಗಳ ಚಟುವಟಿಕೆಗಳನ್ನು ಚುರುಕುಗೊಳಿಸಿ, ಹೊಸ ಉತ್ಸಾಹ ಹುಮ್ಮಸ್ಸನ್ನು ತುಂಬಿ, ನಾಡಹಬ್ಬ, ಉಪನ್ಯಾಸ, ಗೋಷ್ಠಿಗಳು, ಉದ್ಘಾಟನಾ ಸಮಾರಂಭಗಳು. ವಿಚಾರ ಸಂಕಿರಣಗಳು–ಮುಂತಾದವುಗಳನ್ನು ಆಯೋಜಿಸಿ ಪ್ರೋತ್ಸಾಹ ನೀಡುತ್ತಿದ್ದರು. ಇಂತಹ ಚಟುವಟಿಕೆಗಳನ್ನು ನಡೆಸಬೇಕಾದಲ್ಲಿ ಅವರ ಸ್ನೇಹ ಸಂಬಂಧಗಳು, ಪ್ರೀತಿ ವಿಶ್ವಾಸಗಳು ಗಾಢವಾಗಿ ಇರಬೇಕಾದುದು ಅನಿವಾರ್ಯ ವಾಗಿರುತ್ತಿತ್ತು. ಅಧ್ಯಾಪಕರ ವಿದ್ಯಾರ್ಥಿಗಳ ಅಂತಸ್ಸತ್ವ, ಸುಪ್ತ ಪ್ರತಿಭೆಗಳನ್ನು ಗುರುತಿಸಿ ಅವುಗಳ ಪ್ರಕಾಶಕ್ಕೆ, ಅಭಿವ್ಯಕ್ತಿಗೆ ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದರು; ಹುರಿದುಂಬಿಸುತ್ತಿದ್ದರು. ಪ್ರತಿವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯಾಗ ಬೇಕೆಂದು ಬಲವಾಗಿ ನಂಬಿದ್ದರು. ಇವರು ನಡೆಸುತ್ತಿದ್ದ ಅಧ್ಯಾಪಕರ ಸಭೆಗಳು ಒಂದು ಮಾದರಿಯಾಗಿದ್ದವು. ಆ ಕಾಲದಲ್ಲೇ– ಇವರು ಮಹಿಳೆಯರಿಗಾಗಿ ಪ್ರತ್ಯೇಕವಾಗಿ ಲೇಡಿಸ್ ಕ್ಲಬ್ ಅನ್ನು ಅಸ್ತಿತ್ವಕ್ಕೆ ತಂದರು. ಅವರದೇ ಕಾರ್ಯಕ್ರಮ ಗಳನ್ನು ಆಯೋಜಿಸಲು ಅನುವು ಮಾಡಿಕೊಟ್ಟರು. ವಿದ್ಯಾರ್ಥಿಗಳ ಅಧ್ಯಾಪಕರ, ಅನುಕೂಲಕ್ಕಾಗಿ ಮತ್ತು ಅವರ ಅಧ್ಯಯನಕ್ಕೆ ಪೂರಕವಾಗಿ ಒಂದು ಗ್ರಂಥಾಲಯ, ಓದಿನ ಕೊಠಡಿಯನ್ನು ಒದಗಿಸಿಕೊಡುವುದರ ಕಡೆಗೆ ಹೆಚ್ಚಿನ ಗಮನ ನೀಡಿದರು. ಇದರಿಂದಾಗಿ ಇವರ ಜ್ಞಾನಾರ್ಜನೆಯ ಬಗೆಗಿನ ಕಾಳಜಿ ಎಷ್ಟಿತ್ತೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಒಮ್ಮೆಲೇ ಹೊರನೋಟಕ್ಕೆ ಕಾಣಿಸಿಕೊಳ್ಳದ ಇವರ ಸ್ನೇಹ ಪ್ರವೃತ್ತಿ. ಶಿವರಾಮ ಕಾರಂತ, ವಿ.ಸೀ. ಚೆನ್ನವೀರ ಕಣವಿ, ವ್ಯಾಸರಾಯ ಬಲ್ಲಾಳ ಮೊದಲಾದ ಹಿರಿಕಿರಿಯ ಸಾಹಿತಿಗಳ ಅನುಭವಗಳಿಂದ ಅಭಿಪ್ರಾಯಗಳಿಂದ, ಹೇಗಿತ್ತೆಂಬುದು ನಿದರ್ಶನ ಪೂರ್ವಕವಾಗಿ ಅರಿವಿಗೆ ಬರುತ್ತದೆ.

ಕಾರಂತರು ಇನಾಂದಾರರ ಪರಿಚಯವುಳ್ಳವರಾಗಿದ್ದರೂ ಮುಖತಃ ಭೇಟಿ ಆದ ಸಂದರ್ಭಗಳು ಬಹಳ ಕಡಿಮೆ. ಒಮ್ಮೆ ಇನಾಂದಾರರು ಧಾರವಾಡದ ಕರ್ನಾಟಕ ಕಾಲೇಜಿಗೆ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಮುಂಬಯಿಯಿಂದ ಬಂದ ಅವಧಿಯಲ್ಲಿ ಕಾರಂತರು ಯಕ್ಷಗಾನ ಕುರಿತು ಮೂರು ಉಪನ್ಯಾಸಗಳನ್ನು ನೀಡಿದರಂತೆ. ಇನಾಂದಾರರು ಯಕ್ಷಗಾನದ ಬಗ್ಗೆ ತೋರಿದ್ದ ಆಸಕ್ತಿ ಕಾರಂತರ ಗಮನಕ್ಕೆ ಬಂದಿದ್ದೇ, ಇವರನ್ನು ಯಕ್ಷಗಾನ ಪ್ರದರ್ಶನಗಳಾದ ಕಡೆಗೆಲ್ಲ ಕರೆದುಕೊಂಡು ಹೋಗುತ್ತಿದ್ದರಂತೆ. ಇನಾಂದಾರರು ಲೇಖನಗಳನ್ನು ಬರೆಯುತ್ತಿದ್ದ ವಿಷಯವನ್ನು ಬಲ್ಲವರಾಗಿದ್ದರೂ ತಮ್ಮದೇ ಸಮಗ್ರ ಕೃತಿಗಳನ್ನು(ಕಾದಂಬರಿ) ಕುರಿತು ಬರೆಯುತ್ತಿದ್ದ ವಿಷಯ ತಿಳಿದಿರಲಿಲ್ಲವಾಗಿ ಕೃತಿಯನ್ನು ತಮಗೆ ನೀಡಿದಾಗ ತುಂಬಾ ಅಚ್ಚರಿ ಮತ್ತು ಸಂತೋಷಗಳೊಂದಿಗೆ "ನನ್ನ ಬರವಣಿಗೆಗಳಲ್ಲಿ ನಾನು ಏನೆಲ್ಲ ಬರೆದಿದ್ದೇನೆಂದು ನನಗೇ ನೆನಪಿಲ್ಲದೆ ಹೋದರೂ, ನಾನು ಬರೆದುದೆಲ್ಲವನ್ನೂ ಹೇಗೆ ನೆನಪಿಸಿಕೊಂಡು ವಿಮರ್ಶಿಸಿದರೋ– ಎಂಬ ಆಶ್ಚರ್ಯ ನನಗೆ. ಅವರಷ್ಟು ಸಮಗ್ರವಾಗಿ ನನ್ನ ಬರಹಗಳ ವಿಮರ್ಶೆಯನ್ನು ಇನ್ನಾರೂ ಮಾಡಿಲ್ಲ ಎನ್ನಬಹುದು. ವಿಮರ್ಶೆಗೆಬೇಕಾದ ಆಧುನಿಕ ದೃಷ್ಟಿ ಅವರಲ್ಲಿದ್ದರೂ ಆಧುನಿಕತೆಯನ್ನು ಮೆರೆಸುವ ದೃಷ್ಟಿ ಅವರದಲ್ಲ. ವ್ಯಕ್ತಿಯನ್ನು ಮರೆತು ವಸ್ತುವನ್ನಷ್ಟೆ ತೂಗಿ ಹೇಳುವ ಗುಣ ಅವರಲ್ಲಿದೆ" ಎಂದು ಇನಾಂದಾರರ ವಿಮರ್ಶಾ ಪ್ರಜ್ಞೆಯ ಬಗ್ಗೆ ಮೌಲಿಕವಾದ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ.

ಇವರ ವಿದ್ಯಾರ್ಥಿಯಾಗಿದ್ದ ಚೆನ್ನವೀರ ಕಣವಿಯವರು ಇವರ ಇಂಗ್ಲಿಷ್ ಪಾಠ ಮಾಡುವ ರೀತಿಯ ಬಗ್ಗೆ ವಿವರಿಸಿದ್ದಾರೆ. "ಐಚ್ಛಿಕ ಇಂಗ್ಲಿಷಿನ ತರಗತಿ ಚಿಕ್ಕದಾಗಿರುತ್ತಿದ್ದುದರಿಂದ ಇನಾಂದಾರರ ಪಾಠ ಪ್ರವಚನ ನಿಸ್ಸಂಕೋಚವಾಗಿ. ನಿರರ್ಗಳವಾಗಿ ಸಾಗುತ್ತಿತ್ತು. ಸೃಜನಶೀಲ ಲೇಖಕ ವಿಮರ್ಶಕ ಹಾಗೂ ಅಧ್ಯಾಪಕ– ಈ ಮೂರರ ಮೆರುಗು ಅವರಲ್ಲಿ ಒಡೆದೆದ್ದು ಕಾಣುತ್ತಿತ್ತು" ಎಂದು ವಿವರಿಸಿದ್ದಾರೆ. ಇವುಗಳ ಜೊತೆಗೆ ಒಬ್ಬ ಅಧ್ಯಾಪಕನಿಗೆ, ಗೊರೂರರು ವಿವರಿಸುವಂತೆ ಆಳವಾದ ಪಾಂಡಿತ್ಯ. ಮನುಷ್ಯನ ಸ್ವಭಾವದ ಸೂಕ್ಷ್ಮಾತಿ ಸೂಕ್ಷ್ಮ ಅನುಭವಗಳು, ಮತ್ತು ಅಖಂಡವಾದ ಜ್ಞಾಪಕಶಕ್ತಿ. ವಿವೇಚನಾ ಸಾಮರ್ಥ್ಯಗಳೂ ಮುಪ್ಪುರಿಗೊಂಡು ಇದ್ದವು.

ವ್ಯಾಸರಾಯ ಬಲ್ಲಾಳರಿಗೆ ಇನಾಂದಾರರ ಪರಿಚಯವಾದದ್ದು ಪ್ರಗತಿಶೀಲ ಚಳುವಳಿಯ ಆರಂಭದ ಕಾಲಘಟ್ಟವಾದ ೪೦ ರ ದಶಕದಲ್ಲಿ, ಮುಂಬಯಿಯ ಕರ್ನಾಟಕ ಸಂಘದ ಆಶ್ರಯದಲ್ಲಿ ನಡೆದ ವಿಚಾರ ಗೋಷ್ಠಿಯಲ್ಲಿ. ಇನಾಂದಾರರೂ ಆ ಗೋಷ್ಠಿಯಲ್ಲಿ ಭಾಗವಹಿಸಿದ್ದನ್ನು ನೆನಪಿಸಿಕೊಳ್ಳುತ್ತಿದ್ದರು. ಇನಾಂದಾರರ ಕಾದಂಬರಿಗಳ ಬಗ್ಗೆ ಅಪಾರವಾದ ಮೆಚ್ಚುಗೆ ಇರಿಸಿಕೊಂಡಿದ್ದರು.

ಹೀಗೆ ಇನಾಂದಾರರ ವ್ಯಕ್ತಿತ್ವ ಗುಣ ಸ್ವಭಾವ ಮನೋಧರ್ಮಗಳ ಸಮಗ್ರ ಚಿತ್ರ ಮೂಡಿಸುವಲ್ಲಿ ಅವರ ಸಂಬಂಧವಲಯದಲ್ಲಿನ ಮಿತ್ರರು, ಮನೆಯವರು, ಸಹ ಲೇಖಕರು, ವಿದ್ಯಾರ್ಥಿಗಳು, ಸಹೋದ್ಯೋಗಿಗಳು ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಇವರ ಅಭಿಮಾನಿ ಓದುಗರ ಅಭಿಪ್ರಾಯಗಳು ಮಹತ್ವದ ಪಾತ್ರ ವಹಿಸಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಸಂಕ್ಷೇಪವಾಗಿ ಹೇಳಬೇಕಾದರೆ ಅವರ ವಿದ್ಯಾರ್ಥಿಯೂ ಆಗಿದ್ದು ನಂತರ ಅದೇ ಕಾಲೇಜಿನಲ್ಲಿ ಅಧ್ಯಾಪಕರಾಗಿಯೂ ಕೆಲಸ ಮಾಡಿದ, ಇವರ ಒಡನಾಟದಲ್ಲಿದ್ದ ನಟರಾಜ ದೀಕ್ಷಿತ್ ಎನ್ನುವವರು ಅವರನ್ನು ಮೊದಲಿನಿಂದ ಗಮನಿಸುತ್ತಾ ಬಂದವರಾಗಿದ್ದು, ಇವರನ್ನು ಆಂತರಿಕ-ಬಾಹ್ಯ ವ್ಯಕ್ತಿತ್ವಗಳ ಪೂರ್ಣತ್ವ ಪಡೆದ ಕೆಲವೇ ಕೆಲವು ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು ಎಂದು ಮುಕ್ತವಾಗಿ, ಮೆಚ್ಚುಗೆಯ ಮಾತುಗಳ ಮೂಲಕ ಇವರ ವ್ಯಕ್ತಿತ್ವದ ಸಮಗ್ರ ನೋಟವನ್ನು ಅದ್ಭುತವಾದ ರೀತಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಎಂ.ವಿ.ವೆಂಕಟೇಶಮೂರ್ತಿಯವರಂತೂ ವಿ.ಸೀ. ಅವರ ಮನೆಯಲ್ಲಿ ಇನಾಂದಾರರ ಪರಿಚಯವಾದಾಗಿನಿಂದಲೂ ಬಹಳ ಹತ್ತಿರದಿಂದ ಅವರ ಗುಣ-ಸ್ವಭಾವ ನಡವಳಿಕೆ ಮನೋಧರ್ಮ. ಸಾಹಿತ್ಯದ ಬಗೆಗಿನ ತಾತ್ವಿಕ ನಿಲುವುಗಳು ಮತ್ತು ಅವರ ಗಂಭೀರ ಲಹರಿಗಳು (Musical) ಮೊದಲಾದವನ್ನು ಸೂಕ್ಷ್ಮವಾಗಿ ಗಮನಿಸಿದವರು ಇನಾಂದಾರರನ್ನು ಕುರಿತು ಹೀಗೆ ಬರೆಯುತ್ತಾರೆ. "ಸದಾ ಹೆಚ್ಚು ಅಂತರ್ಮುಖಿಯಾಗಿರುತ್ತಿದ್ದರು. ಸ್ವಭಾವತಃ introvert reserved ಎನ್ನಬಹುದಾದವರು. ಕುರ್ಚಿಯ ಮೇಲೆ ಟೀ ಕುಡಿಯುತ್ತಾ, ಸಿಗರೇಟು ಹಚ್ಚಿ ಹಿಡಿದು, ಅರೆ ಕಣ್ಣು ಮುಚ್ಚಿ ಏನನ್ನೋ 'ಧೇನಿಸುತ್ತ' ತಮ್ಮದೇ ಅದ ಕಲ್ಪನೆಯ ಜಗತ್ತಿನಲ್ಲಿ ವಿಹರಿಸುತ್ತ ಇರುವಂತಿದ್ದುದ್ದೇ ಹೆಚ್ಚು. ಅದು ಅವರ ಚಿಂತನಪರ ಸ್ಥಿತಿ. ಮಾತಿನಲ್ಲಿ ಅವರು ಮಿತವ್ಯಯಿ. ಅಪವ್ಯಯವಂತೂ ಇಲ್ಲವೇ ಇಲ್ಲ, ಸಲ್ಲ! ಏನಂತೀರಿ; ಎಂದು ಮೊದಲಾಗಿ ಎಲ್ಲಿಯವರೆಗೆ ಬಂತು, ಏನು ನಡೀತಿದೆ? ಇತ್ಯಾದಿಯ ಜಾಡಿನಲ್ಲಿಯೂ ಮುಂದುವರೆದು ಮುಗಿಯುತ್ತಿತ್ತು. ಹೇಳ ಬೇಕೆನಿಸಿದುದನ್ನು ಒಂದೆರಡು ಮಾತುಗಳಲ್ಲಿ ಹೇಳಿ ಮುಗಿಸುತ್ತಿದ್ದರೇವಿನಾ ಮಾತು ಪೋಲು ಮಾಡುತ್ತಿರಲಿಲ್ಲ. ಚಿತ್ತ ನಡೆಸಿದಾಗ ಮನಸ್ಸು ತೆರೆದು ಮಾತನಾಡುತ್ತಿದ್ದರಾದರೂ ಅಂಥದು ವಿರಳ. ಆದರೆ ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಉತ್ತಮ ವಾಗ್ಮಿ" ಎನ್ನುತ್ತಾರೆ.

ಮಾತಿನಷ್ಟೇ ಹಣದ ವಿಚಾರದಲ್ಲಿಯೂ ಸಂಯಮಿ. ದುಂದುವೆಚ್ಚವಾಗಲೀ ಆಡಂಬರದ ಬದುಕಿನ ಶೈಲಿಯಾಗಲೀ ಇವರದಾಗಿರಲಿಲ್ಲ. ಬಡತನದ ಬವಣೆಯಲ್ಲಿ ಸರಳತೆ, ಮಿತವ್ಯಯತೆಗಳಿಂದ ಸಾದಾ ಜೀವನ ರೂಢಿಸಿಕೊಂಡಿದ್ದ ರಿಂದ, ಸಾಲ ಸೋಲಗಳಿಗೆ ಗುರಿಯಾಗದೆ, ತಮ್ಮ ಜೀವನದ ಗುರಿಯನ್ನು ಸಾರ್ಥಕತೆಯೊಂದಿಗೆ ತಲುಪಿ ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಉತ್ತಮ ಲೇಖಕರಾಗಿ ಗುರುತಿಸಿಕೊಂಡು ನಿಲ್ಲಲು ಸಾಧ್ಯವಾಯಿತು. ಮುಕ್ತ ಕಂಠದಿಂದ ಇನಾಂದಾರರ ಬಗ್ಗೆ ಮೆಚ್ಚುಗೆಯ ಮಾತುಗಳನ್ನು ಬರೆದ ಇದೇ ವೆಂಕಟೇಶಮೂರ್ತಿ ಯವರು, ಇನಾಂದಾರರನ್ನು ಕೆಲವರು ಟೀಕಿಸಲು ಕಾರಣವೇನಿತ್ತೆಂಬುದನ್ನು ವಿವರಿಸುತ್ತಾರೆ.

"ಅಪ್ರಿಯವಾದರೂ ಒಂದನ್ನು ಹೇಳಬೇಕು: ಕಾರಣ ಏನೇ ಇದ್ದರೂ ಅವರ ಅನಪೇಕ್ಷಿತ, ಅಸಾಮಯಿಕ ಮೌನ ಒಮ್ಮೊಮ್ಮೆ ಅವರನ್ನು ಹತ್ತಿರದಿಂದ ಬಲ್ಲ ಸ್ನೇಹಿತರಿಗೂ ಇರಿಸು ಮುರಿಸನ್ನು ಉಂಟು ಮಾಡುತ್ತಿತ್ತು. ತೀರಾ ಅಗತ್ಯವಾಗಿದ್ದಾಗಲೂ ಹಲವಾರು ತಿಂಗಳು ಅವರಿಂದ ಯಾವುದೇ ಸುದ್ದಿ ಬಾರದೆ ಹೋಗಿ ಅವರ ಬಗೆಗೆ ಒಂದು ಬಗೆಯ ಉಪೇಕ್ಷೆಯ ಭಾವನೆ ಬೆಳೆಯಲೂ ಅವರನ್ನು ತಪ್ಪು ತಿಳಿಯಲೂ ಅವಕಾಶವಾಗುತ್ತಿತ್ತು. ದೀರ್ಘ ಕಾಲದ ಅವರ ಸ್ನೇಹಿತರೂ ಅಂಥ ಕೆಲವು ಸಂದರ್ಭಗಳಲ್ಲಿ ಬೇಸರಪಟ್ಟುಕೊಂಡದ್ದನ್ನು ನಾನು ಬಲ್ಲೆ. ಆದರೆ ಅಂಥ ನಡೆ ಬಹುಶಃ ಉದ್ದೇಶ ಪೂರ್ವಕವಾದ್ದಲ್ಲದ್ದರಿಂದ ಇನಾಂದಾರರನ್ನು ಮಾತ್ರವೆ ಹೊಣೆಗಾರರನ್ನಾಗಿಸುವುದು ತಪ್ಪಾಗುತ್ತದೇನೋ" ಎಂದು ಹೇಳಿರುವ ಮಾತುಗಳಲ್ಲಿ ಇನಾಂದಾರರ ಈ ನಡೆಯನ್ನು ಸಮರ್ಥಿಸುವ ನಿಲುವು ಕಾಣಿಸುತ್ತದೆ.

ಇಂಥ ಇನಾಂದಾರರು ಕಡೆಯ ದಿನಗಳಲ್ಲಿ ಉಸಿರಾಟದ ತೊಂದರೆ, ಕ್ಯಾನ್ಸರ್‌ನಿಂದಾಗಿ ಬಹಳವಾಗಿ ಬಳಲಿದರು. ಅನಾರೋಗ್ಯದ ಎಲ್ಲ ಸಮಸ್ಯೆಗಳಿಗೆ ಚಿಕಿತ್ಸೆಯನ್ನೂ ಪಡೆಯುತ್ತಿದ್ದರಲ್ಲದೆ ಬೇಗನೆ ಗುಣ ಮುಖವಾಗಿ ತಮ್ಮ ಜೀವವಾಗಿದ್ದ ಬರವಣಿಗೆಯ ಕಾಯಕಕ್ಕೆ ಮರಳುವ ಭರವಸೆಯನ್ನೂ ಹೊಂದಿದ್ದರು. ವೆಂಕಟೇಶ ಮೂರ್ತಿಯವರೊಂದಿಗೆ, ತಾವು ಕೇಂದ್ರಸಾಹಿತ್ಯ ಅಕಾಡೆಮಿಗಾಗಿ "Problems of Translating Sanskrit Classics' ಎಂಬ ವಿಷಯುವಾಗಿ ಲೇಖನ ಬರೆದುಕೊಡುವ ಸಿದ್ಧತೆಯಲ್ಲಿ ಇರುವುದನ್ನೂ ತಿಳಿಸಿದರು. ಜೊತೆಗೊಂದು ಕಾದಂಬರಿಯನ್ನೂ ಬರೆಯುವ ಹವಣಿಕೆಯಲ್ಲಿದ್ದು. ಮೂರ್ತಿಯುವರನ್ನು, (ಕೆನಡಾದಿಂದ ಮೈಸೂರಿಗೆ ಬಂದ ಮೇಲೆ) "I need some help from you and your friends there (Mysore). I can't hold my pen between my fingers. I have to only dictate hereafter" ಎಂದು ಕೇಳಿಕೊಂಡರಂತೆ.

ಸಾಕಷ್ಟು ಸಮಯ ಅವರೊಂದಿಗೆ ಆತ್ಮೀಯವಾದ ಕ್ಷಣಗಳನ್ನು ಕಳೆದ ಇನಾಂದಾರರು, ತಮ್ಮ ಕೃತಿಗಳ ಬಗ್ಗೆ ಸಮೀಕ್ಷಾ ಲೇಖನವನ್ನು ಬರೆದ ಇವರ ಗೆಳೆಯ ಜೋಶಿಯವರ ಲೇಖನದ ಮುಕ್ತಾಯದ ಸಾಲುಗಳನ್ನು ನೆನಪಿಸಿಕೊಂಡರಂತೆ. ಜೋಶಿಯವರು "ಕೆಲವರಿಗೆ ಅಂತ್ಯ ಸಮೀಪಿಸಿದಂತೆ ಮರಣಾಂತರದ ಜನ್ಮಾಂತರದ ಚಿಂತೆ ಆರಂಭವಾಗುತ್ತದೆ. ಹಿಂದೆ ಹಣವನ್ನು ಗಳಿಸುವಾಗ ಯಾರಿಗೆ ಏನು ಅನ್ಯಾಯ ಮಾಡಿದೆ, ಕಷ್ಟಕೊಟ್ಟು ಅದಕ್ಕೆ ನಾನು ಯಾವ ಶಿಕ್ಷೆ ಎದುರಿಸಬೇಕಾದೀತು ಎಂದಲ್ಲಿ ಗಾಭರಿಯಾಗುತ್ತದೆ. ಅದೇ ತನ್ನ ಸಂಪಾದನೆಯೆಲ್ಲ ಧರ್ಮದಿಂದ ಮಾಡಿದ್ದು ಎಂಬ ವಿಶ್ವಾಸವಿರುವವನಿಗೆ ಇಂತಹ ಚಿಂತೆಗಳು ಇರುವುದಿಲ್ಲ. ಅಂಥವನಿಗೆ ತನ್ನ ಸಂಪತ್ತಿನಿಂದ ಒಂದು ವಿಧದ ಸ್ವಾತಂತ್ರ್ಯ ಸಮಾಧಾನಗಳು ಇರುತ್ತವೆ. ತಾನು ಯಾರನ್ನೂ ವಂಚಿಸಬೇಕಿಲ್ಲ ಸುಳ್ಳು ಹೇಳ ಬೇಕಿಲ್ಲ. ಸಾಲ ಕೊಟ್ಟವರನ್ನು ತಪ್ಪಿಸಿಕೊಳ್ಳಬೇಕಿಲ್ಲ; ದೇವತೆಗಳಿಗೆ ಸಲ್ಲಿಸಬೇಕಾದ್ದನ್ನು ನಿಲ್ಲಿಸಿಕೊಂಡೆನೆಂಬ ಭೀತಿಯಿಲ್ಲ ಎಂದುಕೊಂಡು ಸುಖಿಯಾಗಿರುತ್ತಾನೆ."– ಎಂಬ ಸೋಕ್ರಟೀಸ್ ಮತ್ತು ಸಿಫಾಲೆಸ್‌ರ ಮಾತುಗಳನ್ನು ಉದ್ಧರಿಸಿ– "ಸಿಫಾಲೆಸ್‌ನ ಈ ಯೋಗವನ್ನು ಇನಾಂದಾರರು ನಡೆಸಿಕೊಂಡು ಬಂದಿದ್ದಾರೆ" ಎಂದು ಹೋಲಿಸಿ ಹೇಳಿದ್ದನ್ನು ಓದಿದ ಇನಾಂದಾರರಿಗೆ ಸಹಜವಾಗಿ ಹೃದಯ ತುಂಬಿ ಬಂದು, "I did not know that he had so much of regard towards me. I am greatfull for it. I did not know I deserved so much".- ಎಂದು ಉದ್ದರಿಸಿದರಂತೆ.

ಇಂತಹ ಹತ್ತಾರು ಸಂಮಿಶ್ರ ಸಂಕೀರ್ಣ ಗುಣ ಸ್ವಭಾವಗಳಿಂದ ಕೂಡಿ ಕೆಲವರಿಗೆ ನಿಗೂಢ ವ್ಯಕ್ತಿಯಾಗಿ, ಮತ್ತೆ ಕೆಲವರಿಗೆ ಅಹಂಕಾರಿಯಾಗಿ, ಮತ್ತೂ ಕೆಲವರಿಗೆ ಆತ್ಮೀಯ, ಸ್ನೇಹಪ್ರಿಯ, ಸರಳ ಸಜ್ಜನಿಕೆಯ ಸಾಕಾರ ರೂಪವಾಗಿ ಕಾಣಿಸಿಕೊಳ್ಳುತ್ತಿದ್ದ ಇನಾಂದಾರರು ವಿದ್ವತ್ತು ಸೃಜನಶೀಲತೆಗಳೆರಡನ್ನು ಒಗ್ಗೂಡಿಸಿಕೊಂಡು ಅರ್ಥಪೂರ್ಣವಾದ ಬದುಕನ್ನು ಬದುಕಿದವರು ೨೬ನೇ ಜನವರಿ ೧೯೮೬ರಲ್ಲಿ ಪೂಣೆಯಲ್ಲಿ ಕೊನೆಯುಸಿರೆಳೆದು. ಸಾಹಿತ್ಯ ಲೋಕದಿಂದ ಭೌತಿಕವಾಗಿ ಕಣ್ಮರೆಯಾದರೂ ಅವರ ಅಪಾರವಾದ ಸಾಹಿತ್ಯರಾಶಿ ಅವರ ಬಗ್ಗೆ, ಅವರ ಸಾಧನೆಯ ಬಗ್ಗೆ ನಿರಂತರವಾಗಿ ಮಾತನಾಡುತ್ತಿರುತ್ತದೆ.



# ಇನಾಂದಾರರ ಸಾಹಿತ್ಯ ಸಾಧನೆ

ವೃತ್ತಿಯಲ್ಲಿ ಪ್ರಾಧ್ಯಾಪಕರು, ಪ್ರಾಂಶುಪಾಲರೂ ಆಗಿದ್ದವರು, ಶೈಕ್ಷಣಿಕ ವಲಯದಲ್ಲಿ ಅನನ್ಯ ಪ್ರಾಧ್ಯಾಪಕರು, ಸಮರ್ಥ ಅಡಳಿತಗಾರರು ಅತ್ಯಂತ ಶಿಸ್ತಿನ ಪ್ರಾಂಶುಪಾಲರು ಎನಿಸಿಕೊಂಡರು. ವಿದ್ಯಾರ್ಥಿಗಳ ಆರಾಧ್ಯರು ಎಂದು ಗುರುತಿಸಿಕೊಂಡು ನಿವೃತ್ತರಾದರೂ ಇನಾಂದಾರರು ಪ್ರವೃತ್ತಿಯಿಂದ ಸೃಜನಶೀಲ ಲೇಖಕರಾಗಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗುರುತಿಸಿಕೊಂಡಿದ್ದವರು. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಪ್ರಯೋಗಶೀಲರಾಗಿ ಮಹತ್ವದ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ.

ನಲವತ್ತಕ್ಕೂ ಹೆಚ್ಚಿನ ಕೃತಿಗಳನ್ನು, ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ರಚಿಸಿ, ಎರಡೂ ಭಾಷೆಗಳ ಮೇಲೆ ತಮಗಿದ್ದ ಪ್ರಭುತ್ವವನ್ನು ಸಾಬೀತು ಪಡಿಸಿದ್ದಾರೆ. ವಾಸ್ತವವಾಗಿ ಎಲ್ಲ ಪ್ರಕಾರಗಳಲ್ಲಿಯೂ ಅವರ ಸಾಹಿತ್ಯಿಕ ಕೊಡುಗೆಯಿದ್ದರೂ ಥಟ್ಟನೆ ಅವರನ್ನು ನೆನಪಿಸಿಕೊಳ್ಳುವಾಗ, ಕಾದಂಬರಿಕಾರರಾಗಿಯೇ ನಮಗೆ ಕಾಣಿಸಿಕೊಳ್ಳುತ್ತಾರೆ, ಕಾರಣ ಕಾದಂಬರಿಗಳಿಗೆ ಓದುಗರು ಅಪಾರ ಸಂಖ್ಯೆಯಲ್ಲಿ ಇರುತ್ತಾರೆ ಅಲ್ಲದೆ ಮೊದಲಿನಿಂದಲೂ ಜನಮಾನಸಕ್ಕೆ ಕಥಾ ಸಾಹಿತ್ಯ ಬಹಳ ಹತ್ತಿರವಾದದ್ದು. ಜೊತೆಗೆ, ಇನಾಂದಾರರು ಬೇರೆ ಬೇರೆ ಸಾಹಿತ್ಯ ಕೃತಿಗಳನ್ನು– ವಿಮರ್ಶೆ, ಮೀಮಾಂಸೆ, ವಿಚಾರ, ಜೀವನ ಚರಿತ್ರೆ, ಅನುವಾದ– ಹೀಗೆ ಇವೆಲ್ಲಕ್ಕೂ ಸಂಬಂಧಿಸಿದಂತೆ, ಅತ್ಯಂತ ಗಂಭೀರವಾದ, ವಿದ್ವತ್ಪೂರ್ಣವಾದವುಗಳನ್ನು– ರಚಿಸಿದ್ದಾರಾದರೂ, ಇವರ ಆದ್ಯತೆ ಮತ್ತು ಒಲವುಗಳು ಕಾದಂಬರಿಗೆ ಸಂಬಂಧಿಸಿದಂತೆಯೇ ಹೆಚ್ಚಾಗಿಯೂ ಗಾಢವಾಗಿಯೂ ಇರುವಂಥವು.

ಇವರಿಗಿದ್ದ ಸೃಜನಶೀಲ ಪ್ರತಿಭೆ, ವಿಮರ್ಶಕ ಮನೋಧರ್ಮ, ಮುಂಬಯಿಯ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಎಂ.ಎ. ಓದುವಾಗಲೇ ಕಾಣಿಸಿಕೊಂಡದ್ದು. ಇವರ ಎರಡು ಇಂಗ್ಲಿಷ್ ಲೇಖನಗಳು, "Moral Problem in Shakunthala' ಮತ್ತು 'Heroines in Sanskrit Drama –ಇವೆರಡಕ್ಕೂ ಸಾಕಷ್ಟು ಪ್ರಶಂಸೆ ಮತ್ತು ಪುರಸ್ಕಾರಗಳು ದೊರೆತಾಗ ಇದರಿಂದ ಸ್ಫೂರ್ತಿ ಮತ್ತು ಆತ್ಮವಿಶ್ವಾಸ, ಭರವಸೆಗಳು ಖಾತ್ರಿಗೊಂಡು ಹಲ ಕೆಲವು ಪತ್ರಿಕೆಗಳಿಗೆ, ತ್ರಿವೇಣಿ, ಜಯಂತಿ, ಆರ್ಯನ್ ಪಾಥ್, ಇಂಡಿಯನ್ ಪೆನ್‌ಗಳಿಗೆ ಅಂಕಣಗಳನ್ನು ಬರೆಯುತ್ತಿದ್ದರು.

ಅವರ ಬರವಣಿಗೆ ಪ್ರಾರಂಭವಾದದ್ದು ಇಂಗ್ಲಿಷಿನಲ್ಲಿ, ಇದಕ್ಕಿದ್ದ ಒಂದು ಕಾರಣ, ಅವರು ಇಂಗ್ಲಿಷ್ ಓದಿದವರಾಗಿದ್ದದ್ದು ಮತ್ತು ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದದ್ದು. ಇದರ ಜೊತೆಗೆ ಆಗಿನ ಕಾಲದಲ್ಲಿ ಕನ್ನಡವೆಂದರೆ ಮೂಗುಮುರಿಯುತ್ತಿದ್ದರು. ಬರೆದರೆ ಇಂಗ್ಲಿಷಿನಲ್ಲಿಯೇ ಬರೆಯಬೇಕು ಕನ್ನಡದಲ್ಲಿ ಅಂಥಾದ್ದೇನಿದೆ ಬರೆಯೋದಕ್ಕೆ, ಎನ್ನುವ ಈ ಅಭಿಪ್ರಾಯವೆ, ಕುವೆಂಪೂ ಕೂಡಾ ಸೇರಿದಂತೆ ಎಲ್ಲರದೂ ಆಗಿತ್ತು, ಹಾಗಾಗಿ ಇನಾಂದಾರರು ತಮ್ಮ ಮೊದಲ ಹಂತದಲ್ಲಿ ಬರೆಯಲು ಆರಂಭಿಸಿದ್ದ ಲೇಖನಗಳು ಇಂಗ್ಲಿಷಿನಲ್ಲಿಯೇ ಇದ್ದವು. ಇವರಿಗಿದ್ದ ಇಂಗ್ಲಿಷ್ ಮೇಲಿನ ಮೋಹ, ಇಂಗ್ಲಿಷಿನಲ್ಲಿ ಬರೆದರೆ ಹೆಚ್ಚು ಗೌರವ, ಮಾನ್ಯತೆ ಎಂಬ ಭ್ರಮೆಗಳೆಲ್ಲವೂ ದೂರವಾಗುವ ಒಂದು ಸನ್ನಿವೇಶ ಏರ್ಪಟ್ಟಿತು. ಇಂಗ್ಲಿಷಿನಲ್ಲಿ ಕಥೆಯೊಂದನ್ನು ಬರೆದು ಪತ್ರಿಕೆಯೊಂದಕ್ಕೆ ಕಳಿಸಿಕೊಟ್ಟಾಗ ಅದು ತಿರಸ್ಕೃತವಾಗಿ ಬಂದಾಗ ಅವರಿಗೆ ಅದರ ಕಾರಣ ಕುರಿತು ಗಂಭೀರವಾಗಿ ಯೋಚಿಸುವಂತೆ ಮಾಡಿತು. ಆಗ ಅವರಿಗೆ, "ಎಲ್ಲಿ ನಮ್ಮ ಸ್ವಂತದ ಅಥವಾ ಪಾತ್ರಗಳ ಭಾವನೆಗಳನ್ನು ಹೇಳಬೇಕೆಂದು ಕಾಣುತ್ತದೋ ಅಲ್ಲಿ ನಮ್ಮದಲ್ಲದ ಭಾಷೆಯಲ್ಲಿ ಹೇಳುವುದಕ್ಕೆ ಕಷ್ಟವಾಗುತ್ತದೆ. ಹೇಳಿದರೂ ಸಮರ್ಪಕವಾಗಿರಲಾರದು" ಎಂದು ಅನಿಸಿದ್ದರಿಂದ ಮುಂದೆ ತಮ್ಮ ಬರವಣಿಗೆಗೆ ಕನ್ನಡವನ್ನು ಆಯ್ದುಕೊಂಡರು. ಇತ್ತ ಹೊರಳಿದ್ದು ಕನ್ನಡದ ಬಗೆಗಿನ ತುಡಿತದಿಂದಲ್ಲ, ಅನಿವಾರ್ಯತೆಯಿಂದ. ಆದರೆ ಬರೆಯುವಾಗಲೂ ಅವರಿಗೆ ಕನ್ನಡ ಭಾಷೆಯ ಮೇಲಿನ ತಮ್ಮ ಪ್ರಭುತ್ವದ ಬಗ್ಗೆ ಅನುಮಾನ ಇದ್ದೇ ಇತ್ತು. ಅನುಮಾನ ಒಂದು ಕಡೆಯಾದರೆ ಅಳುಕು ಮತ್ತೊಂದು ಕಡೆಗಿತ್ತು. ತಮ್ಮ ಕನ್ನಡ ಭಾಷಾ ಸಾಮರ್ಥ್ಯದ ಪರೀಕ್ಷೆಗಾಗಿ, ಪ್ರಯೋಗಾತ್ಮಕವಾಗಿ 'ಎರಡು ಧ್ರುವ' ಎಂಬ ಕಾದಂಬರಿಯನ್ನು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದರು. ಆ ಅನುವಾದ ಕೃತಿಯ ಬಗ್ಗೆ ಕೆಲವರ ಮೆಚ್ಚುಗೆಯ ಮಾತು ಕೇಳಿ ಬಂದರೂ ಅವರಿಗೆ ತಮ್ಮ ಕನ್ನಡದ ಬಗ್ಗೆ ಅಷ್ಟೊಂದು ತೃಪ್ತಿ ಸಿಗಲಿಲ್ಲ, ಆದರೆ ಕನ್ನಡದಲ್ಲಿ ಬರೆಯಲು ಸಾಧ್ಯವಿದೆ ಎಂಬ ಸಮಾಧಾನ. ಪ್ರಬುದ್ಧ ಕರ್ನಾಟಕ ಸಾಹಿತ್ಯ ಪತ್ರಿಕೆಯ ಓದು ಒಂದು ರೀತಿಯಲ್ಲಿ ಮುಂದೆ ಕನ್ನಡದಲ್ಲಿ ಬರೆಯಲು ಮುಂದಾಗುವಂತೆ ಮಾಡಿತು.

ಅವರು ಬರೆದ ಸುಮಾರು ೪೩ ಕೃತಿಗಳಲ್ಲಿ. ಕನ್ನಡವೂ ಇದೆ ಇಂಗ್ಲೀಷೂ ಇದೆ. ಸ್ವತಂತ್ರ ಕೃತಿಗಳಲ್ಲಿ ಹೆಚ್ಚಿನವು ಕಾದಂಬರಿಗಳಾಗಿವೆ. ಅವರ ಕಾದಂಬರಿ ಸಾಹಿತ್ಯ ಅತ್ಯಂತ ಜನಪ್ರಿಯವೂ ಜನಮಾನ್ಯವೂ ಆಗಿದ್ದವು. ಅವರ ಸೃಜನಶೀಲ ಕಥನ ಸಾಹಿತ್ಯದ ಮೌಲಿಕತೆ ಅವುಗಳ ಮೂಲಕವಾಗಿ ವ್ಯಕ್ತವಾಗುತ್ತದೆ.

## ಇನಾಂದಾರರ ಕಾದಂಬರಿಗಳು

ಇನಾಂದಾರರು ಬರೆದ ಹದಿನೆಂಟು ಕಾದಂಬರಿಗಳಲ್ಲಿ 'ಎರಡು ಧ್ರುವ' ಮತ್ತು 'ಯಯಾತಿ', ಈ ಎರಡೂ ಕಾದಂಬರಿಗಳು ಮರಾಠಿಸಾಹಿತ್ಯ ಸಾಮ್ರಾಟನೆನೆಸಿಕೊಂಡ ವಿ.ಎಸ್ ಖಾಂಡೇಕರರ 'ಧೋನ್‌ಧ್ರುವ' ಮತ್ತು 'ಯಯಾತಿ' ಕಾದಂಬರಿಗಳ ಭಾಷಾಂತರಗಳಾಗಿವೆ. ತಾಯಿ ತವರಿನ ಭಾಷೆ ಮರಾಠಿ ಆದುದರಿಂದ ಮರಾಠಿಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆದ್ದರಿಂದ ಅನುವಾದ ಸುಲಲಿತವಾಗಿ ಸಾಗುವುದಕ್ಕೆ ಸಾಧ್ಯವಾಯಿತು. "ಎರಡುಧ್ರುವ" ಕಾದಂಬರಿಯ ಯಶಸ್ಸು ಅವರು ಮುಂದೆ' 'ಯಯಾತಿ' ಕಾದಂಬರಿಯ ಅನುವಾದಕ್ಕೆ ಮುಂದಾಗುವಂತೆ ಮಾಡಿತು. ಸ್ವತಃ ಖಾಂಡೇಕರರೇ ಈ ಕಾದಂಬರಿಯನ್ನೂ ಅನುವಾದಿಸಲು ಒತ್ತಾಯಿಸಿದರಂತೆ. ಆದರೆ ದುರದೃಷ್ಟವೆಂದರೆ ಅನುವಾದ (ಕೃತಿ) ಪ್ರಕಟವಾಗುವ ಮೊದಲೇ ಅವರು ತೀರಿಕೊಂಡರಾದರೂ, ಆ (ಅನುವಾದ) ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದುದು ಖಾಂಡೇಕರರ ಆತ್ಮಕ್ಕೂ ಇವರಿಗೂ ಸಮಾಧಾನ ತಂದಿತು.

ಎರಡೂ ಕಾದಂಬರಿಗಳ ನಡುವೆ ಸಾಕಷ್ಟು ಕಾಲದ ಅಂತರವಿದೆ. ಎರಡು ಧ್ರುವ (೧೯೩೭) ಇವರ ಕಾದಂಬರಿ ಜಗತ್ತಿನ ಪ್ರವೇಶಕ್ಕೆ ಮೊದಲ ಹೆಜ್ಜೆ ತೊದಲ ಹೆಜ್ಜೆ; ಆದರೆ, ಇದಾದ ನಂತರ ೪೦ ವರ್ಷಗಳ ಅಂತರದಲ್ಲಿ ಕನ್ನಡ ಅನುವಾದ 'ಯಯಾತಿ' ಕಾದಂಬರಿಯು ಮೊದಲ ಆವೃತ್ತಿಯಾಗಿ ಬಂದುದು ೧೯೭೭ರಲ್ಲಿ! ಎರಡರ ನಡುವೆ ೪೦ ವರ್ಷಗಳ ಅಂತರ! ಅಷ್ಟು ಹೊತ್ತಿಗೆ ೧೧ ಸ್ವತಂತ್ರ ಕಾದಂಬರಿಗಳನ್ನು ರಚಿಸಿ ಸಾಕಷ್ಟು ಪಳಗಿದ ಪ್ರತಿಭೆಯಾಗಿತ್ತು.

'ಎರಡು ಧ್ರುವ' ಕಾದಂಬರಿಯಲ್ಲಿ ವಿಷಮ ದಾಂಪತ್ಯದ ಚಿತ್ರಣವಿದೆ. ಗಂಡ ಹೆಂಡತಿ– ಎರಡು ಧ್ರುವಗಳಿದ್ದಂತೆ. ಅತ್ಯಂತ ಚೆಲುವನೂ ಕಲಾರಸಿಕನೂ ಸ್ವತಃ ನಾಟಕಕಾರನೂ ಆದ ನಾಯಕ, ರೂಪದಲ್ಲಾಗಲೀ, ಕಲೆಯಲ್ಲಾಗಲೀ, ರಸಿಕತೆಯಲ್ಲಾಗಲೀ – ಯಾವುದರಲ್ಲಿಯೂ ತನಗೆ ಸರಿಸಾಟಿಯಾಗಲಾರದ ವತ್ಸಲೆ ಎಂಬ ಹುಡುಗಿಯನ್ನು ಮದುವೆಯಾಗುತ್ತಾನೆ. ಆದರೆ ಅವರಿಬ್ಬರ ನಡುವೆ ಪರಸ್ಪರ ಪ್ರೀತಿ ಸೌಹಾರ್ದತೆ, ಅನ್ಯೋನ್ಯತೆ, ಸಾಮರಸ್ಯಗಳು ಎಂದೂ ಸಾಧ್ಯವಾಗುವುದಿಲ್ಲ, ಸಹಜವಾಗಿ ರಸಿಕ ಗಂಡ ತನ್ನ ಎಲ್ಲ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು, ಅತೃಪ್ತಿಯನ್ನು ತಣಿಸಿಕೊಳ್ಳಲು ರಂಗನಟಿ, ಅದ್ಭುತ ಕಲಾವಿದೆ, ಸ್ಫುರದ್ರೂಪಿ, ಗಾನಕೋಗಿಲೆ, ಎಂದೆಲ್ಲ ಅಭಿದಾನಗಳಿಂದ ಕರೆಸಿಕೊಂಡು, ಪ್ರೇಕ್ಷಕರ ಮನಸ್ಸನ್ನು ಸೆಳೆದು ಕಟ್ಟಿಹಾಕುತ್ತಿದ್ದ ಮತ್ತು ಕಂಪನಿ ಯಜಮಾನನಿಗೆ ಚಿನ್ನದ ಗಣಿಯಾಗಿದ್ದಂತಹ ಸುರಂಗೆಯ ಪರಿಚಯವಾಗಿ, ಸಂಪೂರ್ಣವಾಗಿ ಅವಳ

ವಶವರ್ತಿಯಾಗಿ, ಮನೆಯಲ್ಲಿನ ಹೆಂಡತಿ ವತ್ಸಲೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸುತ್ತಾನೆ. ಸುರಂಗೆಯ ಬೆನ್ನಿಗೆ ಬೀಳುತ್ತಾನೆ. ಅವಳಿಂದ ಒಂದು ಕ್ಷಣವೂ ಅಗಲಿರಲಾರದ ಸ್ಥಿತಿ ತಲುಪುತ್ತಾನೆ. ಅವಳ ಆಸೆಗಳನ್ನು ಪೂರೈಸುತ್ತಾನೆ. ಅವಳಿಗೆ ಅಷ್ಟೊಂದು ಹತ್ತಿರವಿದ್ದ ರಮಾಕಾಂತ, ಸುಲೋಚನೆಯೆಂಬ ಚಿತ್ರ ಕಲಾವಿದೆ, ಲಕ್ಷಾಧಿಪತಿಯೊಬ್ಬರ ಮಗಳ ಪರಿಚಯಕ್ಕೆ ಬಂದ ಮೇಲೆ ಶ್ರೀಮಂತಿಕೆ ಅವನನ್ನು ಅವಳತ್ತ ಸೆಳೆಯುತ್ತದೆ. ಸುಲೋಚನೆಗೂ ಅವನ ಪ್ರತಿಭೆ, ಆಕರ್ಷಕ ವ್ಯಕ್ತಿತ್ವದಿಂದ ಸೆಳೆಯಲ್ಪಟ್ಟರೂ, ಅವನ ದ್ವಂದ್ವ ವ್ಯಕ್ತಿತ್ವ, ಪ್ರೀತಿಯ ಪೊಳ್ಳುತನಗಳು ಬಯಲಾಗಿ, ಅವನನ್ನು ತಿರಸ್ಕರಿಸಿ ವಿದ್ಯಾಧರನೆಂಬುವನನ್ನು ವಿವಾಹವಾಗುತ್ತಾಳೆ.

ರಮಾಕಾಂತನಿಗೆ ರೂಪ, ಪ್ರತಿಭೆಗಳಿದ್ದರೂ ಬದುಕಿನಲ್ಲಿ ನೈತಿಕತೆಯಾಗಲೀ ಬದ್ಧತೆಯಾಗಲೀ ಇಲ್ಲ. ವ್ಯಕ್ತಿತ್ವದಲ್ಲಿ ಗಟ್ಟಿತನವಾಗಲೀ ಪ್ರಾಮಾಣಿಕತೆಯಾಗಲೀ ಇಲ್ಲದಿದ್ದ ಕಾರಣ, ಸುರಂಗೆಯನ್ನು ಗಾಢವಾಗಿ ಪ್ರೀತಿಸಿ, ಅವಳನ್ನು ವಿವಾಹವಾಗಬೇಕೆಂಬ ನಿಲುವಿಗೆ ಬರುತ್ತಿದ್ದಂತೆ, ಸುರಂಗೆಯ ಪೂರ್ವ ಇತಿಹಾಸ, ಅವಳಿಗೊಬ್ಬ ಮಗನಿದ್ದಾನೆಂಬ ಸತ್ಯ ಬಯಲಾಗುತ್ತಿದ್ದಂತೆ, ಒಂದಿಷ್ಟೂ ಪಶ್ಚಾತ್ತಾಪವಾಗಲೀ, ಅನುಕಂಪವಾಗಲಿ ಇಲ್ಲದೆ ನಿರ್ದಾಕ್ಷಿಣ್ಯವಾಗಿ, ತಮ್ಮಿಬ್ಬರ ಸಂಬಂಧದ ಬಗ್ಗೆ ಒಂದಿಷ್ಟೂ ಯೋಚನೆಯಿಲ್ಲದೆ, ಸಲೀಸಾಗಿ ಅವಳಿಂದ ದೂರ ಸರಿಯುತ್ತಾನೆ.

ರಮಾಕಾಂತನಿಗೆ ಒಂದು ನಿರ್ದಿಷ್ಟ ನಿಲುವಿಲ್ಲ; ನೆಲೆಯೂ ಇಲ್ಲ, ಮನುಷ್ಯರೊಂದಿಗಿನ ಸ್ನೇಹವನ್ನೂ ಮನಸ್ಸನ್ನೂ ಬದಲಾಯಿಸುತ್ತಾ ಹೋಗುತ್ತಾನೆ. ಆದರೆ ಕಟ್ಟ ಕಡೆಯಲ್ಲಿ ಬದುಕಿನಲ್ಲಿ ಎದುರಾದ ಸನ್ನಿವೇಶಗಳಿಂದ ವ್ಯಕ್ತಿಗಳ ನಡವಳಿಕೆಗಳಿಂದ ಜ್ಞಾನೋದಯವಾಗಿ, ರೂಪ ಸೌಂದರ್ಯಗಳಿಗಿಂತ ಗುಣವೇ ಮುಖ್ಯ ಎಂಬ ಅರಿವಿನೊಂದಿಗೆ ಅಲೆದಾಟದ ಬದುಕನ್ನು ಬಿಟ್ಟು ಹೆಂಡತಿ ವತ್ಸಲೆಯ ಜೊತೆ ಬಾಳುವ ನಿರ್ಧಾರಕ್ಕೆ ಬರುತ್ತಾನೆ. ಸಂಕೋಚ, ನಾಚಿಕೆ, ಕೀಳರಿಮೆಗಳಿಂದ ನಲುಗುತ್ತಿದ್ದ ವತ್ಸಲೆಯೂ ಕೂಡ ಸ್ವತಂತ್ರವಾಗಿ, ಸ್ವಾವಲಂಬಿಯಾಗಿ, ಅರ್ಥಪೂರ್ಣವಾಗಿ ಬಾಳಬಲ್ಲೆನೆಂಬ ಆತ್ಮವಿಶ್ವಾಸದೊಂದಿಗೆ, ದೃಢವಾಗಿ ನಿಂತವಳಿಗೆ ಈಗ ತನಗೆ ಯಾರೊಂದಿಗೂ ಬಾಳಬೇಕಾದ ಅಗತ್ಯವಿಲ್ಲವೆಂದು ನಿರ್ಧರಿಸಿದವಳಿಗೆ, ರಮಾಕಾಂತ ಅವಳೊಂದಿಗೆ ಬಾಳುವ ಆಸೆ ಹೊತ್ತು ಬರುವನಾದರೂ, ಅವನ ಸಹವಾಸ ಬೇಡವೆನಿಸಿ ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತಾಳೆ. ರಮಾಕಾಂತ ತಾನು ಮಾಡಿದ ಅಪರಾಧಗಳಿಗಾಗಿ ಜೀವನ ಪರ್ಯಂತ ಆಘಾತಗಳನ್ನು ಅನುಭವಿಸುತ್ತ ಹೆಜ್ಜೆ ಹೆಜ್ಜೆಗೂ ಸೋಲುಗಳನ್ನು ಎದುರಾಗಿಸಿಕೊಳ್ಳುತ್ತಾ ಏಕಾಕಿಯಾಗಿ ಬಾಳಬೇಕಾದ ದುರಂತ ನಾಯಕನಾಗಿ

ಉಳಿಯುತ್ತಾನೆ. ಅಂದಿನ ಸಾಮಾಜಿಕ ಧೋರಣೆಗಳನ್ನು ಕಟ್ಟಿಕೊಡುವುದರ ಜೊತೆಗೆ ಭೌತಿಕ ಸೌಂದರ್ಯಕ್ಕಿಂತ ಆಂತರಿಕ ಗುಣಮೌಲ್ಯವೇ ಹೆಚ್ಚಿನದೆಂಬುದನ್ನು ಕಥಾನಕದ ಪಾತ್ರಗಳ ಬದುಕಿನ ಸನ್ನಿವೇಶಗಳ ಮೂಲಕವಾಗಿ ಎತ್ತಿ ತೋರಿಸುವುದೇ ಈ ಕಾದಂಬರಿಯ ಪ್ರಧಾನ ಆಶಯವೆನಿಸುತ್ತದೆ.

**ಯಯಾತಿ (೧೯೭೭)**

ಇದೇ ಲೇಖಕರ, ಸುದೀರ್ಘ ಬದುಕಿನ ಸಮಾಗ್ರ ಜೀವನ ದರ್ಶನವನ್ನು ಮಹಾಭಾರತದಲ್ಲಿ ಬರುವ ಒಂದು ಸಂಕ್ಷಿಪ್ತ ಆಖ್ಯಾನದ, ಮೂಲಕ, ಅದರ ಪ್ರಮುಖ ಕಥಾ ಪಾತ್ರವಾದ 'ಯಯಾತಿ' ರೂಪಕದ ಮೂಲಕ ಕಟ್ಟಿಕೊಡುವ ಕಾದಂಬರಿ ಯಯಾತಿ, ತನ್ನೆಲ್ಲ ತಾತ್ವಿಕ ಚಿಂತನೆಗಳನ್ನು ಬಿಂಬಿಸುವ ಮಹತ್ವದ ಕೃತಿಯಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಭಾಜನವಾಗಿದೆ. ಯಯಾತಿ, ದೇವಯಾನಿ, ಪುರೂರವ ಪಾತ್ರಗಳ ಸುತ್ತ, ಒಬ್ಬರಲ್ಲ ಒಬ್ಬ ಕವಿ, ಕಲಾವಿದ ನಾಟಕಕಾರರ ವೈಯಕ್ತಿಕ ದೃಷ್ಟಿ ದರ್ಶನಗಳಿಗನುಗುಣವಾಗಿ ಹೆಣೆದ ಅನೇಕ ಕೃತಿಗಳು ಕನ್ನಡ ಮತ್ತು ಇತರ ಭಾಷೆಗಳಲ್ಲಿ ಬಂದಿರುವುದಾದರೂ 'ಯಯಾತಿ' ಕಾದಂಬರಿಯ ವ್ಯಾಪ್ತಿ, ವಿಸ್ತಾರ ದಾರ್ಶನಿಕತೆಯ ಆಳ– ಮುಂತಾದವುಗಳಿಂದಾಗಿ ಅದು ಅನನ್ಯ ವೆನಿಸಿದೆ. ಕಾರ್ನಾಡರ 'ಯಯಾತಿ' ನಾಟಕ, ಶ್ರೀರಂಗರ ಸಂಜೀವಿನಿ ನಾಟಕ ಭಿನ್ನ ಭಿನ್ನ ಚಿಂತನೆಗಳ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಮಹಾಭಾರತದಲ್ಲಿನ ಉಪಾಖ್ಯಾನಕ್ಕೆ ಖಾಂಡೇಕರರ ಪ್ರತಿಭಾ ಸ್ಪರ್ಶ ದೊರೆತು ಅದಕ್ಕೊಂದು ವಿಸ್ತೃತವಾದ ದಾರ್ಶನಿಕ ಭಿತ್ತಿ ನಿರ್ಮಾಣವಾಗಿದೆ. ಇದು ಕೇವಲ ಪುರಾಣದ ಕಥೆಯಲ್ಲ ಎಳೆ ವಯಸ್ಸಿನಲ್ಲಿ ಕೇಳಿಸಿಕೊಂಡ ಪುರಾಣ ಕಥೆಗಳಿಗೆ, ಆಖ್ಯಾನಗಳಿಗೆ ಖಾಂಡೇಕರರ ಪಕ್ವ ಪ್ರಬುದ್ಧ ವಯಸ್ಸು, ಮನಸ್ಸುಗಳು, ಅವುಗಳನ್ನು ಬೌದ್ಧಿಕ ಹಾಗೂ ಕಲಾತ್ಮಕವಾಗಿ ದುಡಿಸಿಕೊಂಡಿವೆ. ಮೂಲ ಕಥೆಯಲ್ಲಿನ ಪಾತ್ರಸ್ವಭಾವ ಸನ್ನಿವೇಶಗಳನ್ನು ತಮ್ಮ ಕಾಣ್ಕೆಗೆ ಅನುಗುಣವಾಗಿ ಬದಲಾಯಿಸಿ ಕೊಂಡಿದ್ದಾರೆ; ವಿಸ್ತೃತಗೊಳಿಸಿಕೊಂಡಿದ್ದಾರೆ.

೧೯೫೨ ರಲ್ಲಿ ಬರೆಯಲು ಆರಂಭಿಸಿದ ಈ ಕಾದಂಬರಿಯ ಕಥಾನಾಯಕ ಯಯಾತಿ ಖಾಂಡೇಕರರಿಗೆ, ಇಂದಿನ ಸರ್ವ ಸಾಮಾನ್ಯ ಮನುಷ್ಯನ ಪುರಾಣಕಾಲದಲ್ಲಿಯ ಪ್ರತಿಷ್ಠಿತ ಪ್ರತಿನಿಧಿಯಾಗಿ ಕಾಣುತ್ತಿದ್ದಾನೆ, ಸರ್ವ ಸುಖಗಳು ಲಭ್ಯವಿದ್ದರೂ ಅತೃಪ್ತಿಯಿಂದ ಹೊಸ ಸುಖಗಳ ಬೆನ್ನ ಹಿಂದೆ, ಸುಖ, ಆನಂದಗಳ ನಡುವಿನ ಅಂತರ ತಿಳಿಯದೆ ಬೆನ್ನುಹತ್ತಿರುವಂತೆ ಈಗಿನವರೂ ಕೂಡಾ ಯಯಾತಿಯಂಥವರು ಸಿಗಬಹುದಾದರೂ ಮೌಲ್ಯಗಳಿಗೇ ಆದ್ಯತೆ ನೀಡಿದ

ಕಚನಂಥವರು ಅಪರೂಪ ಎನ್ನುವ ಸತ್ಯ, ಈ ಕಾದಂಬರಿಯನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿದೆ.

ಒಟ್ಟಾರೆಯಾಗಿ, ಖಾಂಡೇಕರರೇ ಹೇಳುವಂತೆ. "ಈ ಕಾದಂಬರಿ ಯಯಾತಿಯ ಕಾಮದ ಕಥೆಯಾಗಿದೆ, ದೇವಯಾನಿಯ ಸಂಸಾರದ ಕಥೆಯಾಗಿದೆ, ಶರ್ಮಿಷ್ಠೆಯ ಪ್ರೀತಿಯ ಕಥೆಯಾಗಿದೆ ಮತ್ತು ಕಚನ ಭಕ್ತಿಯ ಪ್ರಗಾಥವಾಗಿದೆ" ಇಷ್ಟೇ ಅಲ್ಲದೆ ಇದೊಂದು ವಿಶಾಲವಾದ ಮತ್ತು ಸಮಗ್ರವಾದ ಜೀವನದರ್ಶನವೂ ಆಗಿದೆ ಮತ್ತು ಕಲಾತ್ಮಕತೆಯ ಮೇರು ಕೃತಿಯೂ ಆಗಿದೆ.

ಕಥೆಯ ಎಳೆಗಳು ಸರಳ. ಶುಕ್ರಾಚಾರ್ಯರ ಮಗಳು ದೇವಯಾನಿ, ತಂದೆಯ ಬಳಿಗೆ ಸಂಜೀವಿನಿ ಕಲಿಯಲು ಬಂದ ಕಚನನ್ನು ಪ್ರೀತಿಸುತ್ತಾಳೆ. ಆದರೆ ಅವಳ ಆ ಪ್ರೀತಿ ಫಲಿಸುವುದಿಲ್ಲ. ಕಚನ ಪ್ರೀತಿಯಿಂದ ತಿರಸ್ಕೃತಳಾದವಳು ತನ್ನೊಳಗಿನ ಮಹತ್ವಾಕಾಂಕ್ಷೆಯಿಂದ ಯಯಾತಿಯನ್ನು ಮದುವೆಯಾಗಿ ತನ್ನ ಆಪ್ತ ಗೆಳತಿಯಾಗಿದ್ದ ಶರ್ಮಿಷ್ಠೆಯನ್ನು ತನ್ನ ದಾಸಿಯನ್ನಾಗಿ ಮಾಡಿಕೊಂಡು ತನ್ನೊಡನೆ ಕರೆದುಕೊಂಡು ಹೋಗುತ್ತಾಳೆ. ಕಚನ ತಿರಸ್ಕಾರ ಅವಳೊಳಗೆ ಪುರುಷದ್ವೇಷದ ಬೆಂಕಿಯನ್ನು ಹೊತ್ತಿಸುತ್ತದೆ. ಎಲ್ಲ ದೊರೆತಿದ್ದರೂ ಅಸಹನೆ, ಅತೃಪ್ತಿಗಳಿಂದ ತಾನು ಯಾತನೆಯನ್ನು ಅನುಭವಿಸುವುದಲ್ಲದೆ, ತನ್ನ ಗಂಡ ತನ್ನ ದಾಸಿಯಾದ ಶರ್ಮಿಷ್ಠೆಯನ್ನು ಪ್ರೀತಿಸಿ ಮಕ್ಕಳನ್ನು ಪಡೆದ ಸಂಗತಿಯಿಂದ ಮತ್ತಷ್ಟು ಕೃದ್ಧಳಾಗುತ್ತಾಳೆ. ಅಸಹಾಯಕತೆ, ಸೋಲಿನಿಂದ ಚಡಪಡಿಸುತ್ತಾಳೆ. ತನ್ನ ಜೊತೆಗೆ ತನ್ನ ವರ್ತುಲದ ವ್ಯಾಪ್ತಿಯೊಳಗಿನ ಎಲ್ಲರನ್ನೂ ಕ್ರೂರವಾದ ಮಾನಸಿಕ ಹಿಂಸೆಗೆ ಒಳಗಾಗಿಸುತ್ತಾಳೆ. ಮುದ್ದಿನ ಮಗಳಾಗಿ ಬೆಳೆದ ದೇವಯಾನಿ ಹಠಮಾರಿಯಾಗಿ ಸ್ವಾರ್ಥಿಯಾಗಿ ಜೊತೆಗೆ ವಿಘ್ನ ಸಂತೋಷಿಯಾಗಿ, ತಾನು ಮಾಡುವುದೇ ಸರಿ ಎಂಬ ಜಿದ್ದಿಗೆ ಬೀಳುವ ಸ್ವಭಾವದವಳಾಗಿ, ತನ್ನ ಆತ್ಮಿಕ ಪತನಕ್ಕೆ ದುಃಖಕ್ಕೆ ತಾನೇ ಕಾರಣಳಾಗುತ್ತಾಳೆ.

ತನ್ನ ಅಭೀಷ್ಠೆಯನ್ನು ನೆರವೇರಿಸುವ ನೆಪದಲ್ಲಿ ಯಜ್ಞವನ್ನು ಯೋಜಿಸಿ ಕಚನನ್ನು ಆಹ್ವಾನಿಸುತ್ತಾಳೆ. ಆದರೆ ಅದು ಸಹಜವಾದ, ನಿಜ ಪ್ರೀತಿಯ ಆಹ್ವಾನ ವಾಗಿರುವುದಿಲ್ಲ. ಅವನು ಬಂದಾಗ ಅವನ ಮುಂದೆ ತನ್ನ ರಾಜವೈಭವವನ್ನು ಮೆರೆದು, ಅವಳನ್ನು ತಿರಸ್ಕರಿಸಿದ್ದಕ್ಕೆ ಪಶ್ಚಾತ್ತಾಪ ಪಡುವಂತೆ ಮತ್ತು ಕ್ಷಮೆ ಕೋರುವಂತಾಗಬೇಕೆಂಬ ದುರುದ್ದೇಶದಿಂದ ಆಹ್ವಾನಿಸುತ್ತಾಳೆ. ಆದರೆ ಕಚನ ವ್ಯಕ್ತಿತ್ವದ ಔನ್ನತ್ಯವನ್ನು ಅರಿಯದ ದೇವಯಾನಿ, ಅವನು ಸಾಕಷ್ಟು ಸಮಯ ನಿರೀಕ್ಷಿಸಿದರೂ ಬರದಿದ್ದಾಗ, ಅಂತರಂಗದೊಂದಿಗೆ ಸಂವಾದಕ್ಕೆ ತೊಡಗುತ್ತಾಳೆ "ಕಚ ಬರುತ್ತಾನೆ, ಬಂದೇ ಬರುತ್ತಾನೆ ಎಂದು ನನ್ನ ಮನಸ್ಸು ಹೇಳುತ್ತಿತ್ತು.

ಆದರೆ ಯಜ್ಞ ಪ್ರಾರಂಭವಾದರೂ ಆತ ಬರಲಿಲ್ಲ. ಯಜ್ಞ ಮುಗಿಯುತ್ತ ಬಂದರೂ ಬರಲಿಲ್ಲ, ನನ್ನಲ್ಲಿಯ ಮಹಾರಾಣಿಗೆ ಆನಂದವಾಯಿತು. ಆದರೆ ನನ್ನಲ್ಲಿಯ ದೇವಯಾನಿಗೆ ದುಃಖವಾಯಿತು" (೨೧೧ ಪು) ಎಂದು ಕೊಳ್ಳುತ್ತಾಳೆ.

ಕಡೆಗೆ ಅವನು ಬರುತ್ತಾನಾದರೂ ಅವಳ ಯಾವ ಆಸೆಗಳೂ ಫಲಿಸುವುದಿಲ್ಲ, ಶರ್ಮಿಷ್ಠೆಯಿಂದ ಗಾಳಿ ಬೀಸಿಸಿಕೊಳ್ಳುತ್ತಾಳೆ. ರಾಜವೈಭವ, ಠೀವಿಗಳಿಂದ ಕುಳಿತಿರುವುದನ್ನು ನೋಡಿ ಸಫಲತೆಯಿಂದಾದರೂ ಸಂತೋಷ ಸಿಗಬಹುದುದೆಂಬ ನಿರೀಕ್ಷೆಯೂ ಸುಳ್ಳಾಯಿತು.

ಕಡೆಗೆ ಅವನು ಬಂದರೂ ಮಾಡಿದ್ದೇನು? ಅವಳನ್ನು ಶರ್ಮಿಷ್ಠೆಯನ್ನು ದಾಸಿ ಸ್ಥಾನದಿಂದ ಬಿಡುಗಡೆ ಮಾಡಬೇಕೆಂದು ಕೇಳಿಕೊಳ್ಳುತ್ತಾನೆ.

ಕಚನಿಗೆ ದೇವಯಾನಿಯ ಬಗ್ಗೆ ಪ್ರೀತಿ ಇಲ್ಲವೆಂದಲ್ಲ. ಆದರೆ ಪ್ರೀತಿಗಿಂತ ಕರ್ತವ್ಯವನ್ನು ಮುಖ್ಯವೆಂದು ಭಾವಿಸಿ ಆತ್ಮ ಸಂಯಮದಿಂದ ಕಾಮವನ್ನು ಗೆದ್ದು ವಿಶುದ್ಧ ಪ್ರೇಮವನ್ನು ಮಾತ್ರವೇ ಉಳಿಸಿಕೊಂಡಿರುತ್ತಾನೆ. ಅವನಿಗೆ ಯಾರ ಬಗ್ಗೆಯೂ ದ್ವೇಷವಿಲ್ಲ, ಅಸೂಯೆಯಿಲ್ಲ, ಅಹಂಕಾರವಿಲ್ಲ. ಮಾನವ ಪ್ರೇಮ, ಸಮಷ್ಠಿ ಸುಖ, ಕಲ್ಯಾಣಗಳಿಗಾಗಿರುವ ತ್ಯಾಗ– ಇವೆರಡು ಮೌಲ್ಯಗಳೇ ಅವನ ಜೀವನದ ಪರಮಗುರಿಯಾಗಿರುತ್ತದೆ: ಯಾರೂ ಯಾವ ಹಿಂಸೆಗೂ ಒಳಗಾಗಬಾರದು, ಯಾರ ಶೋಷಣೆಗೂ ಗುರಿಯಾಗಬಾರದು ಎಂಬುದನ್ನು ಬಲವಾಗಿ ನಂಬಿದವನು. ದೇವಯಾನಿ ಶರ್ಮಿಷ್ಠೆಯನ್ನು ದಾಸಿಮಾಡಿಕೊಳ್ಳುವುದರ ಹಿಂದಿನ ದೇವಯಾನಿಯ ಮನಃಸ್ವಭಾವಗಳನ್ನು ಅರಿತವನು. ಅವಳಿಗೆ ಸರಿಯಾದ ದಾರಿ ತೋರಿಸುವವರಿಲ್ಲದೆ, ಅಪ್ಪನ ಅತಿ ಮುದ್ದು ಅವಳನ್ನು ಅವಿಚಾರವಂತಳನ್ನಾಗಿ ಮಾಡಿದೆ ಎಂಬುದು ಅವನ ಗ್ರಹಿಕೆಯಾದ್ದರಿಂದ, ಅವಳಿಗೆ ತಿಳಿಸಿ ಹೇಳುವ ಪ್ರಯತ್ನ ಮಾಡುತ್ತಾನೆ. "ಆಕೆ ನಿನ್ನ ದಾಸಿಯಾಗ ಬೇಕು ಎಂಬ ಹಟವನ್ನು ನೀನು ಹಿಡಿದಿರಬಹುದು. ಅದಕ್ಕಾಗಿ ನಾನು ನಿನ್ನನ್ನು ದೂಷಿಸುವುದಿಲ್ಲ ಸಿಟ್ಟು ಯಾರಿಗೆ ಬರುವುದಿಲ್ಲ ಈ ಪ್ರಪಂಚದಲ್ಲಿ? ಆದರೆ ಮನುಷ್ಯನ ಹಿರಿಮೆ ವಿಕಾರದ ಜೊತೆಯಲ್ಲಿ ಹರಿದು ಹೋಗುವುದರಲ್ಲಿ ಇರುವುದಿಲ್ಲ. ವಿಚಾರದ ಸಹಾಯದಿಂದ ವಿಚಾರದ ಮೇಲೆ ವಿಜಯವನ್ನುಗಳಿಸುವುದೇ ನಿಜವಾದ ಮನುಷ್ಯಧರ್ಮ" ಎಂದು ವಿವೇಕದ ಮಾತುಗಳನ್ನು ಹೇಳುತ್ತಾನೆ. ಅಲ್ಲದೆ ತನ್ನಿಂದ ತನಗರಿವಿಲ್ಲದಂತೆ ನೋವಾಗಿದ್ದರೆ, ಅಂಥ ನೋಯಿಸುವ ಮಾತು ತನ್ನ ಬಾಯಿಂದ ಬಂದಿದ್ದರೆ ಕ್ಷಮಿಸಬೇಕೆಂಬ ಅವನ ಸೌಜನ್ಯದ ನಡೆಯಲ್ಲಿಯೇ ಅವನ ಘನತೆ ಔನ್ನತ್ಯಗಳು ನಿಹಿತವಾಗಿವೆ. ಇಂಥ ಸಂಕೀರ್ಣವಾದ ಮತ್ತು ಮನೋವೈಜ್ಞಾನಿಕವಾಗಿ ವಿಶ್ಲೇಷಿಸಬಹುದಾದ ಮಾನಸಿಕ ಸಂಘರ್ಷಗಳನ್ನು ಬಿಂಬಿಸುವ, ವಿಶ್ವವಿಶಾಲ

ದರ್ಶನವನ್ನು ಕಟ್ಟಿಕೊಡುವ ಈ ಕಾದಂಬರಿಯನ್ನು ಅದರ ಮೂಲಕ್ಕೆ ಯಾವುದೇ ಧಕ್ಕೆ ಬಾರದಂತೆ, ಅದರ ಎಲ್ಲ ಸತ್ವ ಸಾರವನ್ನು ಸಮಗ್ರವಾಗಿ ಹಿಡಿದಿಟ್ಟು ಕೊಡುವ ಅನುವಾದ ಪ್ರಕ್ರಿಯೆ ಸಾಧಾರಣವಾದ ಕೆಲಸವಲ್ಲ. ಇನಾಂದಾರರು ಅತ್ಯಂತ ಯಶಸ್ವಿಯಾಗಿ ಅನುವಾದಿಸಿ, ಮರಾಠಿ ಸಾಹಿತ್ಯದ ಮೂಲ ಕೃತಿಯಾದ ಈ ಕಾದಂಬರಿಯನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಅನನ್ಯ ಕೊಡುಗೆಯಾಗಿದೆ.

**ಸ್ವತಂತ್ರ ಕಾದಂಬರಿಗಳು**

ಸ್ವತಂತ್ರ ಕಾದಂಬರಿಗಳ ಬರವಣಿಗೆಯನ್ನು ಆರಂಭಿಸುವುದಕ್ಕೆ ಪೂರ್ವಭಾವಿಯಾಗಿ ಕಾದಂಬರಿಗಳ ರಚನೆಯ ಸ್ವರೂಪ, ಶೈಲಿ, ವಸ್ತು ವಿನ್ಯಾಸ ಇತ್ಯಾದಿಗಳನ್ನು ಕುರಿತು ಸಾಕಷ್ಟು ಚಿಂತನೆ ನಡೆಸುವುದರ ಮೂಲಕ ತಮ್ಮದೇ ಆದ ಕೆಲವು ತಾತ್ವಿಕ ನಿಲುವುಗಳನ್ನು ರೂಪಿಸಿಕೊಂಡಿದ್ದರು. ಅಲ್ಲದೆ ಕಾದಂಬರಿಗಳನ್ನು ಬರೆಯಲಾರಂಭಿಸಿದ ಕಾಲಿಘಟ್ಟ ೪೦ರ ದಶಕದ್ದು. ಎರಡನೇ ಮಹಾಯುದ್ಧ ನಡೆಯುತ್ತಿದ್ದ ಕಾಲ. ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯ ಮೂಲಕ ಸ್ವಾತಂತ್ರ್ಯ ಹೋರಾಟ ಸಾಕಷ್ಟು ಪರಾಕಾಷ್ಠೆಯನ್ನು ತಲುಪಿತ್ತು. ಸ್ವಾತಂತ್ರ್ಯ ಘೋಷಣೆಯ ಅವಧಿಯೂ ಸಮೀಪಿಸುತ್ತಿದ್ದ ಕಾಲ ಅದಾಗಿತ್ತು, ಅಂಥ ಒಂದು ಕಾಲಘಟ್ಟದಲ್ಲಿ ಮುಂಬಯಿ ಮಹಾನಗರ ಅನೇಕ ಬದಲಾವಣೆಗಳ ನಿರ್ದೇಶಕ ಕೇಂದ್ರವಾಗಿತ್ತು. ಭಾರತೀಯ ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದ ಮಹಿಳೆ, ಸುಧಾರಣಾ ಚಳುವಳಿಯ ಪ್ರೇರಣೆಯಿಂದಾಗಿ ಸಾಕಷ್ಟು ಬದಲಾವಣೆಯನ್ನು ತನ್ನ ಬದುಕಿನಲ್ಲಿ ತಂದುಕೊಳ್ಳಲು ಪ್ರಯತ್ನಿಸಿದಳು. ಸಂಪ್ರದಾಯದ ಕಟ್ಟು ಪಾಡುಗಳನ್ನು ಕಳಚಿ ಶಿಕ್ಷಣ ಉದ್ಯೋಗಗಳತ್ತ ಆಕರ್ಷಿತಳಾದಳು. ಸಂಕೋಚವನ್ನು ಬದಿಗಿರಿಸಿ ನಿರ್ಭಿಡೆಯಿಂದ ಉದ್ಯೋಗದತ್ತ ವಾಲಿ ದುಡಿಯ ತೊಡಗಿದಳು. ವಿಶೇಷವಾಗಿ ಸುಶಿಕ್ಷಿತ ಮಧ್ಯಮ ವರ್ಗದ ಹೆಣ್ಣುಮಕ್ಕಳು ಆದರ್ಶ, ಮಡಿವಂತಿಕೆಗಳಿಂದ ಹೊರಬಂದು ಆಧುನಿಕ ಬದುಕಿನ ಬದಲಾವಣೆಗಳಿಗೆ ತೆರೆದುಕೊಂಡರು. ಇನಾಂದಾರರು ಇಂತಹ ಸಂಧಿಕಾಲದಲ್ಲಿನ ಮಹಿಳೆಯರ ಬದುಕು ಬವಣೆ–ಧ್ಯೇಯೋದ್ದೇಶಗಳೂ, ಅವರ ವೈಚಾರಿಕ ನಿಲುವು ನಂಬಿಕೆಗಳು– ಮೊದಲಾದವುಗಳನ್ನು ತಮ್ಮ ಕಾದಂಬರಿಗಳ ಸ್ತ್ರೀ ಪಾತ್ರಗಳ ಮೂಲಕವಾಗಿ ಬಿಂಬಿಸುವ ಪ್ರಯತ್ನ ಮಾಡಿದರಾದರೂ, ಕಾದಂಬರಿಗಳನ್ನು ಓದಿದಾಗ ಅವರ ವಿಚಾರಗಳು ಇನ್ನೂ ಮಹಿಳೆಯರ ಸಂಪೂರ್ಣವಾದ ಪ್ರಗತಿಪರ ನಿಲುವುಗಳ ಪರವಾಗಿಲ್ಲವೆಂಬುದು ಸ್ಪಷ್ಟವಾಗುತ್ತದೆ. ವಿದ್ಯಾವಂತಳಾಗಬೇಕೆಂಬುದರ ಬಗ್ಗೆ ಅವರ ವಿರೋಧವಿಲ್ಲವಾದರೂ, ಕುಟುಂಬ, ದಾಂಪತ್ಯ ಮುಂತಾದ ಸನ್ನಿವೇಶಗಳಲ್ಲಿ ಹೆಣ್ಣಿಂದ ನಿರೀಕ್ಷಿಸುವುದೇ ಬೇರೆ ಎಂಬುದು ಢಾಳಾಗಿ ಕಾಣುತ್ತದೆ.

ಇನಾಂದಾರರಿಗೆ ಬೇರೆ ಬೇರೆ ಸಾಹಿತ್ಯ ಪ್ರಕಾರಗಳ ಬಗ್ಗೆ ಸಾಕಷ್ಟು ಹಿಡಿತವಿದ್ದರೂ ಕಾದಂಬರಿಯನ್ನೇ ಅತ್ಯಂತ ಸಮರ್ಥವಾದ ಅಭಿವ್ಯಕ್ತಿ ಮಾಧ್ಯಮವೆಂದು ಆರಿಸಿಕೊಳ್ಳುತ್ತಾರೆ. ಆರಿಸಿಕೊಂಡುದರ ಬಗ್ಗೆ ಅವರ, ಅಭಿಪ್ರಾಯ ಹೀಗಿದೆ, ಯಾವ ಮಾಧ್ಯಮವನ್ನು ಲೇಖಕ ಆರಿಸಿಕೊಳ್ಳುತ್ತಾನೆಂದು ಹೇಳಲು ಸಾಧ್ಯವಿಲ್ಲವಾದರೂ ತಾವು ಹೆಚ್ಚಾಗಿ ಓದಿದ್ದು ಕಾದಂಬರಿಗಳನ್ನು, ಜಾನ್‌ಗಾಲ್ಸ್‌ವರ್ದಿ, ಮೆಚ್ಚಿನ ಲೇಖಕ ಇಂದಿಗೂ ಆ ಲೇಖಕ ತಮಗೆ ಪ್ರಿಯವೇ. ಇವನ ಪ್ರಭಾವದ ಜೊತೆಗೆ ಖಾಂಡೇಕರರ ಕಾದಂಬರಿ ಓದಿದ ಮೇಲಂತೂ ಕಾದಂಬರಿಯ ಮಾಧ್ಯಮವೇ ತಮಗೆ ಹೆಚ್ಚು ಪ್ರಿಯವೆಂದು ಒತ್ತಿ ಹೇಳುತ್ತಾರೆ. ಇದು ಕಾದಂಬರಿ ಬರೆಯಲು ಒಂದು ಕಾರಣವಾದರೆ, ಮತ್ತೊಂದು ಕಾರಣ, PEN ಸಂಸ್ಥೆಯಲ್ಲಿ ಉಪಸಂಪಾದಕರಾಗಿ ಕೆಲಸ ಮಾಡುತ್ತಿರುವಾಗ ಕನ್ನಡ ಪುಸ್ತಕಗಳ ವಿಮರ್ಶೆಯನ್ನು ಇಂಗ್ಲಿಷಿನಲ್ಲಿ ಬರೆಯುತ್ತಿದ್ದರು. ದೊಡ್ಡದೊಡ್ಡ ಲೇಖಕರ ಕೃತಿಗಳನ್ನು ವಿಮರ್ಶಿಸುತ್ತಾ ಕೆಲವೊಮ್ಮೆ ಕಟುವಾದ ಟೀಕೆಗಳನ್ನೂ ಮಾಡುತ್ತಿದ್ದರು. ಇವರ ಈ ಬಗೆಯ ನಿಷ್ಠುರವಾದ ನಿಲುವು ಕೆಲವರಿಗೆ ಅಸಮಾಧಾನ ಉಂಟುಮಾಡಿದ್ದು ಸ್ವಾಭಾವಿಕವೇ! ಆದರೆ ಮನೋಹರ ಗ್ರಂಥಮಾಲೆಯ ಜಿ.ಬಿ.ಜೋಶಿ ಒಮ್ಮೆ ಯಾವ ಮನಃ ಸ್ಥಿತಿಯಲ್ಲಿ ಇದ್ದರೋ ಏನೋ "ಇನ್ನೊಬ್ಬರ ಪುಸ್ತಕವನ್ನು ಟೀಕಿಸುವುದು ಸುಲಭ, ಸ್ವತಃ ಅನುಭವವಾದಾಗ ಗೊತ್ತಾಗುತ್ತದೆ" ಎಂದು ವ್ಯಂಗ್ಯವಾಗಿ ಮಾತಿನ ಬಾಣ ಎಸೆದರಂತೆ. ಇದರಿಂದ ಇನಾಂದಾರರು ಸಿಟ್ಟಾಗುವುದಕ್ಕೆ ಬದಲಾಗಿ ಸವಾಲಾಗಿ ಸ್ವೀಕರಿಸಿ. ತಮ್ಮ ಬರವಣಿಗೆಯ ಮೂಲಕ ಪ್ರತಿಭೆ, ಸಾಮಾರ್ಥ್ಯಗಳನ್ನು ಪ್ರಮಾಣೀಕರಿಸಿ ತೋರಿಸಲು ಮುಂದಾಗಿ, ಕೇವಲ ಎಂಟೇ ದಿನಗಳಲ್ಲಿ 'ಮೂರಾಬಟ್ಟೆ' ಎಂಬ ಸ್ವತಂತ್ರ ಕಾದಂಬರಿಯನ್ನು ಬರೆದು ೧೯೪೬ರಲ್ಲಿ ಅದನ್ನು ಪ್ರಕಟಿಸಿದರಂತೆ. ಕಾದಂಬರಿ ಸಿದ್ಧವೂ ಆಯಿತು. ಸಾಕಷ್ಟು ಜನಪ್ರಿಯತೆಯನ್ನೂ ಗಳಿಸಿತು, ಇದರಿಂದ ಕಾದಂಬರಿ ಬರೆಯಬಲ್ಲೆನೆಂಬ ಆತ್ಮವಿಶ್ವಾಸ, ಜಿದ್ದು, ಹಟಮಾರಿತನಗಳಿಂದಾಗಿ, ಧಾರಾವಾಹಿಯಂತೆ, ಕಾದಂಬರಿಗಳು ಒಂದರ ಮೇಲೊಂದು ಹುಟ್ಟಿ, ೧೯೮೮ ರ ತನಕ ನಿರಂತರವಾಗಿ ಮುಂದುವರೆದು ಬಂತು.

ಎಂ. ರಾಜಗೋಪಾಲಾಚಾರ್ಯರೊಡನೆ ನಡೆದ ಒಂದು ಸಂದರ್ಶನದಲ್ಲಿ ಕಾದಂಬರಿಯ ಸ್ವರೂಪದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಹೀಗೆ ಸ್ಪಷ್ಟಪಡಿಸುತ್ತಾರೆ– "ನೋಡಿ ಕಾದಂಬರಿ ನಿಮಗೆ ಗೊತ್ತಿರೋ ಹಾಗೆ, ಬಹಳ ವಿಸ್ತಾರವುಳ್ಳ ಸಾಹಿತ್ಯ ಪ್ರಕಾರ...... ಅದು ಒಬ್ಬನ ಜೀವನ ಕಥೆಯೂ ಆಗಬಹುದು. ಒಂದು ಜನಸಮುದಾಯದ ಜೀವನ ಕಥೆಯನ್ನು ಹೇಳಬಹುದು. ಹೀಗೆ ಅದರ ವಿಷಯ ವಿಸ್ತಾರ ಬಹಳ ದೊಡ್ಡದು. ವೈವಿಧ್ಯ ಅದೇ ತರಹ ಇರೋದರಿಂದ ಕಾದಂಬರಿ

ಇಂಥದೇ ಇರಬೇಕು ಅದರ ರೂಪ, ರಚನೆ ಹೀಗೇ ಆಗಬೇಕು ಅಂತನ್ನೋ ಯಾವ ನಿಯಮಗಳಿಂದಲೂ ಅದನ್ನು ನಿಯಂತ್ರಿಸಲು ಸಾಧ್ಯವಿಲ್ಲ. ಇದರ ಅರ್ಥ ಬರೆದದ್ದೆಲ್ಲ ಅಥವಾ ಯಾರು ಬರೆದರೂ ಹೇಗೆ ಬರೆದರೂ ಕಾದಂಬರಿ ಆಗ್ತದೆ ಅಂತನ್ನೋ ಮಾತು ನಾನು ಹೇಳೋಲ್ಲ. ಆದರೆ, ಕಾದಂಬರಿಗಳಲ್ಲಿ ಅನೇಕ ಪ್ರಕಾರಗಳಿವೆ. ಸಾಧ್ಯತೆಗಳಿವೆ ಅಂತನ್ನೋ ಮಾತಿಗೆ ನೀವು ಕೇಳಿದಿರಿ 'ಕಾದಂಬರಿ ಮತ್ತು ನೀಳ್ಗತೆಗೆ ವ್ಯತ್ಯಾಸ ಹೇಗೆ ಹೇಳ್ಲಿಕಾಗುತ್ತದೆ ಅಂತ. ವಿಸ್ತಾರ ಅನ್ನೋ ಮಾತನ್ನು ಹೇಳಿದೆನಲ್ಲ, ಈ ವಿಸ್ತಾರವೇ ಕಾದಂಬರಿಯ ಲಕ್ಷಣ, ಕಾಲದ ವಿಸ್ತಾರವಾಗಬಹುದು, ಅನುಭವದ ವಿಸ್ತಾರವಾಗಬಹುದು ಆದರೆ ಭಾವದ ವಿಸ್ತಾರವಿಲ್ಲದೆ ನಿಜವಾದ ವಿಸ್ತಾರವಾಗದು" ಎಂದು ಹೇಳಿ ವಿವರಿಸಿರುವ ಈ ಮಾತುಗಳ ಮೂಲಕ ಇವರಿಗೆ ಕಾದಂಬರಿಯ ರೂಪ, ರಚನೆ, ಸಂವಿಧಾನದ ಬಗ್ಗೆ ಖಚಿತವಾದ ನಿಲುವು ಇತ್ತೆಂಬುದು ಸ್ಪಷ್ಟ.

ಇಷ್ಟೊಂದು ಸಂಖ್ಯೆಯಲ್ಲಿ ಕಾದಂಬರಿಗಳನ್ನು ಬರೆದ ಇವರಿಗೆ ವಸ್ತು ಲಭ್ಯವಾದದ್ದೂ ಕೂಡಾ ತಮ್ಮ ಸುತ್ತಲಿನ ಸನ್ನಿವೇಶಗಳನ್ನು, ತಮಗೆ ಹತ್ತಿರದ ದೂರದ ವ್ಯಕ್ತಿಗಳ ಗುಣ ಸ್ವಭಾವಗಳನ್ನು ಸೂಕ್ಷ್ಮ ದೃಷ್ಟಿಯಿಂದ ಗಮನಿಸಿ, ಅವರ ವಾಸ್ತಾವಾನುಭವಗಳಿಗೆ ಕಾದಂಬರಿಗಳ ಮೂಲಕ ಒಂದು ಕಲಾತ್ಮಕ ಅಭಿವ್ಯಕ್ತಿಯನ್ನು ನೀಡುವ ಪ್ರಯತ್ನದಿಂದಾಗಿ ಸಾಧ್ಯವಾಯಿತು ಎಲ್ಲರ ಅನುಭವಕ್ಕೂ ಬರುವಂತಹ ಸನ್ನಿವೇಶಗಳು ಪಾತ್ರಗಳು ಬರುವುದರ ಮೂಲಕ ವಾಸ್ತವತೆಯನ್ನು ಕಾಯ್ದುಕೊಂಡು ಬಂದಿದ್ದಾರೆ. ವರ್ತಮಾನದ ಬದುಕಿನ ಅನುಭವಗಳ ಜೊತೆ ಹಿಂದೊಮ್ಮೆ ಅನುಭವಕ್ಕೆ ಬಂದಿರಬಹುದಾದ ಘಟನೆಗಳು, ವ್ಯಕ್ತಿಗಳು ಸದಾಕಾಲ ಸುಪ್ತ ಪ್ರಜ್ಞೆಯಲ್ಲಿ ಅಡಗಿ ಕುಳಿತಿರುತ್ತವೆ. ಅದೂ ನಿಗೂಢವಾಗಿ. ಇವರ ದೃಷ್ಟಿಯಲ್ಲಿ 'ಗತಕಾಲ' ಎನ್ನುವುದಕ್ಕೆ ಎಂದೂ ನಾವು ಇರುವುದಿಲ್ಲ. ಯಾವತ್ತೂ ಅವು ಮನದಾಳದಲ್ಲಿ ಉಳಿದಿರುತ್ತದೆ ಮತ್ತು ಈ ಗತವೇ ಮುಂದೆ ವರ್ತಮಾನವೂ ಆಗುತ್ತದೆ, ಭವಿಷ್ಯವಾಗಿಯೂ ಮುಂದುವರೆಯುತ್ತದೆ. ಈ ಪರಿವರ್ತನೆಯೇ ಜೀವನದ ಗತಿ, ಜೀವನ ಕ್ರಮವನ್ನು ಒಂದು ರೀತಿಯಲ್ಲಿ ರೂಪಿಸಿಕೊಡುವಂತಹ ವಿಚಾರವಾಗುತ್ತದೆ. ಇದನ್ನು ನಿದರ್ಶನವಾಗಿಸಲು ಒಂದು ಕಥೆಯನ್ನು ಯೋಜನೆ ಮಾಡಬೇಕಾಗುತ್ತದೆ – ಎಂದರೆ ಯಾವುದೋ ಒಂದು ವಿಚಾರದಿಂದ ಬಂತು, ಹೀಗೆ ಬಂದು ಬರೀಬೇಕು ಅನ್ನಿಸಬಹುದು. ಮತ್ತೊಮ್ಮೆ ಒಂದು ಪಾತ್ರದಿಂದ ವಿಚಾರ ಹೊಮ್ಮಬಹುದು' ಎಂದು ಕಾದಂಬರಿಯ ಆತ್ಮವಾದ ವಸ್ತುವಿನ ಉಗಮದ ವಿಧಾನವನ್ನು ಸ್ಪಷ್ಟೀಕರಿಸುತ್ತಾರೆ.

ಅವರ ೧೬ ಸ್ವತಂತ್ರ ಕಾದಂಬರಿಗಳಲ್ಲಿ "ಮೂರಾಬಟ್ಟೆ" (೧೯೪೬) ಹಿಂದೆ ತಿಳಿಸಿದಂತೆ ತಮಗೆ ಎದುರಾದ ಸವಾಲೊಂದಕ್ಕೆ ಉತ್ತರವಾಗಿ ಬರೆದದ್ದಾಗಿದೆ. ಬರೆದ ಈ ಮೊದಲ ಕಾದಂಬರಿಯೇ ೧೯೭೩ ರಷ್ಟು ಹೊತ್ತಿಗೆ ಮೂರು ಮರುಮುದ್ರಣಗಳನ್ನು ಕಂಡದ್ದು ಅದರ ಜನ ಪ್ರಿಯತೆಗೆ ಸಾಕ್ಷಿಯಾಗಿದೆ. ರಾಜಕೀಯ ವಸ್ತುವನ್ನು ಒಳಗೊಂಡಿದ್ದು ಸ್ವಾತಂತ್ರ್ಯ ಹೋರಾಟದ ಪೂರ್ವ ಮತ್ತು ನಂತರದ ಸ್ಥಿತಿಗತಿಯನ್ನು ಬಿಂಬಿಸುವ ಅನೇಕ ಲೇಖನಗಳು, ಸೃಜನಶೀಲ ಬರಹಗಳಾದ ಕಥೆ, ಕಾದಂಬರಿಗಳು ಎಲ್ಲ ಪ್ರಾದೇಶಿಕ ಭಾಷೆಗಳಲ್ಲಿ ವಿಪುಲವಾಗಿ ಕಾಣಿಸಿಕೊಂಡವು. ದೇಶಭಕ್ತಿ, ದೇಶ ಪ್ರೇಮವನ್ನು ಜಾಗೃತಿಗೊಳಿಸುವ ಉದ್ದೇಶದಿಂದಲೇ ಇಂತಹ ಬರಹಗಳು ಕಾಣಿಸಿಕೊಂಡವು. ಅದರಲ್ಲಿಯೂ ಬಂಕಿಮ ಚಂದ್ರರ 'ಆನಂದ ಮಠ' ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭವನ್ನು ಕಣ್ಣಿಗೆ ಕಟ್ಟಿದಂತೆ ವಿವರಿಸುವ ಮತ್ತು ದೇಶ ಪ್ರೇಮವನ್ನು ಜಾಗೃತಗೊಳಿಸುವ, ಉದ್ದೀಪನಗೊಳಿಸುವ ಅತ್ಯಂತ ಮಹತ್ವದ ಮತ್ತು ಚರಿತ್ರಾರ್ಹವೆನಿಸುವ ಕಾದಂಬರಿಯಾಗಿ ಗುರುತಿಸಿಕೊಂಡಿದೆ. ಸ್ವಾಂತಂತ್ರ್ಯದ ಸಂಧಿಕಾಲದ ಪರಿಸ್ಥಿತಿಯನ್ನು ವಿವರಿಸುವ ಕಥೆ, ಕಾದಂಬರಿ ನಾಟಕಗಳನ್ನು ಕಾರಂತರು, ಶ್ರೀರಂಗರು, ತರಾಸು, ಕಟ್ಟೀಮನಿ ಮೊದಲಾದವರು ಕನ್ನಡದಲ್ಲಿ ಬರೆದು ಕನ್ನಡ ಸಾಹಿತ್ಯ ಜಗತ್ತಿಗೆ ನೀಡಿದರು. ಇನಾಂದಾರರೂ ಕೂಡಾ ಈ ಕಾದಂಬರಿಯ ಮೂಲಕ ಅವರೆಲ್ಲರ ಸಾಲಿಗೆ ಸೇರಿದರು. 'ಮೂರಾಬಟ್ಟೆ' ಜೊತೆಗೆ ೧೯೪೮ರಲ್ಲಿ 'ವಿಜಯಯಾತ್ರೆ' ಎಂಬ ಮತ್ತೊಂದು ರಾಜಕೀಯ ಕಾದಂಬರಿಯನ್ನು ಅವರು ಬರೆದರು.

ಮೂರಾಬಟ್ಟೆ ಕಾದಂಬರಿ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ, ಗಟ್ಟಿ ನಿಲುವಿನೊಂದಿಗೆ ಮತ್ತು ತಾತ್ವಿಕ ಬದ್ಧತೆಯೊಂದಿಗೆ, ಯಾವುದೇ ಆಸೆ, ಆಮಿಷಗಳ ಸೆಳೆತಕ್ಕೆ ಒಳಗಾಗದೆ ಕಡೆತನಕ ಉಳಿದವರ ಮತ್ತು ದುರ್ಬಲ ಮನಸ್ಸಿನಿಂದಾಗಿ ಅನೇಕ ರೀತಿಯ ಆಮಿಷಗಳಿಗೆ ಒಳಗಾಗಿ ಹಿಂದುಳಿದು ಬಿಟ್ಟವರ ಕುರಿತ ವಿಶ್ಲೇಷಣೆಯನ್ನು ವಸ್ತುವಾಗಿ ಹೊಂದಿದೆ. ಇಡೀ ಕಥೆ ಮೂರು ಪಾತ್ರಗಳ ಸುತ್ತ ಹೆಣೆಯಲ್ಪಟಿದೆ. ತರುಣನ್ಯಾಯವಾದಿ ರಾಮಣ್ಣ, ಅವನು ಪ್ರೀತಿಸುವ ನಿರ್ಮಲೆ, ಮತ್ತು ರಾಮಣ್ಣನ ಬಾಲ್ಯ ಸ್ನೇಹಿತನಾದ ದೇಶಭಕ್ತ, ಶಾಮಣ್ಣ. ಈ ಶಾಮಣ್ಣ ಕಟ್ಟಾ ದೇಶಭಕ್ತ, ಬಡವ, ಅವನಿಗೆ ತಾನು ನಂಬಿದ ಮೌಲ್ಯಗಳು ಮತ್ತು ದೇಶ ಪ್ರೇಮವೇ ಮುಖ್ಯವಾಗಿರುತ್ತದೆ. ರಾಮಣ್ಣ ತನ್ನ ಸಾಮರ್ಥ್ಯ, ಬುದ್ಧಿ ಶಕ್ತಿ, ಕಾರ್ಯದಕ್ಷತೆಯಿಂದಾಗಿ ನ್ಯಾಯಧೀಶರಾದ ನಾನಾ ಸಾಹೇಬರ ಪ್ರೀತಿ, ವಿಶ್ವಾಸಗಳಿಗೆ ಪಾತ್ರನಾಗಿರುತ್ತಾನೆ. ನಾನಾ ಸಾಹೇಬರ ಮಗಳನ್ನೂ ಪ್ರೀತಿಸುತ್ತಿರುತ್ತಾನೆ. ಸರ್ಕಾರಿ ವಕೀಲನಾಗಿ ನೇಮಕಗೊಂಡ ಸಂದರ್ಭದಲ್ಲಿಯೇ

ಅವನಿಗೊಂದು ಅಗ್ನಿ ಪರೀಕ್ಷೆ ಎದುರಾಗುತ್ತದೆ; ಶಾಮಣ್ಣ, ಅನನ್ಯ ದೇಶಭಕ್ತ, ರಾಜ ದ್ರೋಹದ ಆರೋಪದ ಮೇರೆಗೆ ಸೆರೆಯಾದವನು, ರಾಮಣ್ಣನ ಎದುರೇ ವಿಚಾರಣೆಗೆ ಒಳಗಾಗುತ್ತಾನೆ. ಅವನ ಪರವಾಗಿ ವಾದಿಸಬಹುದಾಗಿದ್ದ ರಾಮಣ್ಣ ಅವನ ವಿರುದ್ಧ ವಾದಿಸಿ, ಸ್ನೇಹಿತ ಸೆರೆವಾಸ ಕಾಣುವಂತೆ ಮಾಡುತ್ತಾನೆ. ಶಾಮಣ್ಣನ ತಾಯಿ ರಿಂದವ್ವ, ಸರಕಾರದ ವಂಚನೆ, ಸಮಯ ಸಾಧಕರ ಸ್ವಾರ್ಥ, ದ್ರೋಹಗಳಿಂದ ಇದ್ದ ಬದ್ದ ಅಲ್ಪ ಸ್ವಲ್ಪ ಆಸ್ತಿ, ಮನೆ ಹೊಲಗಳನ್ನು ಕಳೆದುಕೊಂಡು ಬದುಕಲು ಬೇರೆ ದಾರಿ ಕಾಣದೆ, ಪರದೇಶದಲ್ಲಾದರೂ ಬದುಕನ್ನು ಕಂಡುಕೊಳ್ಳಬಯಸಿ ಮಗಳು ಪದ್ಮಾವತಿಯೊಂದಿಗೆ ಮುಂಬಯಿ ಸೇರುತ್ತಾಳೆ. ರಾಮಣ್ಣ ಗೆಳೆಯನ ದುಃಸ್ಥಿತಿಗೆ ಮನನೊಂದು ಚಡಪಡಿಸುತ್ತಾನೆ. ಆದರೆ ಅವರಿಗೆ ಸಾಂತ್ವನವಾಗಲೀ, ಸಹಾಯವಾಗಲಿ ಅವನಿಂದ ಗೆಳೆಯನ ಕುಟುಂಬಕ್ಕೆ ದೊರೆಯದೆ ಹೋಗುವುದೊಂದು ವಿಪರ್ಯಾಸ. ಅವನಿಗಿದ್ದ ಮಾಡಬೇಕೆನ್ನುವ, ಆದರೆ ಮಾಡಲಾಗದ ದ್ವಂದ್ವ ಸ್ಥಿತಿಯಲ್ಲಿ, ಸಮಯ ಮೀರಿಹೋಗಿ, ಶಾಮಣ್ಣನ ತಾಯಿ ರಿಂದವ್ವ ಮಗನಿಗೆ ಒದಗಿದ ಜೈಲು ಶಿಕ್ಷೆ, ಮತ್ತು ಬೇರೆ ಬೇರೆ ರೀತಿಯ ಅಘಾತಗಳಿಂದ ಸಾಯುವ ಸ್ಥಿತಿ ತಲುಪುತ್ತಾಳೆ. ತಾಯಿಯ ದಾರುಣ ಸ್ಥಿತಿಯನ್ನು ಕೇಳಿ, ಶಾಮಣ್ಣ ಅಧಿಕಾರಿಗಳಿಗೆ ಕ್ಷಮಾಯಾಚನಾಪತ್ರ ಬರೆದು, ಜೈಲಿನಿಂದ ಬಿಡುಗಡೆ ಹೊಂದಿ, ತಾಯಿಯನ್ನು ಕಾಣಲು ಧಾವಿಸುತ್ತಾನಾದರೂ ತಾಯಿಯನ್ನು ಸಾವಿನ ನಂತರವೂ ಕಾಣಲಾಗದ್ದಕ್ಕಾಗಿ ಮತ್ತು ತನ್ನ ಜೀವನದಲ್ಲಿನ ಘಟನೆಗಳಿಂದಾಗಿ ಜರ್ಝರಿತನಾಗುತ್ತಾನೆ.

ಮಿತ್ರದ್ರೋಹದ ಬಗ್ಗೆ ಒಂದಷ್ಟು ಆತ್ಮಗ್ಲಾನಿಯೂ ಇಲ್ಲದೆ ತನ್ನ ವೈಯಕ್ತಿಕ ಸುಖ, ಸ್ವಾರ್ಥಕ್ಕಷ್ಟೇ ಮಹತ್ವಕೊಟ್ಟ ರಾಮಣ್ಣ, ತಾನು ಪ್ರೀತಿಸುತ್ತಿದ್ದ ನಿರ್ಮಲೆಗೂ ಪ್ರಾಮಾಣಿಕವಾದ ಪ್ರೀತಿಯನ್ನು ನೀಡಲಾಗದೆ ಕೇವಲ ದೈಹಿಕ ತೃಪ್ತಿಗಾಗಿಯಷ್ಟೇ ಅವಳನ್ನು ಬಯಸಿದ್ದರಿಂದ ಅವಳನ್ನು ವಂಚಿಸಿ, ಗರ್ಭಿಣಿಯನ್ನಾಗಿ ಮಾಡಿ ಅವಳಿಂದ ದೂರ ಸರಿಯುತ್ತಾನೆ. ನಿರ್ಮಲೆಯ ಪಾಲಿಗೆ ದುಃಖ ಮಾತ್ರವೇ ಉಳೀಯುತ್ತದೆ. ಹೀಗೆ ಈ ಕಾದಂಬರಿಯಲ್ಲಿ ಬರುವ ಮೂರೂ ಪಾತ್ರಗಳು ಬೇರೆ ಬೇರೆ ಕಾರಣಗಳಿಗಾಗಿ ಜೀವನದಲ್ಲಿ ನೋವು, ಸಂಕಟಗಳನ್ನು ಅನುಭವಿಸುತ್ತಾರೆ. ಯಾರೊಬ್ಬರೂ ತಾವು ಅಂದುಕೊಂಡದ್ದನ್ನು ಏನನ್ನೂ ಸಾಧಿಸದೆ, ಅಸಹಾಯಕತೆಯನ್ನೇ ಎದುರಾಗಿಸಿಕೊಳ್ಳುತ್ತಾರೆ, ಮೂವರ ಬದುಕೂ ಮೂರು ರೀತಿಯಲ್ಲಿ ಮೂರಾಬಟ್ಟೆಯಾಗುತ್ತದೆ; ರಾಮಣ್ಣನದು ನೈತಿಕ ಪತನವಾದರೆ, ಶಾಮಣ್ಣ ದೇಶೋದ್ಧಾರ ಮಾಡುವೆನೆಂಬ ಹುಂಬ ನಂಬಿಕೆಯಲ್ಲಿ ಎಲ್ಲವನ್ನೂ ಕಳೆದುಕೊಳ್ಳುತ್ತಾನೆ, ಕಡೆಗೆ ತಾಯಿಯ ಅಂತಿಮದರ್ಶನದಿಂದಲೂ, ಬದುಕಲು ಬೇಕಾದ ಹಾದಿಯಿಂದಲೂ ವಂಚಿತನಾಗುತ್ತಾನೆ; ಹತಾಶ ಸ್ಥಿತಿಯನ್ನು

ತಲುಪುತ್ತಾನೆ, ನಿರ್ಮಲೆ ಪ್ರೀತಿಯ ಹೆಸರಿನಲ್ಲಿ ಲೈಂಗಿಕ ಅತ್ಯಾಚಾರಕ್ಕೆ ಒಳಗಾಗಿ ಶೀಲ ಭ್ರಷ್ಟಳಾಗುತ್ತಾಳೆ. ಈ ಮೂವರ ವೈಯಕ್ತಿಕ ಬದುಕುಗಳ ಹಿನ್ನೆಲೆಯಲ್ಲಿಯೇ ಕ್ವಿಟ್ ಇಂಡಿಯಾ ಚಳುವಳಿಯ ರೋಮಾಂಚಕಾರಿ ಘಟನೆಗಳ ವಿವರಣೆ ಕಾದಂಬರಿಯ ಪ್ರಮುಖ ಭಾಗವಾಗಿ ಮೂಡಿ ಬಂದಿದೆ. ರಾಷ್ಟ್ರ ಪ್ರೇಮದ ಮಾರ್ಮಿಕ ಚಿತ್ರಣವಿದೆ. ಮುಂಬಯಿ ನಗರದ ಗಲ್ಲಿ ಗಲ್ಲಿ ಬೀದಿ ಬೀದಿಗಳಲ್ಲಿ ಉಕ್ಕಿ ಹರಿಯುತ್ತಿದ್ದ ರಾಷ್ಟ್ರ ಪ್ರೇಮದ ವಾಸ್ತವ ನಿರೂಪಣೆಯಿದೆ. ಇಂಥ ರಾಷ್ಟ್ರಪ್ರೇಮದ ಪ್ರವಾಹದಲ್ಲಿ ಕೊಚ್ಚಿ ಹೋದ ಶಾಮಣ್ಣ ಯಾವ ಗುರಿಯನ್ನೂ ಮುಟ್ಟುವುದಿಲ್ಲ. ಅಲ್ಲದೆ ರಾಜದ್ರೋಹದ ಆರೋಪದಲ್ಲಿ ತನ್ನ ಭವಿಷ್ಯವನ್ನು ಹಾಳು ಮಾಡಿಕೊಳ್ಳುತ್ತಾನೆ. ಈ ಕಾದಂಬರಿಯಲ್ಲಿ ಒಂದು ಕಡೆ ಸ್ವಾತಂತ್ರ್ಯ ಹೋರಾಟದ ಕಥೆ ಇದ್ದರೆ, ಮತ್ತೊಂದು ಕಡೆ ರಾಮಣ್ಣ ನಿರ್ಮಲೆಯರ ಪ್ರೇಮಸಂಬಂಧಗಳ ಕಥೆ ಇದೆ. ಇನಾಂದಾರರು ಈ ಎರಡನ್ನೂ ಅತ್ಯಂತ ಸಮತೋಲಿತವಾದ ರೀತಿಯಲ್ಲಿ, ಸಮರ್ಥವಾಗಿ ನಿರ್ವಹಿಸಿದ್ದಾರೆ.

**ಕನಸಿನ ಮನೆ** (೧೯೪೭) : ಮೂರಾಬಟ್ಟೆ ಕಾದಂಬರಿ ಪ್ರಕಟವಾದ ಮರುವರ್ಷವೇ 'ಕನಸಿನಮನೆ' ಪ್ರಕಟವಾಯಿತು. ಪ್ರಕಟವಾಗುವುದಷ್ಟೆ ಅಲ್ಲದೆ, ೧೯೫೦.೫೮.೭೨ ರಲ್ಲಿ ಮರು ಮುದ್ರಣಗಳು ಕಂಡವು. ಅಲ್ಲದೆ ೧೯೫೩ರಲ್ಲಿ ಈ ಕಾದಂಬರಿಯ ಮುಂದುವರೆದ ಕಥಾನಕವನ್ನು ಒಳಗೊಂಡು ೧೯೫೨ರಲ್ಲಿ ಮತ್ತು ೧೯೭೨ ರಲ್ಲಿ ಕಟ್ಟಿದ ಮನೆ, ಬಾಡಿದ ಹೂವು, ಕತ್ತಲೆಯ ಕಡಲ ಕಾದಂಬರಿಗಳು ಒಂದಾದ ಮೇಲೊಂದು ಪ್ರಕಟವಾದವು. ನಾಲ್ಕೂ ಕಾದಂಬರಿಗಳು ಸೇರಿ ಒಂದು ಬೃಹತ್ ಸಂಪುಟವಾಗಬಹುದಾಗಿದ್ದ ಈ ಕಾದಂಬರಿಯನ್ನು ನಾಲ್ಕು ಭಾಗಗಳಾಗಿ ಪ್ರಕಟಿಸಿದರು. ಒಂದೊಂದು ಕಾದಂಬರಿಯೂ ಕಾದಂಬರಿಯ ಕಥಾನಾಯಕಿ ಮೋಹಿನಿಯ ಬದುಕಿನ ಸಂಗತಿಗಳನ್ನು ಮುಂದುವರೆಸುತ್ತದೆ.

೧೯೪೭ರಲ್ಲಿ ಬರೆದ ಕನಸಿನ ಮನೆಯಲ್ಲಿ ಆನಂದ–ಮೋಹಿನಿ ದಂಪತಿಗಳ ನಡುವೆ ಬಿರುಕು ಉಂಟಾಗಲು ಕಾರಣಗಳು ಸೃಷ್ಟಿಯಾಗುತ್ತದೆ. ಮದುವೆಯಾಗಿ ಗಂಡನ ಮನೆಗೆ ಬರುವಾಗ ಹೆಣ್ಣು ಏನೆಲ್ಲ ಕನಸುಗಳನ್ನು ಕಟ್ಟಿಕೊಂಡು, ತುಂಬಿಕೊಂಡು ಬರುತ್ತಾಳೆ. ಆದರೆ ಬಂದು ಆ ಕುಟುಂಬದಲ್ಲಿ ಬಾಳ್ವೆ ನಡೆಸದ ಹೊರತು, ಅಲ್ಲಿನ ಪರಿಸರ, ಕುಟುಂಬ ಸದಸ್ಯರ ಗುಣ ಸ್ವಭಾವಗಳ, ನಿರೀಕ್ಷೆಗಳ ಪರಿಚಯ ಇರುವುದಿಲ್ಲ. ಗಂಡನೊಂದಿಗೆ ಹೀಗಿರಬೇಕು ಹಾಗಿರಬೇಕು ಎಂದೆಲ್ಲ ಊಹಿಸುವುದಲ್ಲದೆ ವಿದ್ಯಾವಂತ ಹೆಣ್ಣಾದಲ್ಲಿ ಸ್ವಲ್ಪ ಮಟ್ಟಿಗೆ ಸ್ವಾತಂತ್ರ್ಯ, ಸ್ವಾವಲಂಬನೆಗಳನ್ನು ಬಯಸುತ್ತಾಳೆ. ಈ ಕಾದಂಬರಿಯ ಕಥಾನಾಯಕಿ

ವಿದ್ಯಾವಂತೆ, ಚೆಲುವೆ ಯಾವ ಗಂಡಾದರೂ ಅಂತಹ ಆಕರ್ಷಕ ಹೆಣ್ಣನ್ನೊ ಬಯಸುವಂತೆ ಮೋಹಿನಿಯೂ ವಿವಾಹ ಪೂರ್ವದಲ್ಲಿ ತನ್ನನ್ನು ಪ್ರೀತಿಸಿದ ಒಬ್ಬರನ್ನು ಪ್ರೀತಿಸಿ ಒಂದು ಅನಾಹುತ ನಡೆದಿರುತ್ತದೆ. ಆದರೂ ಆನಂದ ಅದನ್ನು ಲೆಕ್ಕಿಸದೆ ವಿವಾಹವಾಗಿ ಅವಳನ್ನು ಅಕ್ಕನ ಮನೆಗೆ ಕರೆತರುತ್ತಾನೆ. ದಿಟ್ಟತನ ಆತ್ಮವಿಶ್ವಾಸ, ಬಂಡಾಯ ಮನೋಧರ್ಮ, ಇನ್ನಷ್ಟು ತಾನು ಕಲಿತು ಬೆಳೆಯಬೇಕೆಂಬ ಛಲ ಆಕೆಯದು. ಅದು ಕೈ ಹಿಡಿದ ಆನಂದನ ವ್ಯಕ್ತಿತ್ವ, ಸ್ವಭಾವಕ್ಕೆ ತೀರಾ ವಿರುದ್ಧವಾದುದು. ಅವನಿಗೆ ಹೆಂಡತಿಗಿಂತ ಅಕ್ಕಭಾವನೇ ಹೆಚ್ಚಾಗಿ, ಹೆಂಡತಿ ಮೋಹಿನಿಯ ನಿರೀಕ್ಷೆಗಳಿಗೆ ಯಾವುದೇ ರೀತಿಯ ಬೆಂಬಲ ಸಿಗುವುದಿಲ್ಲ. ಅಲ್ಲದೆ ಅತ್ತಿಗೆ ನಾದಿನಿಯರ ನಡುವೆ ಭಿನ್ನಾಭಿಪ್ರಾಯ – ತಿಕ್ಕಾಟಗಳು ಪ್ರಾರಂಭವಾಗುತ್ತದೆ. ಸಾಲದ್ದಕ್ಕೆ ಅಣ್ಣ ಭಾಸ್ಕರ ಮೋಹಿನಿಯಿಂದ ತನ್ನದಾಹ ತೀರಿಸಿಕೊಳ್ಳಲಾಗದ್ದಕ್ಕಾಗಿ, ಅವಕಾಶಕ್ಕಾಗಿ ಕಾಯುತ್ತಿರುತ್ತಾನೆ. ಆನಂದನ ಹಂಗಿನ ಬದುಕೇ ಅವನಿಗೆ ಪ್ರಿಯವಾಗುತ್ತದೆ. ಆರ್ಥಿಕವಾಗಿ ಸ್ವಲ್ಪ ಮಟ್ಟಿಗಾದರೂ ನೆರವಾಗುವುದೆಂಬ ಕಾರಣಕ್ಕೆ ಮೋಹಿನಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಸಾಹಸ ಮಾಡುತ್ತಾಳೆ. ರೂಢಿಗತ ಸಂಪ್ರದಾಯದಲ್ಲಿ ನಂಬಿಕೆ ಹೊರತಾಗಿ ಆನಂದನಿಗೆ ಆಧುನಿಕವಾದ ಸ್ತ್ರೀ ಸ್ವಾತಂತ್ರ್ಯ ಸ್ವಾವಲಂಬನೆ ಇತ್ಯಾದಿ ವಿಚಾರಗಳಲ್ಲಿ ನಂಬಿಕೆಯೂ ಇಲ್ಲ ಆಸಕ್ತಿಯೂ ಇಲ್ಲ. ಹೀಗಿರುವಾಗ ಮೋಹಿನಿಯ ಸ್ವತಂತ್ರ ನಿಲುವು, ಬಂಡಾಯ ಧೋರಣೆ ಹೆಂಡತಿ ಮತ್ತು ಅಕ್ಕನ ನಡುವಿನ ತಿಕ್ಕಾಟ, ಸಾಲದ್ದಕ್ಕೆ ಉರಿಯುವ ಬೆಂಕಿಗೆ ತುಪ್ಪ ಹಾಕಿದಂತೆ ಅಣ್ಣ ಭಾಸ್ಕರನಿಂದ ಮೋಹಿನಿಯ ಕುರಿತಾದ ಇಲ್ಲಿ ಸಲ್ಲದ ಆರೋಪಗಳು, ಚಾರಿತ್ರ್ಯ ವಧೆಯ ಪ್ರಯತ್ನಗಳು ಆನಂದದ ಮನಸ್ಸನ್ನು ಕೆಡಿಸುತ್ತವೆ. ಅವರ ಮಾತುಗಳು ಸತ್ಯವೆನಿಸಿ ಹೆಂಡತಿಯ ಮೇಲೆ ಅನುಮಾನ, ಶಂಕೆಗಳು, ಪೂರ್ತಿಯಾಗಿ ಅವರಿಬ್ಬರ ನಡುವಿನ ವೈವಾಹಿಕ ಸಂಬಂಧವನ್ನು ಮುರಿಯುವಷ್ಟರ ಮಟ್ಟಿಗೆ ಬೆಳೆಯುತ್ತದೆ.

ಏನೇನೋ ಕನಸುಗಳನ್ನು ಹೊತ್ತು ಬಂದ ಮೋಹಿನಿಗೆ ಗಂಡನ ಹೇಡಿತನ, ಅಕ್ಕ– ಅಣ್ಣರನ್ನು ಬಿಟ್ಟು ಬರಲಾಗದ ಅಸಹಾಯಕತೆಗಳನ್ನು ಕಂಡು ಹೇಸಿಗೆ ಎನಿಸುತ್ತದೆ. ಅವಳಿಗೆ ಬದುಕು ಅಸಹನೀಯವಾಗುತ್ತದೆ. ತನ್ನ ಸಂಸಾರದ ಸಮಸ್ಯೆಗಳನ್ನು ಆನಂದನ ಆಪ್ತ ಗೆಳೆಯ ವಸಂತನೊಂದಿಗೆ ಹಂಚಿಕೊಂಡು ಏನಾದರೂ ಪರಿಹಾರ ಕಾಣಬಹುದೆಂಬ ಆಸೆಯೊಂದಿಗೆ ಅವನನ್ನು ಪದೇ ಪದೇ ಕಾಣುತ್ತಾಳೆ. ಇಬ್ಬರೂ ಹೀಗೆ ಮೇಲಿಂದ ಮೇಲೆ ಸೇರುತ್ತಿರುವಾಗಲೇ ಅವರಿಗೆ ಅರಿವಿಲ್ಲದಂತೆ ಇಬ್ಬರೂ ಪರಸ್ಪರ ಆಕರ್ಷಿತರಾಗುತ್ತಾರೆ. ಇವರಿಬ್ಬರೂ ಹೀಗೆ ಪದೇ ಪದೇ ಸೇರುತ್ತಿರುವುದನ್ನು ಅಣ್ಣ ಭಾಸ್ಕರ ಪತ್ತೆ ಹಚ್ಚಿ ನಡೆದದ್ದಕ್ಕಿಂತ ಹೆಚ್ಚಾಗಿ ಬಣ್ಣಕಟ್ಟಿ ತಮ್ಮನಲ್ಲಿ ಹೇಳಿ ಅವನ ಮನಸ್ಸನ್ನು ಕೆಡಿಸುತ್ತಾನೆ. ವಾಸ್ತವದಲ್ಲಿ

ಮೋಹಿನಿ ಮತ್ತು ವಸಂತರ ನಡುವಿನ ಸೆಳೆತ ಅನಾಹುತಕ್ಕೆ ದಾರಿ ಮಾಡುವ ಸಾಧ್ಯತೆಯಿದ್ದರೂ ವಸಂತನ ವಿವೇಕ, ಸಂಯಮ ಸಮಯ ಪ್ರಜ್ಞೆಯಿಂದಾಗಿ ಅದು ತಪ್ಪುತ್ತದೆ. ಅವನು ಮೋಹಿನಿಗೆ ಬುದ್ಧಿವಾಧ ಹೇಳುತ್ತಾನೆ. ಅಲ್ಲದೆ ತಾನೇ ಆನಂದನೊಡನೆ ಮಾತಾಡಿ ಬೇರೆ ಮನೆ ಮಾಡುವಂತೆ ಹೇಳುತ್ತೇನೆಂದೂ ತಿಳಿಸುತ್ತಾನೆ. ಭಾಸ್ಕರ ಮೋಹಿನಿಯನ್ನು ಬೇರೊಬ್ಬ ಗಂಡಸಿನ ಸಹವಾಸದಲ್ಲಿ ನೋಡಿದ್ದೇನೆಂದು ಹೇಳಿದ್ದನೇ ಹೊರತು ಅಲ್ಲಿವರೆಗೆ ವಸಂತನ ಹೆಸರು ಸುಳಿದಾಡಿರುವುದಿಲ್ಲ. ಆನಂದ ಪರಪುರುಷನೊಡನೆ ಮೋಹಿನಿ ಇದ್ದುದನ್ನು ಕೇಳಿ ಕೆಂಡಾ ಮಂಡಲವಾಗಿ ಅವಳನ್ನು ಹೀನಾ ಮಾನವಾಗಿ ಬೈಯುತ್ತಾನಾದರೂ ಕಡೆಗೆ ವಸಂತನೇ ಆ ಪರಪುರುಷನೆಂದು ತಿಳಿದಾಗ ಸಮಾಧಾನ ಹೊಂದಿ ಮೋಹಿನಿಯನ್ನು ರಂಜಿಸಲು, ಮನ ಒಲಿಸಲು ಪ್ರಯತ್ನಿಸುತ್ತಾನೆ. ಸುಲಭವಾಗಿ ಒಲಿಯದ್ದಕ್ಕಾಗಿ ಅವಳನ್ನು ಬಲಾತ್ಕಾರದಿಂದ ಸೆಳೆದು ಕೊಂಡದ್ದು ಮೋಹಿನಿಯನ್ನು ಇನ್ನಷ್ಟು ಕ್ರುದ್ಧಳಾಗುವಂತೆ ಮಾಡುತ್ತದೆ. ಆನಂದನ ಮನಸ್ಸಿನಲ್ಲಿ ಇನ್ನೂ ಸಂಶಯದ ಹೊಗೆಯಾಡುತ್ತಿದ್ದುದರಿಂದ ಅವಳನ್ನು ಈ ಸಂಬಂಧದ ಬಗ್ಗೆ ಸತ್ಯವನ್ನು ತಿಳಿಸಬೇಕೆಂದು ಒತ್ತಾಯ ಮಾಡಿದಾಗ, ಅದಕ್ಕೆ ಉತ್ತರ ಹೇಳುವುದು ತನ್ನಂಥ ಸ್ವಾಭಿಮಾನಿಯಾದವಳಿಗೆ ಸಾಧ್ಯವಿಲ್ಲವೆಂದು ಯೋಚಿಸಿ, ಗಂಡ-ಹೆಂಡತಿ ಸಂಬಂಧಕ್ಕೆ ಸಂಕೇತಗಳಂತೆ ಇರುವ ಮಾಂಗಲ್ಯ- ಬಳೆಗಳನ್ನು ತೆಗೆದೆಸೆದು ಬಂಧ ಮುಕ್ತಳಾಗಿ ಹೊರಬರುತ್ತಾಳೆ. ಆದರೆ ಅವಳ ಮನದಾಳದಲ್ಲಿ ಬಂಧನವಿಲ್ಲದೆ ಬದುಕಿಲ್ಲ ಎಂಬ ವಾಸ್ತವ ಸತ್ಯವನ್ನು ಅರಿತಿದ್ದರೂ ಸದ್ಯದಲ್ಲಿ ಅವಳಿಗೆ ಅವಳ ಸ್ವಾಭಿಮಾನ ಸ್ವತಂತ್ರ ವ್ಯಕ್ತಿತ್ವವೇ ಮುಖ್ಯವಾಗಿ ಮನೆಯಿಂದ ಹೊರಗೆ ಬರುತ್ತಾಳೆ. ಆದರೆ ಅವಳಿಗೆ ತಾನು ಮಾಡಿದ್ದು ತಪ್ಪೋ ಸರಿಯೋ ಎಂಬ ಸಂದಿಗ್ಧ ಕಾಡುತ್ತದೆ. ಒಂದು ಕಾಲದಲ್ಲಿ ತಂದೆಯಿಲ್ಲದ ತಬ್ಬಲಿತನ ಕಾಡಿದರೆ, ಈಗ ಗಂಡನಿದ್ದೂ ವೈಧವ್ಯದಲ್ಲಿ, ತಾಯಿಯಿದ್ದೂ ಅನಾಥ ಸ್ಥಿತಿಯಲ್ಲಿ ಬದುಕಬೇಕಾದ ಪರಿಸ್ಥಿತಿಗೆ ಒಳಗಾಗಿರುವ ತನ್ನ ಮನಸ್ಸಿನ ಅಳವನ್ನು ತನಗಿರುವ ಏಕೈಕ ಶ್ರೇಯೋಭಿಲಾಷಿ ವಸಂತನಿಗೆ ಬರೆದ ಪತ್ರದಲ್ಲಿ ತೋಡಿಕೊಳ್ಳುತ್ತಾಳೆ. ಅಂತೂ ಅವಳು ಕಟ್ಟಿಕೊಂಡು ಬಂದ ಕನಸಿನ ಮನೆ ನುಚ್ಚುನೂರಾಗುತ್ತದೆ.

**ಕಟ್ಟಿದ ಮನೆ :** (೧೯೫೩) ಕನಸಿನಮನೆ ಪ್ರಕಟವಾದ ಆರುವರ್ಷಗಳ ನಂತರ ಈ ಕಾದಂಬರಿ ಪ್ರಕಟವಾಯಿತು. ಭಗ್ನಗೊಂಡ ಕನಸಿನ ಮನೆಯನ್ನು ಬಿಟ್ಟು ಹೊರಟ ಮೋಹಿನಿಗೆ ಅನೇಕ ಸವಾಲುಗಳು ಎದುರಾಗುತ್ತವೆ. ಮನೆ ಬಿಟ್ಟು ಬಂದಳಾದರೂ ಪ್ರಪಂಚದಲ್ಲಿ ತಬ್ಬಲಿಯಾಗಿ ವಿಧವೆಯಾಗಿ, ಅನಾಥವಾಗಿ ಒಂಟಿಯಾಗಿ ಬದುಕುವುದಾದರೂ ಹೇಗೆ? ಇಂಥ ಹತಾಶ, ಅಸಹಾಯಕ ಪರಿಸರದೊಳಗಿಂದಲೇ ತನ್ನ ಬದುಕಿನ ನೆಲೆ, ಬೆಲೆಗಳನ್ನು ಕಂಡುಕೊಂಡು

ಸ್ಥಾಪಿಸಿಕೊಳ್ಳಬೇಕಾಗುತ್ತದೆ. ಒಂದು ಕಡೆ ದಾಂಪತ್ಯ ಸುಖ, ಗಂಡನ ಸಹಕಾರಗಳಿಂದ ವಂಚಿತಳಾಗಿದ್ದಾಳೆ. ಬಂಧು ಮಿತ್ರರ ಸಹಾನುಭೂತಿಯಿಲ್ಲ. ಇವುಗಳಿಂದ ಮನಸ್ಸಿಗೆ ಅತೀವವಾದ ನೋವುಂಟಾದರೂ ಅವಳಲ್ಲಿನ ಆತ್ಮ ವಿಶ್ವಾಸ, ಏನಾದರಾಗಲಿ ತಾನು ತನ್ನ ಆಶೋತ್ತರಗಳನ್ನು ಪೂರೈಸಿಕೊಳ್ಳಲು ಸಾರ್ಥಕ ಬದುಕನ್ನು ರೂಪಿಸಿಕೊಳ್ಳಲು ಬದುಕಲೇ ಬೇಕೆಂಬ ಛಲ ಇವೇ ಒಂದು ರೀತಿಯಲ್ಲಿ ಅವಳಿಗೆ ಉತ್ತೇಜಕ ಶಕ್ತಿ (driving force) ಯಾಗುತ್ತವೆ. ತನಗೆ ತನ್ನ ಉದ್ಧಾರವನ್ನಷ್ಟೇ ಮಾಡಿಕೊಳ್ಳುವುದಲ್ಲದೆ ಸಮಾಜದ, ಜಗತ್ತಿನ ಉದ್ಧಾರ ಮಾಡಬೇಕೆಂಬ ಮಹತ್ವಾಕಾಂಕ್ಷೆಗಳೆಲ್ಲ 'ನನ್ನ ಆಸೆ ಆಕಾಂಕ್ಷೆಗಳಷ್ಟೇ ನನಗೆ ಮುಖ್ಯ. ಅದಕ್ಕಾಗಿ ನಿರಾಶೆಯನ್ನು ಬದಿಗಿಕ್ಕಿ ಶಕ್ತಿಮೀರಿ ಪ್ರಯತ್ನಿಸುತ್ತೇನೆ ಎಂದು ತನಗೆ ತಾನೇ ಭರವಸೆ ಕೊಟ್ಟು ಕೊಳ್ಳುತ್ತಾಳೆ. ಒಂದು ಕನಸಿನ ಮನೆ ಮುರಿದ ಬೆನ್ನಲ್ಲೇ ಮತ್ತೊಂದು ಮನೆ ಕಟ್ಟುವ ಕನಸಿಗೆ ಜಾರುತ್ತಾಳೆ. ಇದು ಕನಸಿನ ಮನೆಗಿಂತ ಸುಲಭ ಸಾಧ್ಯ. ಯಾಕೆಂದರೆ ಇಲ್ಲಿ ಯಾರ ಹಂಗಿಗೂ ಬೀಳದೆ ತನ್ನಲ್ಲಿನ ಶಕ್ತಿ, ಸಾಮರ್ಥ್ಯ ಸೌಂದರ್ಯಗಳನ್ನೇ ಬಂಡವಾಳವಾಗಿಸಿ ಕೊಳ್ಳಬಹುದಾದ ಮುಕ್ತ ಅವಕಾಶಗಳು, ಯತ್ನಿಸಿದಲ್ಲಿ ಸಿಗಬಹುದೆಂಬ ಬಲವಾದ ವಿಶ್ವಾಸದೊಂದಿಗೆ ಮುಂದೆ ಹೆಜ್ಜೆ ಇಡುತ್ತಾಳೆ. ಅರ್ಥಿಕ ಸ್ವಾತಂತ್ರ್ಯಕ್ಕಾಗಿ ಶಾಲೆಯೊಂದರಲ್ಲಿ ಕೆಲಸ ಮಾಡುತ್ತಾಳೆ. ತನ್ನೆಲ್ಲ ಸಮಸ್ಯೆಗಳ ಸಲಹೆಗಾರನಾಗಿ ಒದಗಿ ಬರುವ ವಸಂತ ಮತ್ತು ಮೋಹಿನಿಯರ ನಡುವಿನ ಸಳೆತ ಮತ್ತಷ್ಟು ಬಿಗಿಗೊಳ್ಳುತ್ತದೆ. ಮೋಹಿನಿಯ ಪ್ರೀತಿಯ ಚುಂಬಕದಿಂದ ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಾಗುವುದಿಲ್ಲ. ಒಂದು ವೇಳೆ ವಸಂತ ನಿಜವಾದ ಪ್ರೀತಿಯಿಂದಲೇ ಮೋಹಿನಿಯನ್ನು ಸ್ವೀಕರಿಸಿದರೆ, ಈಗಾಗಲೇ ಸುಳಿದಾಡುತ್ತಿರುವ ಅನುಮಾನಗಳಿಗೆ ಮತ್ತಷ್ಟು ಬಲ ಬಂದು ಆನಂದ ಮೋಹಿನಿಯರ ಸಂಬಂಧಗಳಲ್ಲಿ ಇನ್ನಷ್ಟು ಗೋಜಲುಗಳು ಸೃಷ್ಟಿಯಾಗಬಹುದೆಂದು ಭಾವಿಸಿ ವಸಂತ, ತಾನು ಒಂದು ಹುಡುಗಿಯನ್ನು ನೋಡಿ ಮದುವೆಯಾಗುವುದೇ ಅಲ್ಲದೆ, ಕಾನೂನುಬದ್ಧವಾಗಿ ವಿಚ್ಛೇದನವನ್ನು ಪಡೆದಿಲ್ಲದ ಕಾರಣ ಮತ್ತೊಮ್ಮೆ ಅವರಿಬ್ಬರ ನಡುವೆ ರಾಜಿ ಮಾಡಿಸುವ ಪ್ರಯತ್ನವನ್ನು ಮಾಡುತ್ತಾನೆ. ಮತ್ತೊಮ್ಮೆ ಮೋಹಿನಿಯ ಮತ್ತೊಂದು ಕನಸು ಒಡೆಯುತ್ತದೆ. ಅವಳ ವರ್ತಮಾನ ಭವಿಷ್ಯಗಳನ್ನು ರೂಪಿಸುವಲ್ಲಿ ಅವಳ ಆತ್ಮೀಯ ಗೆಳತಿ ಅನುರಾಧ ದಂಪತಿಗಳು ಮಹತ್ವದ ಪಾತ್ರ ವಹಿಸುತ್ತಾರೆ. ಫಿಲ್ಮ್ ಜಗತ್ತಿನೊಡನೆ ಗಾಢ ಸಂಬಂಧ ಹೊಂದಿದ್ದ ಅನುರಾಧಾಳ ಪತಿ ಮೋಹಿನಿಯನ್ನು ಫಿಲ್ಮ್ ನಿರ್ದೇಶಕ ರಂಗನಾಥನ್‌ಗೆ ಪರಿಚಯಿಸುತ್ತಾನೆ. ಮೋಹಿನಿಯ ಸೌಂದರ್ಯ ಅಭಿನಯ ಸಾಮರ್ಥ್ಯಗಳನ್ನು ಕೂಡಲೇ ಗ್ರಹಿಸಿದ ರಂಗನಾಥನ್, ತನ್ನ ನಿರ್ದೇಶನದ ಚಿತ್ರಗಳಲ್ಲಿ ನಟಿಸಲು ಅವಕಾಶ ಕಲ್ಪಿಸುತ್ತಾನೆ.

ಅತ್ಯಲ್ಪ ಕಾಲದಲ್ಲಿಯೇ ಮೋಹಿನಿ ತನ್ನ ನಿರೀಕ್ಷೆಗಿಂತ ಹೆಚ್ಚಿನ ಕೀರ್ತಿ, ಹಣವನ್ನು ಗಳಿಸುವುದರ ಜೊತೆಗೆ ರಂಗನಾಥನ್ ಒಡ್ಡುವ ಆಮಿಷಗಳಿಗೆ ಸುಲಭವಾಗಿ ಬಲಿಯಾಗುತ್ತಾಳೆ: ರಂಗನಾಥನ್ ಕೂಡಾ ಸಾಮಾನ್ಯನಲ್ಲ. ವ್ಯವಹಾರ ಚತುರ ರಸಿಕ, ಮೋಹಿನಿಯಲ್ಲಿನ ಸುಪ್ತ ಸಾಮರ್ಥ್ಯಗಳನ್ನು ಚಾಣಾಕ್ಷತನದಿಂದ ಬಂಡವಾಳವನ್ನಾಗಿ ಮಾಡಿಕೊಳ್ಳುತ್ತಾನೆ. ಮೋಹಿನಿ ತನಗೆ ಹರಿದು ಬರುತ್ತಿರುವ ಸಂಪತ್ತು ಯಶಸ್ಸು, ಸುಖ ಭೋಗಗಳಿಂದ ತನ್ನ ಧೋರಣೆಗಳನ್ನು ಬದಲಾಯಿಸಿಕೊಳ್ಳುತ್ತಾಳೆ. ಸ್ವಾಭಿಮಾನದ ಎಡೆಯಲ್ಲಿ ಅಹಂಕಾರ, ದರ್ಪ, ಆತ್ಮರತಿಗಳಿಂದ ಉದ್ಧಟಳಾಗಿ ಪರಿವರ್ತಿತಳಾಗುತ್ತಾಳೆ. ಸ್ವಾತಂತ್ರ್ಯ ಸ್ವೇಚ್ಛೆ, ಸ್ವಚ್ಛಂದಗಳಾಗುತ್ತವೆ. ಯಾರ ಅಂಕೆ, ಅಂಕುಶಗಳಿಲ್ಲದೆ ಕೀರ್ತಿ, ಸಂಪತ್ತಿನ ಅಮಲಿನಲ್ಲಿ ಮೈಮರೆಯುತ್ತಾಳೆ. ಯಾರನ್ನೂ ಲೆಕ್ಕಿಸದೆ ಹೋಗುತ್ತಾಳೆ. ತನ್ನ ಈ ನಡವಳಿಕೆಯನ್ನು "ನನಗೆ ನಾನೇ ನಾನಾಗಿ ಯಾರ ಹಂಗೂ ಇಲ್ಲದೆ, ಹೆದರಿಕೆ ಇಲ್ಲದೆ ಇರಬೇಕಾಗಿದೆ. ನನ್ನ ಬದುಕು ಬೇಕು. ಅದಿಲ್ಲದ ಸ್ವಾತಂತ್ರ್ಯಕ್ಕೆ ಬೆಲೆಯೇ ಇಲ್ಲ"... ಎಂದು ಯೋಚಿಸುತ್ತಲೇ" ನನಗೆ ಸಾಧಿಸಬೇಕಾದದ್ದು ಏನು? ನನ್ನ ಆತ್ಮವಿಕಾಸ – ಸ್ವಭಾವ ಸಿದ್ಧವಾದ ಪ್ರತಿಯೊಂದು ಸಾಮರ್ಥ್ಯದ ಪರಿಪೂರ್ಣವಾದ ಬೆಳವಣಿಗೆ– ನನಗೆ ರಕ್ತಗತವಾದ, ಮಾನವ ಸಹಜವಾದ ದೇಹ ಮನಸ್ಸುಗಳೆರಡೂ ಬೇಡಬಹುದಾದ ಸುಖ–ಸಾಧ್ಯವಾದರೆ ಈ ಎಲ್ಲವುಗಳ ಪರಿಮಾವಧಿ, ಯಾವುದೋ ಒಂದು ಬಗೆಯ ಕಟ್ಟುಗಳಿಗೆ ನೇತುಬಿದ್ದು ಸಾಧ್ಯವಿಲ್ಲ ಎಂದು ಕೈ ಚೆಲ್ಲಿದರೆ ಏನಾಗಬೇಕು? ನನಗೆ ಸಿದ್ಧಿ ಮುಖ್ಯ. ಸಾಧನ ಯಾವುದಾದರೂ ಸರಿ. ಪರಿಶುದ್ಧ ಸಾಧನಗಳನ್ನು ಬಳಸದೆ ಸಾಧಿಸಿದ ಸಿದ್ಧಿ, ಸಿದ್ಧಿಯಲ್ಲ ಎಂದು ಹೇಳುವುದು ಶುದ್ಧ ತಪ್ಪು! ಈ ಪರಿಶುದ್ಧಿಗೆ ಅಳತೆಗೋಲು ಯಾವುದು? ಮತ್ತೆ ಸಮಾಜ ಹೇಳಿದ ನಿಯಮ. ನಿಸರ್ಗವಿರುದ್ಧವಲ್ಲದ್ದು. ಶುದ್ಧ– ನಿಸ್ಸಂದೇಹವಾಗಿ. ನಾನಿಂದು ಬಯಸುತ್ತಿರುವುದು ನಿಸರ್ಗವಿರುದ್ಧವಲ್ಲದ್ದು. ಯೌವ್ವನದ ಕುಲುಮೆ ಹೊತ್ತಿ ಹೃದಯದಲ್ಲಿ ಬೇಗೆಯಾಗಿ ಉರಿಯುತ್ತಿರುವಾಗ ಅದನ್ನು ನೀತಿ ಎಂಬ ತಣ್ಣೀರಿನಿಂದ ಆರಿಸಲೇ? ಅದರಿಂದ ಬಂದುದೇನು? ಅದು ಆರಿಹೋದರೆ ಅಲ್ಲಿ ಉಳಿಯುವುದು ಬರೀ ಬೂದಿ! ಅಲ್ಲದೆ ಇಂಥ ನೀರಿನ ಚಿರಂತನ ಪ್ರವಾಹವನ್ನು ಹರಿಯಿಸಿದರೂ ನಂದಲಾರದ ಬೇಗೆ ಅದು. ಮಾನವನ ನಾಡಿಗಳಲ್ಲಿ ರಕ್ತ ಹರಿಯುವವರೆಗೂ ಆ ರಕ್ತದ ಅಂಶವಾಗಿ ಕುದಿಯುವ, ಕಂಗೆಡಿಸುವ ಬಿಸಿ ಅದು. ಇಂದು ಸುಖ ನನ್ನ ಅಂಗೈಯಲ್ಲಿದೆ, ಅದನ್ನು ಎಸೆದು ಇಲ್ಲ ಎಂದು ಗೋಳಾಡಿದರೆ ಅದಕ್ಕೆ ಯಾರು ಹೊಣೆ?" ಎಂಬ ಸುದೀರ್ಘವಾದ ಸ್ವಗತ ಅವಳ ಬದಲಾದ ಮಾನಸಿಕ ಸ್ಥಿತಿ, ಮನೋಧರ್ಮ, ನಿಲುವುಗಳನ್ನು ತರ್ಕಬದ್ಧವಾಗಿ ಸಮರ್ಥಿಸುತ್ತವೆ. ತನ್ನದಾದ ಹೊಸ ಭವಿಷ್ಯದ

ಮನೆಯನ್ನು ಕಟ್ಟಿಕೊಳ್ಳುವಲ್ಲಿ ಸಾಮಾಜಿಕ ನೈತಿಕ ಮೌಲ್ಯಗಳು. ಸಂಬಂಧಗಳು ಕ್ಷುಲ್ಲಕವೆನಿಸುತ್ತವೆ. ನೀತಿ ನಿಯಮಗಳು ಒಂದು ಹಂತದಲ್ಲಿ ಮನುಷ್ಯನ ಪ್ರಗತಿ, ವಿಕಾಸವನ್ನು ತಡೆಗಟ್ಟುತ್ತವೆ. ಆದ್ದರಿಂದ ತನ್ನ ಸುಖ, ಸಂತೋಷಗಳ ಗುರಿಯೇ ಮುಖ್ಯವಾದಲ್ಲಿ ಕಳೆದುಕೊಳ್ಳುವುದೇನೂ ಇಲ್ಲ. ತಾನು ತನ್ನ ಬದುಕನ್ನಷ್ಟೇ ಗುರಿಯಾಗಿಸಿಕೊಂಡು ಎತ್ತರೆತ್ತರಕ್ಕೆ ಬೆಳೆಯುತ್ತಾ ಹೋಗುತ್ತಾಳೆ. ಮುಂದೆಯೂ ತನ್ನ ಭವಿಷ್ಯ ಹೀಗೇ ಇರುತ್ತದೆ; ಇರಬಲ್ಲವು ಎಂಬ ಹುಂಬ ನಂಬಿಕೆಯಲ್ಲಿ ಮುಂದುವರೆದರೂ ಸ್ವಚ್ಛಂದವೆನಿಸಬಹುದಾದ ಈ ಸ್ವಾತಂತ್ರ್ಯವೂ ಅವಳಿಗೆ ಪೂರ್ತಿಯಾಗಿ ನೆಮ್ಮದಿ ಕೊಡುವುದಿಲ್ಲ. ಏನೋ ಕೊರತೆ ಕಾಡುತ್ತದೆ.

ಅವಳ ಸುಖ, ಶ್ರೇಯಸ್ಸನ್ನು ಬಯಸುವ ವಸಂತನಿಂದ, ಮೋಹಿನಿ-ಆನಂದರನ್ನು ಮತ್ತೆ ಒಗ್ಗೂಡಿಸುವ ಪ್ರಯತ್ನ ನಡೆಯುತ್ತದೆ. ಆನಂದ ಮೋಹಿನಿಯ ವರ್ತನೆಯಿಂದ ಅಸಮಾಧಾನಗೊಂಡಿದ್ದರೂ ಪೂರ್ತಿಯಾಗಿ ಅವನು ಮೋಹಿನಿಯನ್ನು ಹೃದಯದಾಚೆ ಎಸೆದಿರಲಿಲ್ಲ. ಅವಳ ರೂಪ, ಲಾವಣ್ಯಗಳ ಬಗ್ಗೆ ಮುಗ್ಧನಾಗಿದ್ದ. ಅವನೂ ಮತ್ತೆ ಅವಳನ್ನು ಹೆಂಡತಿಯಾಗಿ ಒಪ್ಪಿಕೊಂಡು ಒಡಬಾಳಲು ಮುಂದಾದ. ಆದರೆ ಮೋಹಿನಿ ರಂಗನಾಥನ್‌ರ ಸಂಬಂಧ ಮರ್ಯಾದೆಯ ಎಲ್ಲೆಗಳನ್ನು ಮೀರಿ ತೀರಾ ಖಾಸಗಿತನದ ವರೆಗೆ ವಿಸ್ತರಿಸಿದ್ದನ್ನು ಗಮನಿಸಿದ ಆನಂದ ಕಾನೂನುಬದ್ಧ ವಿಚ್ಛೇದನಕ್ಕೆ ಮುಂದಾಗುತ್ತಾನೆ. ಅವಳ ಮೇಲೆ ಹೊರಸಿದ ಆರೋಪಗಳನ್ನು ಪ್ರಮಾಣಿಕರಿಸಲು ಸಾಕ್ಷ್ಯ ಸಾಲದೆ ಕೇಸು ಸೋಲುತ್ತದೆ; ಆದರೆ ಕಟ್ಟಿದಮನೆ ಕಾದಂಬರಿ, ತೀರ್ಪಿನ ಘೋಷಣೆಯಾಗದೆ, ತೀರ್ಪಿನ ದಿನಕ್ಕಾಗಿ ಕುತೂಹಲದಿಂದ ಕಾಯಬೇಕಾಗುವ ಪರಿಸ್ಥಿತಿಯೊಂದಿಗೆ ಮುಗಿಯುತ್ತದೆ. ಕಟ್ಟಿದ ಮನೆಯೂ ಅವಳ ಬದುಕನ್ನು ಸುಗಮವಾಗಿಸದೆ, ಅನೇಕ ಸಮಸ್ಯೆಗಳನ್ನು, ತಿರುವುಗಳನ್ನು ಸೃಷ್ಟಿಸುತ್ತದೆ.

**ಬಾಡಿದ ಹೂವು :** (೧೯೭೨) 'ಕಟ್ಟಿದ ಮನೆ' ಕಾದಂಬರಿಗೂ ಇದಕ್ಕೂ ೧೯ ವರ್ಷಗಳ ಸುದೀರ್ಘ ಅಂತರವಿದೆ. ಇದರ ಮಧ್ಯೆ ಸುಮಾರು ಒಂಬತ್ತು-ಹತ್ತು ಕಾದಂಬರಿಗಳ ರಚನೆಯಾಗಿದೆ. ೧೯೭೨ ರಲ್ಲಿ ಬಂದ ಈ ಕಾದಂಬರಿ ಮತ್ತೆ ಮೊದಲಿನ ಹಾಗೆ ಮೋಹಿನಿಯ ಮುಂದಿನ ಬದುಕನ್ನು ಕಟ್ಟಿಕೊಡುತ್ತದೆ. ವಿಚ್ಛೇದನದ 'ತೀರ್ಪು' ಘೋಷಿತವಾಗುವುದಕ್ಕೆ ಮೊದಲೇ 'ಕಟ್ಟಿದ ಮನೆ' ಕಾದಂಬರಿಯ ಕಥೆನಿಂತರೆ 'ಬಾಡಿದ ಹೂವು' ಅದರಲ್ಲಿನ ಕಥೆಯನ್ನು ಮುಂದುವರೆಸುತ್ತದೆ. ಮೋಹಿನಿಯ ಬದುಕಿನಲ್ಲಿ ಮುಂದೆ ಉಂಟಾಗುವ ತಿರುವುಗಳು ಅವಳಲ್ಲಾಗುವ ಮಾನಸಿಕ ಬದಲಾವಣೆಗಳು ಗಂಡು- ಹೆಣ್ಣು ಸಂಬಂಧಗಳ ಬಗೆಗಿನ ಆಲೋಚನೆಗಳು ತನ್ನ ಆತ್ಮ ವಿಶ್ಲೇಷಣೆ ಮುಂತಾದವುಗಳನ್ನು

ಈ ಕಾದಂಬರಿ ಬಿಂಬಿಸುತ್ತದೆ. ಹಾಗೆಯೇ ಲೇಖಕರ ತಾತ್ವಿಕ ಚಿಂತನೆಗಳನ್ನು ಸೂಕ್ಷ್ಮವಾಗಿ ಬಿಂಬಿಸುತ್ತದೆ. ವಿಚ್ಛೇದ ಪ್ರಕರಣ ಇತ್ಯರ್ಥವಾದ ಮೇಲೆ ಒಂದೆರಡು ವರ್ಷಗಳ ಕಥೆಯನ್ನು ಈ ಕಾದಂಬರಿ ಒಳಗೊಳ್ಳುತ್ತದೆ ಮೋಹಿನಿಯ ಬದುಕಿನ ಮತ್ತೊಂದು ಘಟ್ಟ ಅನಾವರಣಗೊಳ್ಳುತ್ತದೆ. ಹಿಂದಿನ ಎರಡು ಭಾಗಗಳಲ್ಲಿನ ಬಿರುಸು ಮೋಹಿನಿಯಲ್ಲಿ ಕಾಣುವುದಿಲ್ಲ. ರಂಗನಾಥನ್ ತಾನು ಕಟ್ಟಿಕೊಳ್ಳಬೇಕೆಂದು ಬಯಸಿದ ಮನೆಯನ್ನು ಕಟ್ಟಿಕೊಳ್ಳಲು ಆರ್ಥಿಕ ಶ್ರೀಮಂತಿಕೆಗೆ ದಾರಿ ಮಾಡಿಕೊಡುವುದೇ ಅಲ್ಲದೆ ಕೀರ್ತಿಯ ಉತ್ತುಂಗವನ್ನು ತಲುಪಲೂ ಕಾರಣನಾಗುತ್ತಾನೆ. ಆದರೆ ಮೋಹಿನಿಗೆ ತಾನು ಆ ಸ್ಥಿತಿಗೇರಲು ರಂಗನಾಥನ್ ಕಾರಣವೆಂಬುದನ್ನು ಒಪ್ಪಿಕೊಳ್ಳಲು ಅವಳ ಅಹಂಕಾರ ನಿರಾಕರಿಸುತ್ತದೆ. ತನ್ನ ಈ ವೈಭವದ ಸಿರಿವಂತಿಕೆಗೆ ತನ್ನ ಪ್ರತಿಭೆ, ಸಾಮರ್ಥ್ಯ ಸೌಂದರ್ಯಗಳೇ ಕಾರಣವೆಂದು ಬಲವಾಗಿ ನಂಬಿದ್ದೆ ಅಲ್ಲದೆ ವಿಚ್ಛೇದನ ಪ್ರಕರಣದಲ್ಲಿನ ಅವನ ನಡವಳಿಕೆ ಅಥವಾ ವರ್ತನೆಯಿಂದ ಅವನ ಸ್ವಾರ್ಥ ಬಯಲಾಗಿ ಅವನನ್ನೂ ನಿರ್ಲಕ್ಷಿಸುತ್ತಾಳೆ. ಆದರೆ ಅವಳ ಬದುಕಿನಲ್ಲಿನ ಅನೇಕ ಸನ್ನಿವೇಶ ಸಂದರ್ಭಗಳು, ಹೊರಗೆ ತಾನು ಸಾಧಿಸಿದ್ದೇನನ್ನು ಎಂದು ಆಲೋಚಿಸುವಂತೆ ಮಾಡುತ್ತದೆ, ಸುಪ್ತವಾಗಿದ್ದ ಭಾವಲೋಕವೊಂದು ತೆರೆದುಕೊಳ್ಳುತ್ತಾ ಹಿಂದಿನ ತನ್ನ ನಡೆಯನ್ನು ಕುರಿತು ಆಲೋಚಿಸುವಂತೆ ಮಾಡುತ್ತದೆ. ರಂಗನಾಥನ್‌ನೊಂದಿಗಿನ ಸಹವಾಸ, ದೇಹ ಸಂಪರ್ಕಗಳೂ ಕೂಡಾ ವಸಂತನನ್ನು ಮರೆಸಲು ಸಾಧ್ಯವಾಗದೆ ಹೋಗುತ್ತದೆ. ವಸಂತ ಆತ್ಮ ಸಂಯಮಕ್ಕಾಗಿ ಮದುವೆಯಾದರೂ ಕೈಹಿಡಿದ ಹೆಂಡತಿಗೆ ಅನ್ಯಾಯವಾಗದಂತೆ ಅನ್ಯೋನ್ಯ ದಾಂಪತ್ಯ ನಡೆಸುತ್ತಾನೆ. ಇವರಿಬ್ಬರ ನಡುವಿನ ಸರಸ ದಾಂಪತ್ಯದ ಬದುಕು ಮೋಹಿನಿಗೆ ತನ್ನ ಮತ್ತು ಆನಂದನ ದಾಂಪತ್ಯ ಕುರಿತು ಆಲೋಚಿಸುವಂತೆ, ಮದುವೆಯಾಗಿ ಬಂದಾಗಿನ ತನ್ನ ಕನಸುಗಳನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತದೆ. "ಮಾನವ ಪ್ರಾಣಿಯೆಂದು ಸ್ವತಂತ್ರಳಾಗಿ, ಹೆಂಡತಿಯೆಂದು ಬಂಧಿತಳಾಗಿ ನನಗೆ ಬದುಕನ್ನು ನಡೆಸಬೇಕಾಗಿತ್ತು. ಈ ಬಂಧನದಲ್ಲಿಯ ಬಿಡುಗಡೆಯ ತಳಪಾಯದ ಮೇಲೆ ನಾನು ನನ್ನ ಕನಸಿನ ಮನೆಯನ್ನು ಕಟ್ಟಿದೆ. ಅದಕ್ಕೆ ಸುಖದ ತೋರಣ ಕಟ್ಟಿದೆ; ಆಸೆಗಳ ಆವಾರ ಹಾಕಿದೆ. ಆ ಮನೆಯಲ್ಲಿ ಆನಂದ ಅರಸ, ನಾನು ಅರಸಿ. ಅರಸನ ಅರಸಿಯಾಗಿ ಆತನ ಪಾದ ಸೇವೆಯನ್ನು ಮಾಡುತ್ತಿದ್ದೆ. ಆದರೆ ಆ ಮನೆಯಲ್ಲಿ ಆನಂದ ಅರಸನಾಗಿ ನಾನು ದಾಸಿಯಾಗಬೇಕಾಗಿ ಬಂದಿತು. ಅರಸು-ಅರಸಿಯರ ಸಂಬಂಧ ತಪ್ಪಿ ಯಜಮಾನ-ದಾಸಿಯರ ಸಂಬಂಧ ಬಂದಿತು" – ಈ ಮಾತುಗಳು ಅವಳ ಕನಸು ನಿರೀಕ್ಷೆಗಳು ಸುಳ್ಳಾದ ಕಾರಣಕ್ಕೆ ಉಂಟಾದ ನಿರಾಶೆಯ ತೀವ್ರತೆಯನ್ನು ಹೇಳುವುದರ ಜೊತೆಗೆ, ಎಲ್ಲವೂ ಸರಿಯಿದ್ದ ಪಕ್ಷದಲ್ಲಿ ಸಾಂಪ್ರದಾಯಿಕ

ಚೌಕಟ್ಟಿನಲ್ಲಿನ ಆದರ್ಶ ದಾಂಪತ್ಯಕ್ಕೇ ಒಗ್ಗಿಕೊಳ್ಳುತ್ತಿದ್ದಳೆನಿಸುತ್ತದೆ. ಆನಂದನ ನಿರ್ಲಕ್ಷ್ಯ, ಹೆಂಡತಿಯ ಬಗೆಗೆ ಇಲ್ಲದಿದ್ದ ಕಾಳಜಿ, ಹೆಂಡತಿಗಿಂತಲೂ ಅಣ್ಣ-ಅಕ್ಕರ ಕೈಗೊಂಬೆಯಾಗಿದ್ದದ್ದು ತಾನು ಬಯಸಿದ ಸ್ವಲ್ಪ ಮಟ್ಟಿಗಿನ ಸ್ವಾತಂತ್ರ್ಯವನ್ನು ದೊಡ್ಡ ಹಗರಣವಾಗಿಸಿ, ಹೆಂಡತಿಯ ಮೇಲೇ ಕೈ ಮಾಡುವ ಹಂತಕ್ಕೆ ಆನಂದ ತಲುಪಿದ್ದು- ಎಲ್ಲವೂ ಅವಳಲ್ಲಿ ಒಂದು ರೀತಿಯ ಕಿಚ್ಚು, ಸೇಡಿನ ಮನೋಭಾವವನ್ನು ಹುಟ್ಟು ಹಾಕಿ, ತಾನೂ ಕೂಡಾ ಈ ವಿಶಾಲ ಪ್ರಪಂಚದಲ್ಲಿ ತನ್ನ ಶಕ್ತಿ ಸಾಮರ್ಥ್ಯಗಳ ಮೂಲಕ ಬದುಕಬಲ್ಲೆನೆಂದು ತೋರಿಸುವ ಛಲಕ್ಕೆ ಹೊರಟು ಯಶಸ್ಸನ್ನು ಸಾಧಿಸುತ್ತಾಳೆ. ಯಶಸ್ಸಿನ ಓಘ ಹೆಚ್ಚಿದಂತೆ ಅವಳ ಅಂತರಾಳದ ಕೊರಗು ಪ್ರಜ್ಞಾ ಸ್ಥಳವನ್ನು ತಲುಪುತ್ತಿದ್ದಂತೆ ನೋವು, ಯಾತನೆಗಳು, ಅರಳಿನಿಂತ ಅವಳ ಬದುಕಿನ ಹೂವನ್ನು ಬಾಡಿಸಲು ತೊಡಗುತ್ತವೆ.

ಈಗ ಅವಳಿಗೆ ಅರಮನೆಯಂತೆ ಕಟ್ಟಿಕೊಂಡ ಮನೆಯಾಗಲೀ, ಸಿರಿ ಸಂಪತ್ತು, ಕೀರ್ತಿಗಳಾಗಲೀ ಭೋಗಲಾಲಸೆಯಾಗಲೀ- ನೆಮ್ಮದಿ, ಶಾಂತಿಯನ್ನು ನೀಡುವಲ್ಲಿ ವಿಫಲವಾಗುತ್ತದೆ. ವೈಭವದಿಂದ ಬಾಳಬೇಕೆಂದು ಕಟ್ಟಿಕೊಂಡ ಮನೆಯನ್ನು ವಸಂತನಿಗೆ ಹಸ್ತಾಂತರಿಸುತ್ತಾಳೆ ಇಲ್ಲಿಯವರಗೂ ಬೇಡದಿದ್ದ ತಾಯಿ. ತಾತನ ನೆನಪಾಗುತ್ತದೆ. ಒಮ್ಮೆ ತಾಯಿ "ಇಂದು ನಿನ್ನನ್ನು ಅಟ್ಟಕ್ಕೇರಿಸಿದವರೇ ಮುಂದೆ ನಿನ್ನ ಕಡೆಗೆ ತಿರುಗಿ ನೋಡುವುದಿಲ್ಲ. ಅರಳಿದ ಹೂವಿನ ಚಂದ ಎಷ್ಟು ದಿನದ್ದು"? ಎಂದು ಹೇಳಿದಾಗ "ಹಾಗೆಂದು ಇಂದೇ ಮುರುಟಿಕೊಂಡು ಇರಬೇಕೇ?" ಎಂದು ಉದ್ಧಟವಾಗಿ ಉತ್ತರಿಸುತ್ತಾಳೆ. ಈಗ ಆ ಮಾತುಗಳೆಲ್ಲ ನೆನಪಾಗುವುದಲ್ಲದೆ, ಸತ್ಯವಾಗುತ್ತಿವೆ ಯೇನೊ ಎನಿಸುತ್ತದೆ.

ಇದೇ ರೀತಿಯಲ್ಲಿ ಒಂದು ಕಾಲಕ್ಕೆ ಸಿನಿಮಾ ನಟಿಯಾಗಿದ್ದ ನಂದಿನಿಯ ಅನುಭವದ ಮಾತುಗಳೂ ಮೋಹಿನಿಯನ್ನು ಆಲೋಚಿಸುವಂತೆ ಮಾಡುತ್ತವೆ. ಹೆಸರು, ಹಣ ಗಳಿಸಿ ಕೊಂಡಿದ್ದ ಅವಳು ಕಡೆಗೆ ಗೃಹಿಣಿ ಬದುಕಿನಲ್ಲಿ ನೆಮ್ಮದಿ ಕಂಡುಕೊಂಡಿದ್ದಳು. ಆದ್ದರಿಂದಲೇ ಅವಳು "ಸಿನೆಮಾ ಪ್ರಪಂಚ ಮೈ ಮರೆಸುತ್ತದೆ. ಕೊನೆಯವರೆವಿಗೂ ಮೈ ಮರೆತೇ ಇರಬಹುದಾದರೆ ತೊಂದರೆ ಇರಲಾರದು...... ಯಶಸ್ಸು ಮೈ ಮರೆಸುತ್ತದೆ, ಯಶಸ್ಸಿನ ದುರಂತ ಕಣ್ಣಿನಿಂದ ಮರೆಯಾಗುತ್ತದೆ"..... "ಚಿತ್ರಲೋಕದ ಕಲ್ಪನಾ ಸೃಷ್ಟಿಯನ್ನು ಕಟ್ಟಿಕೊಳ್ಳುವುದಕ್ಕಿಂತ ತನ್ನ ಮಟ್ಟಿಗೆ ಒಂದು ಮನೆಯನ್ನು ಕಟ್ಟಿಕೊಂಡಿರುವುದು ದೊಡ್ಡದು" ಎನ್ನುವ ಅವಳ ದೀರ್ಘ ಅನುಭವಜನ್ಯ ಮಾತುಗಳು ಆ ಕ್ಷಣಕ್ಕೆ ಅವಳ ಮನಸ್ಸಿನ ಮೇಲೆ ಏನು ಪರಿಣಾಮವನ್ನು ಬೀರಿತೋ ಎನ್ನುವುದು ಹೊಳೆಯದಿದ್ದರೂ, ಆತ್ಮ ಮಂಥನಕ್ಕಂತೂ ಗುರಿಯಾಗುತ್ತಾಳೆ. ಹೆಣ್ಣಿಗೆ ಸ್ವಾತಂತ್ರ್ಯ ಬೇಕೆನ್ನುವುದಾದರೂ ಯಾವ ಕಾರಣಕ್ಕಾಗಿ,

ಯಾವ ಪ್ರಯೋಜನಕ್ಕಾಗಿ, ಯಾರ ಉದ್ಧಾರಕ್ಕಾಗಿ? ನಿಜವಾಗಿಯೂ ಸ್ವಾತಂತ್ರ್ಯದ ಬಯಕೆ ಅಭಿಮಾನಕ್ಕಾಗಿಯೇ ಅಥವಾ ಸೇಡು ತೀರಿಸಿಕೊಳ್ಳಬೇಕೆಂಬ ರೊಚ್ಚಿಗಾಗಿಯೋ? ಯೋಚಿಸಿದಷ್ಟೂ ಮೋಹಿನಿ ಯಾವ ತೀರ್ಮಾನದ ನೆಲೆಯನ್ನೂ ತಲುಪದ ಸಂದಿಗ್ಧ ಸ್ಥಿತಿಗೆ ಒಳಗಾಗುತ್ತಾಳೆ. ಹಣವಿದ್ದರೆ ಎಲ್ಲವೂ ತನ್ನದಾಗುತ್ತದೆ, ಎಲ್ಲರೂ ತನ್ನ ಅಧೀನಕ್ಕೆ ಒಳಗಾಗುತ್ತಾರೆ ಎಂಬ ನಂಬಿಕೆಯೂ ಕುಸಿಯುತ್ತದೆ. ಅವಳಂತಲ್ಲದೆ ಹಣವಿಲ್ಲದೆಯೂ ಬದುಕ ಬಹುದೆಂಬುದನ್ನು ತಾಯಿ ತೋರಿಸಿಕೊಟ್ಟಿದ್ದಳು. ಅವಳು ಕೊಡಹೋದ ಹಣವನ್ನೂ ನಿರಾಕರಿಸಿದ್ದಳು.

ಈಗ ಪರಿಸ್ಥಿತಿಯೇ ತಾರುಮಾರಾದಂತಿದೆ. ರಂಗನಾಥನ್ ಆರ್ಮುಗಂರನ್ನು ತನ್ನ ಕೈ ಗೊಂಬೆಗಳಾಗಿಸಿಕೊಂಡು ಕುಣಿಸುತ್ತಾಳೆ; ಕುಡಿತದ ಚಟಕ್ಕೆ ಹಾದರಕ್ಕೆ ಎಲ್ಲಕ್ಕೂ ಎಗ್ಗಿಲ್ಲದೆ ಮುನ್ನುಗ್ಗುತ್ತಾಳೆ. ಆದರೆ ಇಷ್ಟೆಲ್ಲ ಇದ್ದರೂ ಮಾನಸಿಕ ನೆಮ್ಮದಿ ಕಳೆದುಕೊಳ್ಳುತ್ತಾಳೆ. ಒಂಟಿತನದ ಭಯಾನಕತೆ, ಬದುಕಿನಲ್ಲಿನ ಶೂನ್ಯತೆಗಳು ಅವಳನ್ನು ಕಾಡಿದಾಗ, ತಾಯಿಯ ಸಾಂಗತ್ಯಕ್ಕೆ ಬಯಸಿ, ಮದ್ರಾಸಿಗೆ ತನ್ನೊಡನಿರಲು ಕರೆಸಿಕೊಳ್ಳಲು ಪ್ರಯತ್ನಿಸಿದಾಗ ತಾಯಿ ನಿರ್ದಾಕ್ಷಣ್ಯವಾಗಿ ನಿರಾಕರಿಸುತ್ತಾಳೆ. ಮೋಹಿನಿಯ ತಾತ ತೀರಿಕೊಂಡು ತಾಯಿ ಒಂಟಿಯಾಗಿ ಇರಬೇಕಾಗಿ ಬಂದರೂ ಆ ನೆಲದ ನಂಟಿನ ಪ್ರೀತಿಗೆ ಒಗ್ಗಿದ ಅವಳು ಮಗಳೊಡನೆ ಬದಲಾದ ಜೀವನ ಶೈಲಿ, ಹೊಸ ಪರಿಸರಗಳ ನಡುವೆ ಅನಾಥ ಮನಃಸ್ಥಿತಿಗೆ ತಲುಪುವ ಕಲ್ಪನೆಯಿಂದ, ಮದ್ರಾಸಿಗೆ ಹೋಗಲು ನಿರಾಕರಿಸುತ್ತಾಳೆ. ಎಲ್ಲ ಸಂಗತಿಗಳೂ ಮೋಹಿನಿಯ ಕಣ್ಣು ತೆರೆಸುವತ್ತ ಕೆಲಸ ಮಾಡುತ್ತವೆ ಅಲ್ಲಿಯವರೆಗಿನ ತನ್ನ ನಿಲುವುಗಳು, ಹಠ, ದುರಭಿಮಾನಗಳು ಅವಳ ಕಣ್ಮುಂದೆ ಧುತ್ತೆಂದು ನಿಲ್ಲುತ್ತದೆ. ಇನ್ನು ತನಗೆ ಒಂಟಿಯಾಗಿ ತಾನೊಬ್ಬಳೇ ಇರುವುದು ಅಸಾಧ್ಯವೆನಿಸತೊಡಗುತ್ತದೆ. ಕೀರ್ತಿ, ಹಣ ಅಂತಸ್ತು ಅಧಿಕಾರ– ಎಲ್ಲವೂ ನಿಷ್ಫಲವೆನಿಸುತ್ತದೆ. ಈ ಎಲ್ಲದರ ನಡುವೆ ಅರಳಿದ್ದ ಮನದ ಹೂ, ಇವುಗಳ ನಿಷ್ಫಲತೆಯ ಅರಿವಿನೊಂದಿಗೆ ಬಾಡಲು ತೊಡಗುತ್ತದೆ ಹೇಗಾದರೂ ಮಾಡಿ ತಾಯಿಯನ್ನು ಮದ್ರಾಸಿಗೆ ಕರೆತರಬೇಕೆಂಬ ನಿರ್ಧಾರದೊಂದಿಗೆ ಕಾದಂಬರಿ ಮುಗಿಯುತ್ತದೆ.

**ಕತ್ತಲೆಯ ಕಡಲು :** ೧೯೭೭ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟವಾದ ಕಾದಂಬರಿ ಮೋಹಿನಿಯ ಜೀವನದ ವ್ಯಥೆ–ಕಥೆಗೆ ಒಂದು ನಿಲುಗಡೆಯೊಂದಿಗೆ ಮುಗಿಯುತ್ತದೆ. ಮುಗಿಯುತ್ತದೆ ಎಂದ ಮಾತ್ರಕ್ಕೆ ಸುಖಾಂತವಾಗುತ್ತದೆ ಎಂದಲ್ಲ 'ಕನಸಿನ ಮನೆ' ಕಾದಂಬರಿಯಲ್ಲಿ ಕಾಣುವ ಮೋಹಿನಿಗಿಂತ ಭಿನ್ನವಾದ ಮೋಹಿನಿಯನ್ನು ಕಾಣುತ್ತೇವೆ. ಇಲ್ಲಿಯ ವರೆಗಿನ ಅವಳ ಜೀವನ ಪಯಣದ ಹಾದಿಯಲ್ಲಿ ಅನೇಕ ಬಗೆಯ ಸಂಗತಿ ವಿಸಂಗತಿಗಳು ಅವಳನ್ನು ಆಯಾಯಾ

ಕ್ಷಣಕ್ಕೆ ತಾನು ನಂಬಿಕೊಂಡು ಬಂದ ಜೀವನ ಮೌಲ್ಯಗಳು ಸಿದ್ಧಾಂತಗಳು ರೂಢಿಗತ ಸಂಪ್ರದಾಯದ ಹೆಣ್ಣಿನ ಬಗೆಗಿನ ನಿಲುವುಗಳು ನಿರೀಕ್ಷೆಗಳು ಮುಂತಾದವುಗಳಿಗೆ ಮುಖಾಮುಖಿಯಾಗುತ್ತ, ಅನುಭವದ ಪಾಠಗಳ ಮೂಲಕ ಗಂಡು ಹೆಣ್ಣಿನ ಸಂಬಂಧಗಳಲ್ಲಿನ ಸಾಮರಸ್ಯ ಅನ್ಯೋನ್ಯತೆ, ವಿರಸ ವಿಷಮತೆಗಳ ಅರ್ಥವನ್ನು ಗ್ರಹಿಸಲು ಆರಂಭಿಸುತ್ತಾಳೆ. ಬಯಸಿದ್ದೆಲ್ಲವೂ ಸಿಕ್ಕರೂ ನೆಮ್ಮದಿ ಸಾಧ್ಯವಾಗದೆ ಹೋಗುತ್ತದೆ. ತನ್ನವರು–ತನ್ನಸುತ್ತ ಕೋಟೆ ಕಟ್ಟಿದ್ದವರೆಲ್ಲರ ಮೂಲ ಸ್ವಭಾವಗಳು ಅನಾವರಣಗೊಳ್ಳುತ್ತಾ ಹೋಗುತ್ತದೆ ಹೃದಯವಂತಿಕೆ ಬಯಸಿ ಬಳಿ ಸಾರಿದ್ದ ರಂಗನಾಥನ್‌ನ ಸ್ವಾರ್ಥ ಬಯಲಾಗುತ್ತದೆ: ಪಾರ್ಟಿಯಲ್ಲಿ ಕುಡಿದು ಪ್ರಜ್ಞೆ ತಪ್ಪಿದ್ದ ಸಂದರ್ಭದ ದುರುಪಯೋಗ ಮಾಡಿಕೊಂಡು ಆರ್ಮುಗಂ ಅತ್ಯಾಚಾರ ನಡೆಸುತ್ತಾನೆ. ಹೀಗೆ ಅನೇಕ ರೀತಿಯಲ್ಲಿ ಆಘಾತಗಳಿಗೆ ಒಳಗಾಗುತ್ತಾಳೆ. ಈಗ ಅವಳಿಗೆ ಬೇಕಾದ್ದು ಏಕಾಂತ ಎಂದು ಅರ್ಥಮಾಡಿಕೊಳ್ಳುತ್ತಾಳೆ. ಇಂತಹ ಹತಾಶ ಅಸಹಾಯಕ ಸ್ಥಿತಿಯಲ್ಲಿ ತನ್ನ ಮಕ್ಕಳಿಂದ ಏನನ್ನೂ ಬಯಸದೆ ನಿಸ್ವಾರ್ಥ ಪ್ರೀತಿ, ನೆಮ್ಮದಿಗಳನ್ನು ನೀಡಬಲ್ಲ ತಾಯಿಯೊಬ್ಬಳು ಮಾತ್ರವೇ ಬೇಕೆನಿಸಿ, ಅವಳನ್ನು ಹೇಗಾದರೂ ಮಾಡಿ ಕರೆದುಕೊಂಡೇ ಬರಬೇಕೆಂದುಕೊಳ್ಳುವಷ್ಟರಲ್ಲಿ ತಾಯಿಯ ಸಾವಿನ ಸುದ್ದಿ ಬರಸಿಡಿಲಿನಂತೆ ಎರಗುತ್ತದೆ. ಆಘಾತಗಳು, ಆಲೋಚನೆಗಳು, ಜವಾಬ್ದಾರಿಗಳು, ಗಾಢವಾಗಿ ಕಾಡುತ್ತಿದ್ದ ಅಪರಾಧಿ ಭಾವಗಳು ಅವಳನ್ನು ಮಾನಸಿಕವಾಗಿಯೂ ದೈಹಿಕವಾಗಿಯೂ ಜರ್ಝರಿತಳನ್ನಾಗಿ ಮಾಡುತ್ತವೆ. ಅತಿಯಾದ ಅನಾರೋಗ್ಯದಿಂದ ಸುಡುತ್ತಿರುವ ಜ್ವರದಿಂದ ಸಾಯಬಹುದೆನ್ನುವ ಶಂಕೆಯುಂಟಾದಾಗ, ಸಾವು ತನ್ನೆಲ್ಲ ಪಾಪಗಳಿಗೆ ಪರಿಹಾರವಾಗಬಹುದು; ಬಿಡುಗಡೆಯೂ ಆಗಬಹುದು ಎಂದುಕೊಂಡಾಗ ನಿರಾಳಮನಃಸ್ಥಿತಿಗೆ ಒಳಗಾಗುತ್ತಾಳೆ. ಮೋಹಿನಿ ಆಸ್ಪತ್ರೆ ಸೇರಿದ ವಿಷಯ ಕೇಳಿದ ವಸಂತ ಗಾಭರಿಯಿಂದ ಆಸ್ಪತ್ರೆಗೆ ಧಾವಿಸಿಬಂದು ಅವಳನ್ನು ಕಂಡು ಸಮಾಧಾನದ ಮಾತುಗಳನ್ನಾಡುತ್ತಾನೆ; ಬದುಕಿ ಉಳಿದರೆ ಆನಂದನ ಜೊತೆಗೆ ಬಾಳುವ ಕನಸು ಬೆಸೆಯುತ್ತದೆ. ಆನಂದ ಮೋಹಿನಿಯು ಆಸ್ಪತ್ರೆಯಲ್ಲಿ ಇರುವ ವಿಚಾರವನ್ನು ತಿಳಿಯದಿದ್ದರೂ ನಾರಾಯಣರಾಯರನ್ನು ಕಾಣಲು ಬಂದವನಿಗೆ ವಸಂತನಿಂದ ಮೋಹಿನಿ ಆಸ್ಪತ್ರೆಯಲ್ಲಿರುವ ವಿಚಾರ ತಿಳಿದರೂ ಯಾವುದೇ ಉತ್ಸುಕತೆಯನ್ನಾಗಲೀ ಅವಳನ್ನು ಕಾಣಬೇಕೆಂಬ ಕುತೂಹಲವನ್ನಾಗಲೀ ತೋರದಿದ್ದವನು, ಶಕುಂತಲೆ ವಸಂತರ ಒತ್ತಾಯದಿಂದ ವಸಂತನ ಜೊತೆ ಅವಳಿದ್ದ ವಾರ್ಡಿಗೆ ಹೋಗುತ್ತಾನೆ. ಆದರೆ ಆನಂದ ಮರುಕ ತುಂಬಿದ ಕಣ್ಣುಗಳಿಂದ ಅವಳನ್ನು ನೋಡಿದರೆ ಅವಳು ದೈನ್ಯ ಸೂಸುತ್ತಿದ್ದ ಕಣ್ಣುಗಳಿಂದ ನೋಡುತ್ತಾಳೆ. ಇಬ್ಬರ ನಡುವೆಯೂ ಮಾತುಕತೆಯಿಲ್ಲ ಮೌನ ನೋಟಗಳೇ ಅವರವರ ಎದೆಯ ಭಾವಗಳನ್ನು

ಹೇಳುತ್ತದೆ. ಮುಖ ತಗ್ಗಿಸಿಕೊಂಡೇ ಕೋಣೆಯಿಂದ ಹೊರಗೆ ಹೊರಡುವುದ ರೊಂದಿಗೆ, ಆನಂದನ ಮನಃಸ್ಥಿತಿ, ನಿಲುವುಗಳು ನೂರೆಂಟು ಅರ್ಥಗಳನ್ನು ಹೊಮ್ಮಿಸುವಂತಾಗುತ್ತದೆ. ಕಾದಂಬರಿ ಇಂಥ ಒಂದು ದೃಶ್ಯ ಚಿತ್ರಣದೊಂದಿಗೆ ಮುಗಿಯುತ್ತದೆ, ಮೋಹಿನಿಯ ಗೆಲುವಿನಲ್ಲಿ ಸೋಲೋ; ಸೋಲಿನಲ್ಲಿ ಗೆಲುವೋ ಒಟ್ಟಾರೆಯಾಗಿ ಮೋಹಿನಿಯ ಬದುಕು ಹತಾಶೆ, ನಿರಾಶೆಗಳ ಕತ್ತಲೆಯ ಕಡಲಾಗಿಯೇ ಉಳಿಯುತ್ತದೆ – ಓದುಗರಿಗೆ ಬಿಟ್ಟ ವಿಷಯವಾಗುತ್ತದೆ.

**ವಿಜಯ ಯಾತ್ರೆ :** ೧೯೪೮ರಲ್ಲಿ ಪ್ರಕಟವಾದ ಈ ಕಾದಂಬರಿ 'ಮೂರಾಬಟ್ಟೆ' (ಕಾದಂಬರಿಯ) ಮುಂದುವರಿಕೆ ಎಂಬಂತೆ ಕಾಣುತ್ತದೆ. 'ಮೂರಾಬಟ್ಟೆ'ಯಲ್ಲಿ ಸ್ವಾತಂತ್ರ್ಯ ಪೂರ್ವದ ಚಿತ್ರಣವಿದ್ದರೆ 'ವಿಜಯಯಾತ್ರೆ' ಸ್ವಾತಂತ್ರೋತ್ತರ ಭಾರತದ ಪರಿಸ್ಥಿತಿಯನ್ನು ಯಥಾವತ್ತಾಗಿ ವಿವರಿಸುತ್ತದೆ. ೧೯೭೮ರಲ್ಲಿ ಈ ಕಾದಂಬರಿ ಮೂರನೇ ಮುದ್ರಣವನ್ನು ಕಂಡಿದ್ದರೂ ವಿಮರ್ಶಕರ ಅವಗಾಹನೆಗೆ ಬಾರದೆ ಹೋದದ್ದು ಒಂದು ದುರಂತವೇಸರಿ. ಸ್ವಾತಂತ್ರ್ಯದ ಮಹೋನ್ನತ ಕನಸಿನೊಂದಿಗೆ ದೇಶ ಪ್ರೇಮದ ಕಿಚ್ಚಿನೊಂದಿಗೆ ಅಸಂಖ್ಯಾತ ಮಂದಿ ನಿಲ್ಲದ ಹೋರಾಟದಲ್ಲಿ ಧುಮುಕಿ ಪ್ರಾಮಾಣಿಕತೆ, ನಿಸ್ವಾರ್ಥ ದೇಶ ಭಕ್ತಿ, ತ್ಯಾಗ, ಬಲಿದಾನಗಳೊಂದಿಗೆ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯ ಅವಧಿಯಲ್ಲಿ ಬಿರುಸಿನಿಂದ ಹೋರಾಡಿ ಐದು ವರ್ಷಗಳ ನಂತರ ೧೯೪೭ರಲ್ಲಿ ಸ್ವಾತಂತ್ರ್ಯವನ್ನು ಗಳಿಸಿ ಕೊಟ್ಟದ್ದು ನಂಬಲಾಗದ ಅಚ್ಚರಿ ಎನಿಸಿತ್ತು. ತಮ್ಮ ಕನಸು ಹೀಗೆ ದಿಢೀರಾಗಿ ವನಸಾಗುವುದನ್ನು ಊಹಿಸಿಯೂ ಇರಲಿಲ್ಲ. ಅವರಿಗೆ ಇದರಿಂದ ತಮ್ಮ ಹೋರಾಟದ ಸಾರ್ಥಕತೆಯ ಬಗ್ಗೆ ಹೆಮ್ಮೆ ಎನಿಸಿತೇ ಹೊರತು ಯಾವುದೇ ಅಧಿಕಾರ, ಹಣದ ಲಾಲಸೆಗಳು ಇರಲಿಲ್ಲ. ಆದರೆ ಇನ್ನೇನು ಸ್ವಾತಂತ್ರ್ಯ ಕೈಯಳತೆಯಲ್ಲಿದೆ ಎಂದು ತಿಳಿದು ಬಂದಾಗ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಬಣಗಳು ಸೃಷ್ಟಿಯಾದವು. ಭಾರತಕ್ಕೆ ಅಖಂಡ ಭಾರತವಾಗಿ ಸ್ವಾತಂತ್ರ್ಯ ಬರಲಿಲ್ಲ, ಬದಲಾಗಿ ಹೋಳಾಗಿ ಎರಡು ರಾಷ್ಟ್ರಗಳಾಗಿ ಹಂಚಿಹೋಯಿತು. ಕೋಮುಗಲಭೆ, ರಾಜಕೀಯ ದಂಗೆಗಳು – ನಿರಪರಾಧಿ ಮುಗ್ಧ ಪ್ರಜೆಗಳ (ಎರಡೂ ರಾಷ್ಟ್ರಗಳಲ್ಲಿ) ಮಾರಣಹೋಮ ನಡೆಯಿತು. ಭಾರತದಲ್ಲಿ ಗಾಂಧಿಯ ಆದರ್ಶಗಳ ಬೆನ್ನಿಗೆ ನಡೆದವರು ಒಂದು ಕಡೆಯಿದ್ದರೆ, ಮತ್ತೊಂದು ಕಡೆ ಮೌಲ್ಯಾದರ್ಶಗಳನ್ನು ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿದ್ದ ಸಿದ್ಧಾಂತಗಳನ್ನು ಗಾಳಿಗೆ ತೂರಿ ಅಧಿಕಾರ ಸ್ಥಾನಮಾನಗಳಿಗೆ ಹಪಹಪಿಸುವ ಅವಕಾಶವಾದಿಗಳಿದ್ದರು. ಈ ಮೇಲಾಟದಲ್ಲಿ ನಿಷ್ಠಾವಂತರಿಗೆ ನೋವು, ಸಂಕಟ, ಸೋಲುಗಳು ಮಾತ್ರವೇ ಅವರ ಪಾಲಿನ ಉಡುಗೊರೆಯಾಗಿ ಉಳಿದವು. ಗಾಂಧೀಜಿಗೂ ಜನರಲ್ಲಿ ಬದಲಾದ ಧೋರಣೆಗಳನ್ನು ಕಂಡು ನಿರಾಶೆಯಾಯಿತು. ಸ್ವಾತಂತ್ರ್ಯದ ಅಪಮೌಲ್ಯವಾಗುವ

ಸಾಧ್ಯತೆಗಳನ್ನೇ ಹೆಚ್ಚಾಗಿ ಕಂಡರು. ದೇಶದ ಸ್ವಾತಂತ್ರ್ಯಕ್ಕಾಗಿ ಅವರು ನಡೆಸಿದ ಸತ್ಯ ಅಹಿಂಸೆಗಳ ಮೂಲಕದ ಹೋರಾಟದ ಮೌಲಿಕತೆಯನ್ನು ಅವರ ಮಹೋನ್ನತ ಆದರ್ಶಗಳಾದ ತ್ಯಾಗ, ಬಲಿದಾನಗಳನ್ನು ಮರೆತು, ರಾಜಕೀಯ ಅಧಿಕಾರ ಸ್ಥಾನಗಳಿಗಾಗಿ ಸ್ಪರ್ಧೆಗೆ ನಿಂತರು.

ಈ ಒಂದು ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕಾದಂಬರಿಯ ಕಥಾನಕ ಮುಂದುವರೆಯುತ್ತದೆ. ಇಲ್ಲಿನ ಕೇಂದ್ರ ಪಾತ್ರವಾದ 'ವಿಜಯ' ಒಬ್ಬ ಕಟ್ಟಾ ದೇಶಭಕ್ತ; ನಿಷ್ಠಾವಂತ ಗಾಂಧೀವಾದಿ . ಈತನಿಗೆ ಅಧಿಕಾರ, ಹಣ, ಅಂತಸ್ತುಗಳಿಗಿಂತ ತನ್ನ ದೇಶಭಕ್ತಿ, ಗಾಂಧೀ ತತ್ವಗಳಿಗಿಂತ ದೊಡ್ಡದು ಯಾವುದೂ ಇಲ್ಲವೆಂಬುದರಲ್ಲಿ ಅಚಲವಾದ ನಂಬಿಕೆ, ಸಾಮಾನ್ಯವಾಗಿ ರೂಢಿಯಲ್ಲಿರುವಂತೆ, ಸತ್ಯ, ಪ್ರಾಮಾಣಿಕತೆ ಮೌಲ್ಯದರ್ಶಗಳನ್ನು ನಂಬಿದವನಿಗೆ ಕಡೆಗೆ ಸಿಗುವುದು ನೋವು, ಸಾವು, ಸಂಕಟಗಳೆಂಬುದು ವಾಸ್ತವಸತ್ಯ. ಅದರಂತೆಯೇ 'ವಿಜಯ' ತನ್ನ ಮೌಲ್ಯ ನಿಷ್ಠೆ, ತಾತ್ವಿಕ ನಂಬಿಕೆಗಳಿಂದಾಗಿ ಇದ್ದುದೆಲ್ಲವನ್ನೂ ಕಳೆದು ಕೊಂಡರೂ ರಾಜಿಗೆ ಒಳಗಾಗದೆ, ಬಡತನದಿಂದ ಮತ್ತು ಸೆರೆಮನೆವಾಸದಿಂದಾಗಿ ಪಡೆದ ಅನಾರೋಗ್ಯದಿಂದ ನರಳುತ್ತಾನೆ. ಆದರೆ ಅವಕಾಶವಾದಿಗಳು ತಮ್ಮ ನಿಲುವುಗಳನ್ನು ಬದಲಾಯಿಸಿಕೊಂಡು, ಸ್ವಾರ್ಥ, ಅಧಿಕಾರ ಲಾಲಸೆ, ಸಂಕುಚಿತ ಮನೋವೃತ್ತಿಗಳನ್ನು ಮುಂದಾಗಿಸಿಕೊಂಡು ಹೆಣಗಾಡುತ್ತಾರೆ. ಸ್ವಾತಂತ್ರ್ಯೋತ್ಸವ ಸಂಭ್ರಮದಲ್ಲಿ ರಾಷ್ಟ್ರದ ಸ್ವಾತಂತ್ರ್ಯ ಧ್ವಜವನ್ನು ಹಾರಿಸುವುದನ್ನು ನೋಡಬೇಕೆಂದು ತುಡಿಯುತ್ತಿರುವ ವಿಜಯನಿಗೆ ಬಾನಂಗಳದಲ್ಲಿ ಕಾಣಬೇಕೆಂಬ ಬಯಕೆ ಅವನ ಪಾಲಿಗೆ ಕೇವಲ ಕನಸಾಗುತ್ತದೆ. ಆ ಒಂದು ಕ್ಷಣಕ್ಕಾಗಿಯೇ ಅವನು ಪ್ರಾಣವನ್ನು ಹಿಡಿದಿರುತ್ತಾನೆ. ಆದರೆ 'ವಿಜಯಾತ್ರೆ'ಯ ಸನ್ನಿವೇಶದಲ್ಲಿಯೇ ವಿಜಯನ ಸ್ಮಶಾನಯಾತ್ರೆಯೂ ಆಗುವುದು ಒಂದು ದುರಂತ ವ್ಯಂಗ್ಯವೆನಿಸುತ್ತದೆ. ವಿಜಯನ ಸಾವು ಮೌಲ್ಯಗಳ ಸಾವಿನ ಸಂಕೇತವಾಗುತ್ತದೆ. ಕಾದಂಬರಿಯಲ್ಲಿ ಈ ಎರಡೂ ಯಾತ್ರೆಗಳು ?(ವಿಜಯ ಯಾತ್ರೆ + ವಿಜಯನ ಯಾತ್ರೆ) ಮುಖಾಮುಖಿಯಾಗುವ ಸನ್ನಿವೇಶವಂತೂ ಹೃದಯ ಸ್ಪರ್ಶಿಯಾಗಿರುವುದಲ್ಲದೆ, ಇಡೀ ಕಾದಂಬರಿಯ ಆಶಯವನ್ನೇ ಬಿಂಬಿಸುತ್ತದೆ.

ಅಂದು ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಯನ್ನು ವಿಜಯ ರಂಗಣ್ಣರ ಸಂವಾದದಲ್ಲಿ ಕಾಣಿಸಿರುವುದು ಇಂದಿಗೂ ಪ್ರಸ್ತುತವೆನಿಸುತ್ತದೆ. ಸಮಯ ಸಾಧಕರಿಗೆ, ಜನತಾ ಪ್ರತಿನಿಧಿಗಳಿಗೆ ಪಂಚತಾರಾ ಹೋಟೆಲುಗಳಲ್ಲಿ ಮೇಜವಾನಿ ಪಾನಕೇಳಿ! ಆದರೆ ಅವರನ್ನು ಆರಿಸಿ ಕಳುಹಿಸುವ ಮುಗ್ಧ, ಬಡ ಬೋರೇಗೌಡನಂಥವರಿಗೆ. ಮುರುಕು ಗುಡಿಸಲು, ಅರೆಹೊಟ್ಟೆ, ಚಿಂದಿಬಟ್ಟೆ– ಎನ್ನುವ ಕಾದಂಬರಿಕಾರರ

ಮಾತು ನಿರಂತರ ಸತ್ಯ, ಜನ ಬದಲಾದ ಹೊರತು ಪರಿಸ್ಥಿತಿ ಬದಲಾಗುವುದೇ ಇಲ್ಲ. ಇದು ಬಹುಶಃ ಮೂಲಭೂತ ಸ್ವಭಾವವೇ ಆಗಿರುವ ಕಾರಣಕ್ಕೆ ಎನಿಸುತ್ತದೆ. ಸ್ವಾತಂತ್ರ್ಯಾನಂತರದ ಭಾರತದ ಹದಗೆಟ್ಟ ಪರಿಸ್ಥಿತಿ, ತಲ್ಲಣಗಳು, ಇವರ ಮಾತಿನಲ್ಲೇ ಹೀಗೆ ವಿವರಣೆಗೊಂಡಿದೆ. 'ಗುರಿ ಸೇರುವುದಕ್ಕಿಂತ ದಾರಿ ನಡೆಯುವುದರಲ್ಲಿಯೇ ಹೆಚ್ಚಿನ ಸುಖ ಎಂಬ ಮಾತಿದೆ. ದೇಶದ ಸ್ವಾಧೀನತೆಗಾಗಿ ನಮ್ಮ ಜನ, ದಾರಿ ನಡೆಯುವಾಗ ಕಂಡು ಬಂದ ಐಕಮತ್ಯ, ಶ್ರದ್ಧೆ, ಉತ್ಸಾಹ, ಅರ್ಪಣಬುದ್ಧಿ, ನಿರೀಕ್ಷಣ ಸುಖಗಳು ಗುರಿ ಸೇರಿದಾಗ ಇರಲಿಲ್ಲ. ಸ್ವಾತಂತ್ರ್ಯ ಪ್ರಾಪ್ತಿಯೊಂದಿಗೆ ಅನಿಷ್ಟ ಪರಂಪರೆಗಳೇ ಹಲ್ಲು ಕಿರಿದವು; ಸ್ವಾತಂತ್ರ್ಯದ ಅಮೃತಬಿಂದುಗಳನ್ನೆಲ್ಲ ಸ್ವಾರ್ಥದ ನಂಜು ನಾಲಗೆಗಳೇ ನೆಕ್ಕಿದವು! ದೆಹಲಿಯಲ್ಲಿ ವಿಜಯೋತ್ಸವ, ಸ್ವಾತಂತ್ರ್ಯಶಿಲ್ಪಿ ಗಾಂಧೀಜಿಗೆ ದೂರದ ನೌಕಾಲಿಯಲ್ಲಿ ಪಾದಯಾತ್ರೆ, ದೇಶಾಗ್ನಿ ಶಮನದ ಅಗ್ನಿದಿವ್ಯ!" ಈ ಬಗೆಯ ವಿವರಗಳಲ್ಲಿ ಭಯಾನಕ ದುರಂತ ವ್ಯಂಗ್ಯದ ಚಿತ್ರ ಕಣ್ಣಿಗೆ, ಮನಸ್ಸಿಗೆ ರಾಚುವಂತೆ ಬಿಂಬಿಸಿರುವ ಇನಾಂದಾರರ ರಾಜಕೀಯ ಪ್ರಜ್ಞೆ, ಸೂಕ್ಷ್ಮ ನೋಟಗಳ ಸಾಮರ್ಥ್ಯ ನಿಜಕ್ಕೂ ಅಚ್ಚರಿಯದಾಗಿದೆ.

**ಶಾಪ :** ೧೯೬೯ ರಲ್ಲಿ ಮೊದಲ ಅವೃತ್ತಿಯಾಗಿ ಪ್ರಕಟವಾದ ಈ ಕಾದಂಬರಿ ೧೯೮೩ರ ವರೆಗೆ ಐದು ಮುದ್ರಣಗಳನ್ನು ಕಂಡಿರುವುದೇ ಇದರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಮುದ್ರಣಗಳಷ್ಟೇ ಅಲ್ಲದೆ ಚಲನಚಿತ್ರವಾಗಿ ಜನರ ಅಪಾರ ಮೆಚ್ಚುಗೆ ಗಳಿಸಿದೆ. ಈ ಕಾದಂಬರಿ ವೇಶ್ಯೆಯೊಬ್ಬಳ ಮಗಳ ಬದುಕಿನ ಸುತ್ತ ಹೆಣೆದ ಕಥೆಯಾಗಿದೆ: ವೇಶ್ಯೆ ಜೀವನವನ್ನು ಕುರಿತು ಕನ್ನಡದಲ್ಲಿ ಸಾಕಷ್ಟು ಕಾದಂಬರಿಗಳೂ ನಾಟಕಗಳೂ ಸೃಷ್ಟಿಯಾಗಿವೆ. ಕಾರಂತರ 'ಮೈ ಮನಗಳ ಸುಳಿಯಲ್ಲಿ', ಅನಕೃ ಅವರ 'ಶನಿಸಂತಾನ' ಎಂ.ಕೆ. ಇಂದಿರಾ ಅವರ 'ಗೆಜ್ಜೆಪೂಜೆ', ಶ್ರೀರಂಗರ 'ಸೂಳೆಯಸಂಸಾರ, ಕೈಲಾಸಂ ಅವರ 'ಸೂಳೆ', ಇತ್ಯಾದಿಗಳು ಪ್ರಮುಖವಾಗಿವೆ. ಸೂಳೆಯೊಬ್ಬಳ ಮಗಳಾಗಿ ಹುಟ್ಟಿದ್ದು ಒಂದು ಶಾಪವಾಗಿ, ಸಮಾಜದಲ್ಲಿ ಗೌರವ, ಪ್ರತಿಷ್ಠೆಗಳಿಂದ ಗೃಹಿಣಿಯಾಗಿ ಬಾಳಬೇಕೆಂಬ ಕನಸು, ಪ್ರಯತ್ನಗಳು, ಗತಬದುಕಿನ ಚರಿತ್ರೆಯ ಪುಟಗಳು ತೆರೆದುಕೊಂಡು ವರ್ತಮಾನಕ್ಕೆ 'ಶಾಪ'ವಾಗಿ ಕವಿಯುವ ಕಥಾಸನ್ನಿವೇಶಗಳು ಈ ಕಾದಂಬರಿಯ ವಸ್ತುವಾಗಿದೆ. ವೇಶ್ಯಾ ಬದುಕಿನ ದಾರುಣತೆ ನೆನ್ನೆಯದಷ್ಟೇ ಅಲ್ಲ ಇಂದಗೂ ಮುಂದುವರೆದ ಸಾರ್ವಕಾಲಿಕವಾದ ಕಟು ವಾಸ್ತವವಾಗಿದೆ. ಆದ್ದರಿಂದಲೇ ಈ ಕಾದಂಬರಿಯ ಕಥಾನಕ ಹೃದಯ ಮಿಡಿಯುವಂತಿದ್ದು, ಓದುಗರನ್ನು ಅಪಾರ ಸಂಖ್ಯೆಯಲ್ಲಿ ಸೆಳೆದು ಕೊಂಡಿದೆ. ಜೊತೆಗೆ ಈ ಸಮಸ್ಯೆಯೇ ಅಂಥಾದ್ದು. ಲೇಖಕರೇ ಹೇಳುವಂತೆ "ಇಲ್ಲಿಯ ಸಮಸ್ಯೆ ಒಂದು ಪ್ರಾಂತದ ಅಥವಾ ಒಂದು ದೇಶದ ಜನರ ಸಮಸ್ಯೆಯಾಗಿರದೆ

ಸಾರ್ವತ್ರಿಕವಾಗಿ ದೇಶಕಾಲಗಳ ಭೇದವನ್ನು ಮರೆತು, ಎಲ್ಲರನ್ನೂ ಯೋಚನೆಗೆ ತೊಡಗಿಸುವಂಥದ್ದು".

ಈ ಕಾದಂಬರಿಯಲ್ಲಿ ಸಾರ್ವಕಾಲಿಕ ಸಮಸ್ಯೆಯೇ ಇದ್ದರೂ ವಿಷಯದ ನಿರೂಪಣೆಯ ಕಲಾತ್ಮಕತೆ, ಕಾದಂಬರಿಗೆ ಒಂದು ರೀತಿಯ ತಾಜಾತನವನ್ನು ನೀಡಿದೆ; ಇನಾಂದಾರರು ಭಾವಿಸಿದಂತೆ-" ಅವರವರ ನೋಟ ಅವರವರಿಗೆ, ಅವರವರ ನೋಟವೇ ಅವರವರ ತಂತ್ರ, ಪರಿಣಾಮಗಳನ್ನು ನಿರ್ಧರಿಸಬಲ್ಲುದು, ಜೀವನದ ಅನುಭವ ದರ್ಶನ ಮುಖ್ಯ, ಕೊನೆಯ ಘಟ್ಟದಲ್ಲಿ ಇಂಥ ಮಾತು ಸ್ವಂತದ ಪ್ರಾಮಾಣಿಕತೆಯ ಪ್ರಶ್ನೆಯಾಗುತ್ತದೆ".

ಈ ಕಾದಂಬರಿಯಲ್ಲಿ, ಕಥಾ ಪ್ರವಾಹದಲ್ಲಿ. ಕಥಾನಾಯಕ ನಾಯಕಿಯರಾದ ಮಾಧವ ಸರೋಜಿನಿಯರ ವರ್ತಮಾನದ ಬದುಕನ್ನು 'ಭೂತ'ದ ಕರಾಳ ಛಾಯೆ ಕವಿದು ಕಾಡುತ್ತದೆ. ಭೂತದಲ್ಲಿ ವರ್ತಮಾನದ ಎಳೆಯಿದ್ದರೆ, ವರ್ತಮಾನದಲ್ಲಿ ಭೂತದ ಬಲೆ ಹರಡಿರುತ್ತದೆ ಎನ್ನುವ ಲೇಖಕರ ಮಾತಿಗೆ ನಿದರ್ಶನವಾಗಿ ಈ ನಾಯಕ, ನಾಯಕಿಯರ ಬದುಕು ರೂಪುಗೊಳ್ಳುತ್ತದೆ. ನಾಯಕನಿಗೆ 'ಇಂಥ ತಂದೆಯ ಮಗ' ಎನಿಸಿಕೊಳ್ಳುವುದು ಬೇಡವಾಗುತ್ತದೆ. ಯಾವ ಸಂಬಂಧಗಳ ಕೊಂಡಿಯಿಲ್ಲದೆ, ತಂದೆಯ ಹೆಸರಿನ ಬಲ, ಬೆಂಬಲವಿಲ್ಲದೆ ಬದುಕಬೇಕೆಂಬ ಅವನ ಪ್ರಯತ್ನಗಳು ಸಫಲವಾಗುವುದೇ ಇಲ್ಲ. ಹಾಗೆಯೇ ಅವನು ಪ್ರೀತಿಸಿದ ಸರೋಜಿನಿಯೂ ತಾಯಿಯ ಎಲ್ಲ 'ಭೂತ'ವನ್ನು ತೊಡೆದು ಹಾಕಿ ಹೊಸ ಬದುಕನ್ನು ಬದುಕಬೇಕೆಂದು ಬಯಸುವಳಾದರೂ ಅದು ಸಾಧ್ಯವಾಗುವುದಿಲ್ಲ, ಇಬ್ಬರ ಬದುಕಿನಲ್ಲೂ ಭೂತಕಾಲದ ಭೂತ ನೆರಳು ಬೆನ್ನಟ್ಟಿ ಬರುತ್ತಲೇ ಇರುತ್ತದೆ, ತಂದೆಯ ಆಸ್ತಿ ಪಾಪದ ಸಂಪಾದನೆ; ಹಲವರ ಕಣ್ಣೀರಿನಿಂದ, ಶಾಪದಿಂದ ಗಳಿಸಿದ್ದು ಪಾಪಲೇಪಿತ ಬದುಕಿನಂತೆ ಸಾವೂ ಪಾಪಲೇಪಿತವೇ! ಆದ್ದರಿಂದ ಈ ಪಾಪಲೇಪಿತ ಬದುಕನ್ನು ನಿರಾಕರಿಸಿ ಪರಿಶುದ್ಧವಾದ, ಪ್ರಾಮಾಣಿಕ ಗಳಿಕೆಯ ಬದುಕಿನಿಂದ ಬದುಕಬೇಕೆಂಬುದು ಅವನ ಹಂಬಲ. ತನ್ನ ಕಾಲ ಮೇಲೆ ನಿಂತು ಸ್ವಾವಲಂಬಿಯಾಗಿ ಸ್ವಯಾರ್ಜಿತದಿಂದ ಬದುಕುವೆನಲ್ಲದೆ ಅಪ್ಪನ ಗಳಿಕೆಯಲ್ಲಿ, ಆಸ್ತಿ, ಪಾಸ್ತಿಯಲ್ಲಿ ಕಿಂಚಿತ್ತೂ ಬೇಡವೆಂಬ ನಿಸ್ಪೃಹತೆಯ ಧೋರಣೆಯಲ್ಲಿ ಇರುವನಾದರೂ ಚಿಕ್ಕಪ್ಪನ, ತನ್ನ ತಂದೆಯ ಕುರಿತಾದ ಅವಹೇಳನಕಾರಿಯಾದ, ವ್ಯಂಗ್ಯ ಕಟಕಿಯ ಮಾತುಗಳನ್ನು ಕೇಳಿಸಿಕೊಳ್ಳುತ್ತಲೇ ಬದುಕಬೇಕಾದ ಅನಿವಾರ್ಯತೆ ಅವನನ್ನು ಉಸಿರುಗಟ್ಟುವಂತೆ ಮಾಡುತ್ತದೆ.

ಸರೋಜಿನಿಯ ಬದುಕಿನ ಹಿಂದೆ ತಾಯಿಯ ವೇಶ್ಯಾ ವೃತ್ತಿಯ ಕರಾಳ ನೆರಳಿದೆ. ತಲೆ ತಲಾಂತರದಿಂದ ನಡೆದು ಬಂದ ದುಷ್ಟ ಪರಂಪರೆಯ ಕಪಿ ಮುಷ್ಟಿಗೆ ಸಿಲುಕಿ, ಅಸಹಾಯಕತೆಯ ನಿಟ್ಟುಸಿರಿನೊಂದಿಗೆ, ಬೇರೆ ಪರ್ಯಾಯವಿಲ್ಲದೆ ವೇಶ್ಯಾ ಜೀವನವನ್ನೇ ಆಯ್ದುಕೊಳ್ಳಬೇಕಾಗಿ ಬಂದು, ಹೇಸಿಗೆಯ ಜೀವನಕ್ಕೆ ತೆತ್ತುಕೊಂಡ ತಾಯಿಯ 'ಗತ' ಸರೋಜಿನಿಗೆ ಜಿಗುಪ್ಸೆ ಹುಟ್ಟಿಸುತ್ತದೆ, ತಾನೆಂದೂ ಇಂತಹ ಬದುಕಿಗೆ ಒಳಗಾಗದೆ, ದೂರವಿದ್ದು ಸಮಾಜದಲ್ಲಿ ಮಾನವಂತಳಾಗಿ ಬದುಕಬೇಕೆಂಬ ಅದಮ್ಯ ಹಂಬಲದ ಒತ್ತಾಸೆಯಿಂದ ಕಾಲೇಜು ಸೇರಿ ಪ್ರತಿಭಾವಂತ ವಿದ್ಯಾರ್ಥಿನಿಯಾಗಿ ರೂಪುಗೊಳ್ಳುತ್ತಾಳೆ; ಓದು ಅವಳಿಗೊಂದು ಬಿಡುಗಡೆಯ ಹಾದಿಯಾಗಿ ಕಾಣುತ್ತದೆ.

ಅದೇ ಸಮಯದಲ್ಲಿ ಸಹಪಾಠಿ ಮಾಧವನ ಪರಿಚಯವಾಗಿ, ಪರಿಚಯ ಸ್ನೇಹವಾಗಿ, ಸ್ನೇಹ ಪ್ರೀತಿಯ ಸೆಳೆತವಾಗಿ ಬೆಳೆಯುತ್ತದೆ. ಆದರೆ ವಿಧಿಯ ವಿಪರ್ಯಾಸವೆಂಬಂತೆ, ಸ್ನೇಹಸಂಬಂಧ, ಪ್ರೇಮಸಂಬಂಧವಾಗಿ ಪರಿವರ್ತಿಸಿ ಮತ್ತೂ ಹತ್ತಿರವಾಗಿ, ವಿವಾಹದ ಮೂಲಕ ದಾಂಪತ್ಯದ ಬೆಸುಗೆಯಲ್ಲಿ ಒಂದಾಗಬೇಕೆಂದು ಬಯಸಿದವರಿಗೆ, ಗಂಡಹೆಂಡತಿಯಾಗಿ ಬಾಳಿ ಸಮಾಜದ ದೃಷ್ಟಿಯಲ್ಲಿ ಅಕಳಂಕಿತಳಾಗಿ ಬದುಕಬೇಕೆಂಬ ನಿರ್ಧಾರಕ್ಕೆ ಬರುತ್ತಿದ್ದಂತೆಯೇ, ಇವರಿಬ್ಬರ ಸಂಬಂಧದ ನೆಲೆಯೇ ಬದಲಾಗಿ ಅಣ್ಣ-ತಂಗಿಯರೆಂಬ ಅನಿರೀಕ್ಷಿತ ಮತ್ತು ಅಘಾತಕಾರಿಯಾದ ಸತ್ಯ ಹೊರಬೀಳುತ್ತದೆ. ಭೂತದಿಂದ ದೂರ ಸರಿಯಬೇಕೆಂದುಕೊಂಡಷ್ಟೂ ಅದು ಹತ್ತಿರ ಹತ್ತಿರವಾಗಿ ಬಂದು ಬಲೆಯಾಗಿ ಹೆಣೆದುಕೊಂಡು ಬಿಗಿಯಾಗುತ್ತದೆ. ಇದೊಂದು ಇವರ ಪಾಲಿನ ದುರಂತವಾಗಿ, ಶಾಪವಾಗಿ ಪರಿಣಮಿಸುತ್ತದೆ.

ಮಾಧವನ ಸ್ಥಿತಿಯೂ ಹೀಗೇ ಆಗುತ್ತದೆ, ತಂದೆಯ ಪಾಪದ ಕತೆಗಳನ್ನು ಕೇಳಿ ಕೇಳಿ ಬೇಸತ್ತಿದ್ದ ಮಾಧವ ಯಾರಾದರೂ ತನ್ನನ್ನು "ಇವನು ಕೃಷ್ಣರಾಯರ ಮಗ" ಎಂದು ಗುರುತಿಸಿದರೆ, ತಂದೆಯ ಪಾಪದ ಹಾವು ತನ್ನ ಮೇಲೆಲ್ಲ ಹರಿದಾಡಿದಂತೆ ಭಾಸವಾಗಿ ಅಸ್ವಸ್ಥಗೊಳ್ಳುತ್ತಿದ್ದ. 'ಇಂಥ ಅಪ್ಪನಮಗ' 'ಅಪ್ಪನಿಗೆ ತಕ್ಕ ಮಗ' ಎಂಬ ಮಾತುಗಳ ಆಘಾತದಿಂದ ಪಾರಾಗಿ ತಾನು ತಾನಾಗಿ, ತನ್ನಿಂದ ತಾನೇ ಗುರಿತಿಸಿಕೊಳ್ಳುವಂತಾಗಿ ಬದುಕಬೇಕೆಂಬ ಆಸೆ, ಛಲಗಳು ಫಲಕಾರಿಯಾಗಿದೆ, ವಿಧಿ ಅವನನ್ನು ಯಾತನೆಯ ಸಂಕೋಲೆಗಳಿಂದ ಬಿಗಿಯುತ್ತದೆ. ಅವನು ಹುಟ್ಟಿದ ಮನೆತನವೇ ಅವನಿಗೆ ಶಾಪವಾಗುತ್ತದೆ. ಆದರೆ ತಂದೆಯ ಬಗೆಗೆ ಇಲ್ಲಿಯವರೆಗೆ ಕೇಳಿದ ಮಾತುಗಳಿಗೆ ವಿರುದ್ಧವಾಗಿ, ಮತ್ತೊಂದು ಬಗೆಯಲ್ಲಿ ತಂದೆಯ ಚಿತ್ರ ಮೂಡಿಬರುವಂತಹ ಸನ್ನಿವೇಶಗಳು ಎದುರಾಗುತ್ತವೆ.

ಆಡಿಕೊಳ್ಳುವವರು ಒಂದು ಕಡೆಯಾದರೆ, ಮತ್ತೊಂದು ಕಡೆ ತಂದೆಯ ಔದಾರ್ಯ, ನೊಂದವರ ಬಗ್ಗೆ ತಳೆಯುತ್ತಿದ್ದ ಕಳಕಳಿ, ತೋರುತ್ತಿದ್ದ ಸಹಾನುಭೂತಿ, ಇತ್ಯಾದಿಗಳಿಂದಾಗಿ ಗುಣಾತ್ಮಕ ವ್ಯಕ್ತಿತ್ವವು ಅರಿವಿಗೆ ಬಂದರೂ, ತಂದೆಯ ಬಗ್ಗೆ ಉದಾತ್ತವಾದ. ಪ್ರಶಂಸಾತ್ಮಕ ಮಾತುಗಳು ಕೇಳಿ ಬಂದರೂ, ಅವುಗಳನ್ನು ಒಪ್ಪಿಕೊಳ್ಳಲು ಮಾಧವನ ಮನಸ್ಸು ಸಿದ್ಧವಾಗುವುದಿಲ್ಲ. ದುರ್ನಡತೆ, ಸ್ವಾರ್ಥ, ವಂಚನೆ, ಮೋಸ, ಇತ್ಯಾದಿಗಳಿಂದ ಕಳಂಕಿತವಾದ ತಂದೆಯ ಚಿತ್ರವೇ ಅವನ ಮನಸ್ಸಿನಲ್ಲಿ ಬೇರೂರಿರುವುದರಿಂದ, ಎಂದಿಗೂ ತನ್ನ ತಂದೆಯನ್ನು ಕ್ಷಮಿಸುವ ಸ್ಥಿತಿಗೆ ಬರುವುದೇ ಇಲ್ಲ. "ತನ್ನ ತಂದೆಯವರ ಹಿರಿಮೆ–ಹೆಗ್ಗಳಿಕೆ–ಹೆಸರುಗಳೆಲ್ಲವೂ ತಿಪ್ಪೆಯಲ್ಲಿ ಬೆಳೆದ ಹೂವು; ಗೋರಿಯಲ್ಲಿ ಬೆಳೆದ ಗುಲಾಬಿ----- ಅದರಿಂದ ಸಹಾಯ ಪಡೆದವರು ಅವರ ಪುಣ್ಯದ ಗೋಪುರ ಕಟ್ಟಿದರು; ಆದರೆ ಅಪಹಾರ–ಆತ್ಮಹತ್ಯೆಗಳ ಪಾಪ ಆ ಪುಣ್ಯದ ಗೋಪುರವನ್ನು ನೆಲಕ್ಕುರುಳಿಸಿತು", – ಎಂದು ಕೊಳ್ಳುತ್ತಾನೆ, ಅವನಿಗೆ ತಂದೆಯ ಬಾಳು ಹಾಳಾದ ರೀತಿಯಷ್ಟೇ ನೆನಪಿನಲ್ಲಿ ಉಳಿದಿತ್ತು. ಇಂಥ ನೆನಪುಗಳನ್ನು ಕಳಚಿಕೊಂಡು ದೂರದ ಬೊಂಬಾಯಿಯಲ್ಲಿ ಗೆಳೆಯ ಶ್ರೀಧರನ ನೆರವು ಪಡೆದು ಬಾಳೋಣವೆಂದು ಹೋದರೆ ಅಲ್ಲಿಯೂ ತಂದೆಯ ಹೆಸರು ಧುತ್ತೆಂದು ಅಪ್ಪಳಿಸುತ್ತದೆ, 'ಬಿಟ್ಟೆನೆಂದರೆ ಬಿಡದೀಮಾಯೆ' ಎಂಬಂತೆ, ತಾನು ದೂರಾಗಬಯಸಿದಷ್ಟು ಅದು ಅವನ ಬೆನ್ನತ್ತಿ ಬರುತ್ತಿತ್ತು, ಶ್ರೀಧರನಿಂದಲೂ "ನಿನ್ನ ಹೆಸರು ಹೇಳಿದ ಕೂಡಲೇ ಆತ ಸಹಾಯ ಮಾಡಿಯೇ ಮಾಡುತ್ತಾನೆ.......ಇಲ್ಲಿಯ ಇಂಡಿಯನ್ ಬ್ಯಾಂಕಿನ ಡೈರಕ್ಟರ್ ದೇಶ ಪಾಂಡೆಯವರು ನಿನ್ನ ತಂದೆಯ ಪರಮ ಸ್ನೇಹಿತರು..... ಅಂಥವರ ಮಗನೆಂದು ನೀನು ಕೆಲಸಕ್ಕೆ ಹೋದರೆ ಇಲ್ಲ ಎಂದು ಹೇಳುತ್ತಾರೆಯೇ?" –ಎಂಬ ಮಾತುಗಳು ಅವನನ್ನು ದಿಗ್ಭ್ರಮೆಗೊಳಿಸುತ್ತದೆ. ತಂದೆಯ ರಕ್ಷೆ, ಶಿಫಾರಸುಗಳಿಲ್ಲದೆ ತಾನು ಬದುಕಲಾರೆನೇ ಎಂಬ ಸಂದೇಹಕ್ಕೆ ಒಳಗಾಗುತ್ತಾನೆ. ಕಕ್ಕ ಬೈಯ್ಯುವಾಗಲೂ "ಎಷ್ಟಾದರೂ ನಿನ್ನ ಅಪ್ಪನ ಮಗ ನೀನು' ಎಂದೋ, ಹೊಗಳುವಾಗಲೂ 'ಅಂಥವರ ಮಗ ನೀನು' ಎಂದೋ ಅಪ್ಪನ ಹೆಸರನ್ನು ತಾರದೆ ಮಾತಾಡಿದ್ದೇ ಇಲ್ಲವೆಂಬ ನೆನಪೂ ಅವನಲ್ಲಿ ಕಿರಿಕಿರಿ ಉಂಟುಮಾಡುತ್ತದೆ.

ಸರೋಜಿನಿಯೂ ಇನ್ನು ಮುಂದೆಂದೂ ತನ್ನ ತಾಯಿಯ ವೃತ್ತಿ ಪುನರಾವರ್ತನೆಯಾಗದಂತೆ ನೋಡಿಕೊಳ್ಳಬೇಕೆಂದು ಕೊಳ್ಳುತ್ತಾಳಾದರೂ ತಾಯಿ ತನ್ನ ವೃತ್ತಿಯನ್ನೇ ಮಗಳು ಮುಂದುವರೆಸಬೇಕೆಂದೂ. ಆ ದಾರಿ ಬಿಟ್ಟರೆ ಬದುಕಲು ಸಾಧ್ಯವೇ ಇಲ್ಲವೆಂದೂ ನಂಬಿ ಮಗಳನ್ನು, ತನ್ನದೇ ವೃತ್ತಿಯಲ್ಲಿ ಮುಂದುವರೆಸಬೇಕೆಂದು ಬಯಸುತ್ತಾಳೆ. ತಾಯಿ ರಂಗಸಾನಿ, ನಂಬಿಕೊಂಡು ಬಂದ ಗೋವಿಂದೇಗೌಡನಿಗೆ ತನ್ನಿಂದ ಈಗ ರುಗ್ಣಾವಸ್ಥೆ ಸ್ಥಿತಿಯಲ್ಲಿ ಯಾವ

ಸುಖವನ್ನೂ ಕೊಡಲಾಗದಿದ್ದರೂ, ಮುಂದೆ ಅವಳ ಮಗಳು ಆ ಕೊರತೆಯನ್ನು ಪೂರೈಸುತ್ತಾಳೆಂಬ ಸ್ವಾರ್ಥದ ಕಲ್ಪನೆಯಲ್ಲಿ ರಂಗಸಾನಿಯ ಅಸಹಾಯಕ ಸ್ಥಿತಿಯಲ್ಲಿ ಅವಳಿಗೆ ಅವನು ನೆರವಾಗುತ್ತಾನೆ. ರಂಗಸಾನಿಯ ಕಾಯಿಲೆಗೆ ಚಿಕಿತ್ಸೆ ಕೊಡಿಸಲು ಮುಂಬಯಿಗೂ ಬರುತ್ತಾನೆ; ಸಹಾನುಭೂತಿಯ ಸೋಗಿನಲ್ಲಿ ಸಹಾಯ ಮಾಡುತ್ತಲೇ ಸರೋಜಿನಿಯನ್ನು ಬಲೆಗೆ ಬೀಳಿಸಿಕೊಳ್ಳಲು ಅನೇಕ ಷಡ್ಯಂತರಗಳನ್ನು ಹೂಡುತ್ತಾನೆ. ತಾಯಿಯನ್ನು ನೋಡಿಕೊಳ್ಳಲು ಉಳಿದುಕೊಂಡ ಸರೋಜಿನಿಯನ್ನು ಅವಕಾಶ ನೋಡಿ ಬಳಸಿಕೊಳ್ಳುತ್ತಾನೆ; ಈ ಹಲ್ಲೆ, ಲೈಂಗಿಕ ಆಕ್ರಮಣ ಅನಿರೀಕ್ಷಿತವೇ ಆದರೂ ತಾಯಿ ತನ್ನನ್ನು ವೇಶ್ಯಾವೃತ್ತಿಯಲ್ಲಿಯೇ ಮುಂದುವರೆಸಬೇಕೆಂದು ಬಯಸಿದ್ದಕ್ಕೆ, ಇದು ಅವಳ ಇಚ್ಛೆಗೆ ಪೂರಕವೂ ಆಗುತ್ತದೆ, ಅನಿವಾರ್ಯವೂ ಆಗುತ್ತದೆ. ತಾಯಿಯ ಬಗ್ಗೆ ಅಸಹನೀಯವಾದ ಸಿಟ್ಟು ಬಂದರೂ ಏನೂ ಮಾಡದವಳಾಗುತ್ತಾಳೆ. ಕಡೆಗೂ ಗೋವಿಂದೇಗೌಡನ ಬಲೆಯಲ್ಲಿ ಸಿಲುಕಿ ಬದುಕುವುದಲ್ಲದೆ ಬೇರೆ ದಾರಿ ಕಾಣದಾಗುತ್ತದೆ. ಅಷ್ಟೇ ಅಲ್ಲ ವೈದ್ಯರ ತಪಾಸಣೆಯಿಂದ ಹೊರಬಿದ್ದ ಸತ್ಯಾಂಶ ಸರೋಜಿನಿಯ ಎಲ್ಲ ಭವಿಷ್ಯದ ಕನಸುಗಳನ್ನು ಒಮ್ಮೆಲೇ ಹೊಸಕಿ ಹಾಕಿಬಿಡುತ್ತದೆ. ತಾಯಿಯ ಶಾಪ ಮಗಳಿಗೂ ತಟ್ಟಿದೆ. ಅವಳ ರೋಗ ಮಗಳಿಗೂ ಇಳಿದು ರಕ್ತವನ್ನು ವಿಷಮಯವಾಗಿಸಿದೆ. ಇದೊಂದು ವಿಧಿಯ ವಿಚಿತ್ರವ್ಯಂಗ್ಯವೇ ಆಗುತ್ತದೆ. ಹೊರಬದುಕಿನಲ್ಲಿ ಪ್ರತಿಭಟಿಸಿಯಾದರೂ ಸಮಸ್ಯೆಯನ್ನು ಪರಿಹರಿಸಿಕೊಳ್ಳಬಹುದಾದ ಸಾಧ್ಯತೆ ಇರುತ್ತದೆ. ಆದರೆ ಶಾಪವಾಗಿ, ಅಂತರ್ಗತವಾಗಿ, ಅನುವಂಶಿಕವಾಗಿ ಹರಿದು ಬಂದ ರೋಗದ ಉತ್ತರಾಧಿಕಾರವನ್ನು ತಪ್ಪಿಸುವುದಾದರೂ ಹೇಗೆ? ಪರಂಪರೆಯ ವಿರುದ್ಧ; ಸಮಾಜದ ಕಟ್ಟು ಕಟ್ಟಳೆಯ ವಿರುದ್ಧ ಸೆಣಸಾಡಿ ತನ್ನ ಸಹಪಾಠಿ ಮಾಧವನ ಮತ್ತು ತನ್ನ ಪ್ರೀತಿಯ ಸೆಳೆತವನ್ನು ದಾಂಪತ್ಯವಾಗಿ ಬದಲಾಯಿಸಿ ಬದುಕಬೇಕೆಂಬ ಛಲವೂ ಕೂಡ ವಿಧಿಯ ಕ್ರೂರ ವ್ಯಂಗ್ಯಕ್ಕೆ ಗುರಿಯಾಗುತ್ತದೆ. ಸರೋಜಿನಿ ಬೇರೆ ಯಾರೋ ಆಗಿರದೆ ರಂಗಸಾನಿಗೆ ತನ್ನ ತಂದೆಯಿಂದಲೇ ಹುಟ್ಟಿದ ಮಗಳಾಗಿರುತ್ತಾಳೆ. ತನ್ನ ತಂದೆಯಿಂದ ಏನೊಂದೂ ಬೇಡವೆಂದುಕೊಂಡವನ ಪಾಲಿಗೆ ಉಳಿಯುವುದು, ತಂದೆಯೇ ರಂಗಸಾನಿಗೆ ಕೊಟ್ಟಿದ್ದ ಆಸ್ತಿಯ ತುಣುಕು ಮಾತ್ರ, ಆದರೆ ಮಾಧವ ರಂಗಸಾನಿ, ಸರೋಜಿನಿಯರ ಅಸಹಾಯಕ ಬದುಕಿಗೆ ಒಂದು ದಾರಿಯಾಗಲೆಂದು, ತನ್ನ ರಕ್ತವನ್ನೇ ಹಂಚಿಕೊಂಡು ಹುಟ್ಟಿದ ತಂಗಿಗೆ ಕೊಟ್ಟ; ತಂದೆಯ ಆಸ್ತಿಯಿಂದಲೂ ಬಿಡುಗಡೆ ಹೊಂದುತ್ತಾನೆ.

ಭೂತ ಭೂತವಾಗಿಯೇ ಕಾಡಿ, ಕರಿನೆರಳಾಗಿ ಕವಿದು. ಮನುಷ್ಯರ ಭವಿಷ್ಯವನ್ನು ತನ್ನ ಕೌರ್ಯದೊಂದಿಗೆ ಹೊಸಕಿ, ಅಸಹಾಯಕ ಸ್ಥಿತಿಗೆ ದೂಡುವ

ಸಂಕೀರ್ಣ ಕಥಾನಕವನ್ನು ಕಥೆ ಪಡೆಯುವ ಅನಿರೀಕ್ಷಿತ ತಿರುವುಗಳಿಂದ ಅತ್ಯಂತ ಸಮರ್ಥವಾಗಿ ಕಟ್ಟಿ ಕೊಡುವುದರ ಮೂಲಕ ಇನಾಂದಾರರು ಕಾದಂಬರಿಯನ್ನು ಜನರ ಮೆಚ್ಚುಗೆಗೆ ಒಳಗಾಗಿಸಿದ್ದಾರೆ.

**ಸ್ವರ್ಗದ ಬಾಗಿಲು :** ೧೯೫೧ರಲ್ಲಿ ಪ್ರಕಟವಾದ ಈ ಕಾದಂಬರಿಯೂ ೩-೪ ಮುದ್ರಣಗಳನ್ನು ಕಂಡಿದೆ. ತಮ್ಮ ಇತರೆ ಕಾದಂಬರಿಗಳಲ್ಲಿ ಕಾಣಿಸಿರುವಂತೆ ವಿವಾಹಿತ ಹೆಣ್ಣುಗಳ ಮಾನಸಿಕ ತುಮುಲಗಳು, ವಿವಾಹಪೂರ್ವದ ಪ್ರೀತಿಯ ಸಂಬಂಧಗಳು- ವಿವಾಹಾನಂತರದಲ್ಲಿನ ಸಮಸ್ಯೆಗಳು - ರೂಢಿಗತ ಪರಂಪರೆಯಿಂದ ಎದುರಾಗುವ ಸಮಸ್ಯೆಗಳು - ಇವುಗಳಿಂದ ಉಂಟಾಗುವ ನೈತಿಕ-ಸಾಮಾಜಿಕ-ಕೌಟುಂಬಿಕ ಸಮಸ್ಯೆಗಳು ಎಲ್ಲವೂಗಳಂತೆ ಇಲ್ಲಿಯೂ ಚಿತ್ರಣಗೊಂಡಿವೆ.

ವಿವಾಹಿತ ಹಿಂದೂ ಬ್ರಾಹ್ಮಣ ಕುಟುಂಬದಲ್ಲಿ, ಮಕ್ಕಾಳಾಗದ ಕಾರಣಕ್ಕಾಗಿ ಆ ಹೆಣ್ಣು ಅನುಭವಿಸುವ ಯಾತನೆ, ಜೊತೆಗೆ ಮಕ್ಕಳಾಗಲಿಲ್ಲದ್ದಕ್ಕಾಗಿ ಸೊಸೆಯ ಬಂಜೆತನದ ಬಗ್ಗೆ ಕಟಕಿಯಾಡುವ ಅತ್ತೆ, ಕಡೆಗೆ ಮತ್ತೊಂದು ಮದುವೆಗೆ ದೂಡುವ ಸ್ವಭಾವ, ಮಕ್ಕಳಾಗದೆ ಮುಕ್ತಿಯಿಲ್ಲ, ಸ್ವರ್ಗದ ಬಾಗಿಲು ತೆರೆಯುವುದಿಲ್ಲ ಎಂಬ ರೂಢಿಗತ ನಂಬಿಕೆ- ಇವೆಲ್ಲವುಗಳ ಸುತ್ತ ಕಥೆಯನ್ನು ಹೆಣೆಯಲಾಗಿದೆ.

ಕಾದಂಬರಿಯ ಕೇಂದ್ರ ಪಾತ್ರ ಅಥವಾ ನಾಯಕಿ ಬಾಲ್ಯದಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡು ಅನಾಥಳಾಗುತ್ತಾಳೆ. ಆದರೆ ಅವರಿವರ ದಯೆ. ದಾಕ್ಷಿಣ್ಯಗಳಿಂದ ಬೆಳೆದು ದೊಡ್ಡವಳಾಗುವುದರ ಜೊತೆಗೆ ಒಂದಿಷ್ಟು ಶಿಕ್ಷಣವನ್ನೂ ಪಡೆದಿರುತ್ತಾಳೆ. ಈ ಹೆಣ್ಣು ಬಾಗಲಕೋಟೆಯ ಬಡ ಬ್ರಾಹ್ಮಣನ ಮಗ ಶ್ರೀನಿವಾಸನನ್ನು ಮದುವೆಯಾಗುತ್ತಾಳೆ. ಆರ್ಥಿಕವಾಗಿ ಬಡ ಮಧ್ಯಮ ವರ್ಗದವರಾದ್ದರಿಂದ ಶ್ರೀನಿವಾಸ ಟಪಾಲು ಇಲಾಖೆಯಲ್ಲಿ ಕಾರಕೂನನಾಗಿ ಕೆಲಸ ಮಾಡಬೇಕಾಗುತ್ತದೆ; ಆಗಾಗ ಸ್ಥಳಾಂತರವಾಗುವ ಉದ್ಯೋಗವಾದ್ದರಿಂದ ಹೆಂಡತಿಯನ್ನು ತಾಯಿಯ ಸುಪರ್ದಿಯಲ್ಲಿ ಬಿಟ್ಟು ಒಂಟಿಯಾಗಿ ಸಂಸಾರ ಮಾಡುತ್ತಾನೆ ಕಡೆಗೆ ಕಾಯಂಆಗಿ ಬೆಳಗಾವಿಗೆ ಸ್ಥಳಾಂತರವಾಗಲು, ತಾಯಿ ಹೆಂಡತಿ ಇಬ್ಬರನ್ನೂ ಕರೆಸಿಕೊಳ್ಳುವ ಯೋಚನೆ ಮಾಡುತ್ತಾನೆ. ಆದರೆ ತಾಯಿ ಸ್ವಂತ ಮನೆ, ಊರು ಬಿಟ್ಟು ಬರಲು ನಿರಾಕರಿಸಿದ್ದರಿಂದ ಹೆಂಡತಿಯನ್ನು ಮಾತ್ರವೇ ಕರೆದೊಯ್ಯಬೇಕೆಂದು ನಿರ್ಧರಿಸುತ್ತಾನೆ. ಮನೆ ಹುಡುಕಾಟದಿಂದ ಕಾಲ ವಿಳಂಬವಾಗುತ್ತದೆ.

ಕಾವೇರಿಯ ಅತ್ತೆ ಸ್ವಭಾವದಿಂದ ಕೆಟ್ಟವಳಲ್ಲವಾದರೂ ಅತ್ತೆಯೆನಿಸಿ ಕೊಂಡವಳು ಸೊಸೆಯ ಮೇಲೆ ಅಧಿಕಾರ ಚಲಾಯಿಸಿ ಏನಾದರೂ ನೆಪದಲ್ಲಿ

ಹಿಂಸೆ ಕೊಡುವುದು ಆ ಕಾಲದ ಪ್ರಚಲಿತ ರೂಢಿಯೆಂಬಂತೆ ತಾನೂ ಅದನ್ನು ಮುಂದುವರೆಸುತ್ತಾಳೆ. ಸೊಸೆಗೆ ಇನ್ನೂ ಮಕ್ಕಳಾಗಲಿಲ್ಲ ವೆಂಬುದು, ಸೊಸೆಯ ಮೇಲೆ ಪ್ರಬಲ ಅಸ್ತ್ರವಾಗಿ ಪ್ರಯೋಗಿಸುತ್ತಾಳೆ. ಅತ್ತೆಯ ಹಿಂಸೆಯ ಜೊತೆಗೆ, ತನಗೂ ಮಕ್ಕಳಿಲ್ಲವೆಂಬ ಕೊರಗು ಕಾಡುತ್ತಿರುತ್ತದೆ. ಓದಿದ್ದರೂ ಮಕ್ಕಳಿಲ್ಲದಿದ್ದರೆ ತಾಯ್ತನದ ಸಾರ್ಥಕತೆ ಸಾಧ್ಯವಿಲ್ಲವೆಂಬುದನ್ನೇ ಎಲ್ಲರಂತೆ ನಂಬಿದ್ದಳು. ಅಲ್ಲದೆ ಮಕ್ಕಳೇ ತಾಯಿ ತಂದೆಗಳಿಗೆ 'ಸ್ವರ್ಗದ ಬಾಗಿಲು' ಎಂಬ ನಂಬಿಕೆ ಅವಳ ಕೊರಗನ್ನು ಮತ್ತಷ್ಟು ಹೆಚ್ಚಿಸುತ್ತದೆ: ಮಕ್ಕಳಿಲ್ಲದ ವಿಚಾರ ಕಾವೇರಿಗೆ ಮತ್ತು ಅತ್ತೆಯಾದ ಭಾಗ್ಯಮ್ಮನಿಗೆ ಸಮಸ್ಯೆಯಾಗಿ ಕಾಡಿತೇ ಹೊರತು ಶ್ರೀನಿವಾಸ ಇದರ ಬಗ್ಗೆ ಅಷ್ಟಾಗಿ ತಲೆ ಕೆಡಿಸಿಕೊಳ್ಳಲಿಲ್ಲ; ಆದ್ದರಿಂದ ಅವನು ಆಗೊಮ್ಮೆ ಈಗೊಮ್ಮೆ ಬಂದಾಗಲೆಲ್ಲ ತನ್ನಿಂದ ಎಷ್ಟು ಸಾಧ್ಯವೋ ಅಷ್ಟು ರೀತಿಯಲ್ಲಿ ಹೆಂಡತಿಯನ್ನು ರಮಿಸಿ ಸಂತೋಷ ಪಡಿಸಲು ಪ್ರಯತ್ನಿಸುತ್ತಾನೆ. ಆದರೆ ಈ ಬಗೆಯ ಸುಖ, ಸಂತೋಷ ಕೇವಲ ಕ್ಷಣಿಕವಾದ್ದು ಎಂಬುದು ಅವಳ ಭಾವನೆ.

ತನಗೆ ಮಕ್ಕಳಿಲ್ಲದ ಕೊರತೆಯನ್ನು, ಕೊರಗನ್ನು ತನ್ನ ಗೆಳತಿಯ ಮಗುವಿನ ಮೇಲೆ ಧಾರಾಳವಾಗಿ ಪ್ರೀತಿ ಹರಿಸಿ ನಿವಾರಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಆದರೆ ಪ್ರೀತಿ ಮಿತಿಮೀರಿ, ಅಗತ್ಯಕ್ಕಿಂತ ಹೆಚ್ಚಾಗಿ, ತನ್ನ ಈ ಅನನ್ಯ ಅದಮ್ಯ ಪ್ರೀತಿಯ ದ್ಯೋತಕವಾಗಿ ಒಂದು ಜೊತೆ ಚಿನ್ನದ ಬಳೆ ಮಾಡಿಸಿಕೊಡುವ ಮಟ್ಟಕ್ಕೆ ಹೋದಾಗ ಮನೆಯಲ್ಲಿ ದೊಡ್ಡ ರಾದ್ಧಾಂತ ನಡೆದು ಹೋಗುತ್ತದೆ. ಮನೆಯಲ್ಲಿ ಮಹಾಪ್ರಳಯಕ್ಕೆ ದಾರಿಯಾಗುತ್ತದೆ. ಶ್ರೀನಿವಾಸ ತಾಯಿಯನ್ನು ಬಿಡಲಾಗದ, ಹೆಂಡತಿಯನ್ನು ಬಿಡಲಾಗದ ಸಂದಿಗ್ಧದಲ್ಲಿ ಸಿಲುಕಿ ನರಳುವಂತಾಗುತ್ತದೆ. ಕಡೆಗೆ ಅಯಾಚಿತವಾಗಿ ಪರಿಹಾರವೆಂಬಂತೆ, ಬೆಳಗಾವಿಯಲ್ಲಿ ಬಾಡಿಗೆಗೆ ಮನೆ ದೊರೆತು ಕಾವೇರಿಯೊಂದಿಗೆ ಸಂಸಾರ ಹೂಡುತ್ತಾನೆ. ಕಾವೇರಿಗೆ ಇದರಿಂದ ಅತ್ತೆಯ ಕಾಟದಿಂದ ಬಿಡುಗಡೆ ದೊರೆಯಿತೇ ಹೊರತು, ಮಕ್ಕಳಿಲ್ಲದ ಕೊರಗು ಮಾಯವಾಗುವುದಕ್ಕೆ ಬದಲಾಗಿ ಮತ್ತಷ್ಟು ಉಲ್ಬಣಿಸುತ್ತದೆ. ಕೆಲಸದಿಂದಾಗಿ ಗಂಡನ ಸಾಂಗತ್ಯವೂ ಸಿಗದೆ, ಗೆಳತಿಯ ಮಗುವಿನ ಆಟಪಾಟಗಳೂ ಇಲ್ಲದೆ, ಬೆಳಗಿನಿಂದ ರಾತ್ರಿಯ ತನಕ ಕಳೆಯಬೇಕಾಗಿ ಬರುತ್ತಿದ್ದ ಒಂಟಿತನ ಮಕ್ಕಳ ಹಂಬಲವನ್ನು ಮತ್ತಷ್ಟು ತೀವ್ರಗೊಳಿಸಿ, ಬುದ್ಧಿ ಭ್ರಮಣೆಯ ಸ್ಥಿತಿಯನ್ನು ತಲುಪುತ್ತಾಳೆ, ಬೊಂಬೆಯನ್ನೇ ಮಗುವೆಂದು ಭಾವಿಸಿ, ಕಲ್ಪನಾಲೋಕದಲ್ಲಿ, ಮೈಮರೆವಿನೊಂದಿಗೆ ಪೂರ್ತಿಯಾಗಿ ಮುಳುಗಿ ಹೋಗುತ್ತಾಳೆ. ಮೊದಲಿಗೆ ಶ್ರೀನಿವಾಸನಿಗೆ ಅವಳ ಈ ವರ್ತನೆ ಹುಚ್ಚಾಟವೆಂದು ತೋರಿದರೂ ನಂತರ ಸಮಸ್ಯೆಯ ಗಂಭೀರತೆಯನ್ನು ಅರಿಯುತ್ತಾನೆ. ಅವಳನ್ನು ಆ ಭ್ರಮಾಲೋಕದಿಂದ ಮರಳಿಸಲು ಮಾಡುವ ಪ್ರಯತ್ನವೂ ವಿಫಲವಾಗುತ್ತದೆ. ಶ್ರೀನಿವಾಸದ ಸಹನೆಯ ಕಟ್ಟೆಯೊಡೆಯುತ್ತದೆ. ಕಾವೇರಿಯ ಜೊತೆಗಿನ ದಾಂಪತ್ಯದ

ಬಗ್ಗೆ ವಿರಸನಗೊಂಡು ತಾಯಿಯ ಸಲಹೆಯಂತೆ ಎರಡನೆ ಮದುವೆಗೆ ಸಮ್ಮತಿಸುತ್ತಾನೆ. ನೆರೆಮನೆಯ ಗಯ್ಯಾಳಿ ಲಕ್ಷ್ಮೀಬಾಯಿಯ ಮಗಳು ಸುಮಿತ್ರೆಯಿಂದ ಆಕರ್ಷಿತನಾಗುತ್ತಾನೆ. ಕಾವೇರಿಗೆ ಗೆಳತಿಯಿಂದ ಈ ವಿಷಯು ತಿಳಿಯುತ್ತದೆಯಾದರೂ ಯಾವುದೇ ರೀತಿಯಲ್ಲಿ ಗಂಡನ ಮರುಮದುವೆಯ ವಿಚಾರಕ್ಕೆ ವಿರೋಧ ವ್ಯಕ್ತ ಪಡಿಸುವುದಿಲ್ಲ. ಸ್ವರ್ಗದ ಬಾಗಿಲು ತೆರೆಸಲು ಬೇಕಾದ ಮಕ್ಕಳನ್ನು ಕೊಡಲು ತನಗೆ ಸಾಧ್ಯವಿಲ್ಲವೆಂದ ಮೇಲೆ ಮದುವೆಗೆ ಅಡ್ಡಿ ಮಾಡುವುದರಲ್ಲಿ ಅರ್ಥವಿಲ್ಲವೆಂದು ಸುಮ್ಮನಾಗುತ್ತಾಳೆ. ಅಷ್ಟೇ ಅಲ್ಲ ಮುಂದೆಂದೂ ತಾನು ಅವರಿಬ್ಬರ ದಾಂಪತ್ಯಕ್ಕೆ ಮುಳ್ಳಾಗಬಾರದೆಂದೋ ಏನೋ ಆತ್ಮಹತ್ಯೆಗೆ ಮುಂದಾಗುತ್ತಾಳೆ. ಕಡೆಯಲ್ಲಿ ವೈದ್ಯರ ಪರೀಕ್ಷೆಗೆ ಒಳಪಡಿಸಿದಾಗ ಅವಳು ಎರಡು ತಿಂಗಳ ಗರ್ಭಿಣಿ ಎಂದು ವೈದ್ಯರು ಖಚಿತ ಪಡಿಸುತ್ತಾರೆ. ಆದರೆ ಅಷ್ಟು ಹೊತ್ತಿಗೆ ಅನಿರೀಕ್ಷಿತ ದುರಂತ ಸಂಭವಿಸಿಬಿಟ್ಟಿರುತ್ತದೆ. ಕಾವೇರಿಯ ಈ ದುರಂತಕ್ಕೆ ಪಾರಂಪರಿಕ ಸಾಮಾಜಿಕ ಒತ್ತಡಗಳು ಸ್ವಲ್ಪ ಮಟ್ಟಿಗೆ ಕಾರಣವಾದರೆ. ಅವಳ ಸ್ವಭಾವ, ದುರ್ಬಲ ಮನಸ್ಸು, ವಿವೇಚನೆಯಿಲ್ಲದ ದುಡುಕುತನ, ತಾಳ್ಮೆಯ ಕೊರತೆ ಮುಂತಾದವುಗಳೇ ಹೆಚ್ಚಿನ ಕಾರಣವಾಗುತ್ತವೆ. ಕಥಾನಕ ಯಾವುದೇ ಕ್ಲೀಷೆಗಳಿಲ್ಲದೆ ನೇರವಾಗಿ, ಸಲೀಸಾಗಿ ಓದಿಸಿಕೊಂಡು ಹೋಗುತ್ತದೆ. ವೈಚಾರಿಕತೆಗಿಂತ ಹೆಚ್ಚಾಗಿ ಆ ಕಾಲಘಟ್ಟದ ಸಾಮಾಜಿಕ, ಸಾಂಪ್ರದಾಯಕ ಒತ್ತಡಗಳು ಹೆಣ್ಣಿನ ಬಗೆಗಿನ ನಿರೀಕ್ಷೆಗಳ ಚಿತ್ರಣದ ಕಡೆಗೆ ಲೇಖಕರ ದೃಷ್ಟಿ ಕೇಂದ್ರೀಕೃತವಾಗಿದೆ.

ಈ ಕಾದಂಬರಿಯಲ್ಲಿ (೧೯೬೬ ಆವೃತ್ತಿ) ಮೊದಲ ಆವೃತ್ತಿಗಾಗಿ ಬರೆದದ್ದನ್ನು ಹಿನ್ನುಡಿಯಾಗಿ ಕೊಟ್ಟಿರುವ ಬರಹದಲ್ಲಿ ಈ ಕಾದಂಬರಿಯ ವಸ್ತುವಿನ ಆಯ್ಕೆಯ ಹಿನ್ನೆಲೆಯನ್ನು ಪ್ರಸ್ತಾಪಿಸಿದ್ದಾರೆ. "ಸುಮಾರು ಎಂಟು ವರ್ಷಗಳ ಹಿಂದೆ ವಿಮರ್ಶೆಗೆಂದು ಬಂದ ಒಂದು ಬಂಗಾಲೀ ಕಥಾ ಸಂಗ್ರಹವನ್ನು ಓದುತ್ತಿದ್ದಾಗ ಆ ಕಥಾಸಂಗ್ರಹದಲ್ಲಿಯ ಒಂದು ಕತೆ ನನ್ನ ಮನಸ್ಸನ್ನು ಸೆಳೆಯಿತು. ಒಂದು ಕತೆ ಮನಸ್ಸನ್ನು ಸೆಳೆಯಿತು ಎನ್ನುವುದಕ್ಕಿಂತ ಒಂದು ಕತೆಯಲ್ಲಿ ನಿರೂಪಿತವಾದ ವಿಷಯ ಮತ್ತು ಜೀವನ ಸನ್ನಿವೇಶ ನನ್ನ ಮನಸ್ಸನ್ನು ಸೆಳೆಯಿತೆಂದರೆ ಹೆಚ್ಚು ಸಮಂಜಸವಾದೀತು ಯಾಕೆಂದರೆ ಆ ಕತೆಯನ್ನು ಓದಿ ಮುಗಿಸಿದಾಗ ಆ ಕತೆಯಲ್ಲಿಯ ಸನ್ನಿವೇಶ ನನ್ನ ಮನಸ್ಸನ್ನು ಮುಟ್ಟಿದರೂ ಅದನ್ನು ನಿರೂಪಿಸಲಾಗದ ಬಗೆ ಮಾತ್ರ ನನ್ನನ್ನು ನಿರಾಶೆಗೊಳಿಸಿತ್ತು, ಹಾಗಂತಲೇ ಅದೇ ಸನ್ನಿವೇಶವನ್ನು ಬೇರೆ ರೀತಿಯಲ್ಲಿ ವಿವರಿಸಲು ಸಾಧ್ಯವೇ? ಸಾಧ್ಯವಿದ್ದರೆ ಯಾವ ರೀತಿಯಲ್ಲಿ ಎಂದು ಮುಂತಾಗಿ ಯೋಚಿಸಿದಾಗ ಅಲ್ಲಿಯ ಸನ್ನಿವೇಶವನ್ನು ಬಳಸಿ ಒಂದು ಚಿಕ್ಕ ಕಾದಂಬರಿಯನ್ನು ಬರೆಯಬಹುದು –ಎಂದು ತೋರಿದಾಗ,

ಹೆಚ್ಚು ಕಡಿಮೆ ಅದೇ ಕತೆಯನ್ನು ಇಲ್ಲಿನ ಪರಿಸರ, ಪಾತ್ರಗಳಲ್ಲಿ ವಿಸ್ತರಿಸಿ ಬರೆದಿರುವುದರಿಂದ ಈ ಕಾದಂಬರಿಯಲ್ಲಿ ಕಾಣುವ ಕೆಲವು ವಿಸಂಗತಿಗಳಿಗೆ ಮೂಲಕತೆಯೇ ಕಾರಣವಿರಬೇಕೆಂಬ ಸಮಾಧಾನ ಸಾಧ್ಯವಾಗುತ್ತದೆ.

## ಈ ಪರಿಯ ಸೊಬಗು

೧೯೫೩ರಲ್ಲಿ ಪ್ರಕಟವಾದ ಈ ಕಾದಂಬರಿ ಇನಾಂದಾರರ ಕಾದಂಬರಿಗಳಲ್ಲಿ ೭ನೆಯದು: ಸದಾ ಎಚ್ಚರದ ಕಣ್ಣು, ಜಾಗೃತ ಪ್ರಜ್ಞೆ ಸಮಾಜದಲ್ಲಿ, ಪ್ರಪಂಚದಲ್ಲಿ ನಡೆಯುವ ಸಾಮಾನ್ಯ ಸಂಗತಿಗಳೂ ಅವರೊಳಗಿನ ಸುಪ್ತ ಸೃಜನಶೀಲತೆಯನ್ನು ಅಭಿವ್ಯಕ್ತಿಗೆ ಒತ್ತಾಯಿಸುತ್ತದೆ. ಎಲ್ಲೋ ನಡೆದ ಒಂದು ಘಟನೆ, ಓದಿದ ಸನ್ನಿವೇಶ, ಚಿಂತನೆಗೆ ತೊಡಗಿಸಿ ಕಲಾಕೃತಿಯಾಗಿ ಹೊಮ್ಮುವಂತೆ ಮಾಡುತ್ತವೆ. ಇದಕ್ಕೆ ಮೊದಲಿನ ಕಾದಂಬರಿ 'ಸ್ವರ್ಗದ ಬಾಗಿಲು,' ಬಂಗಾಲಿ ಸಣ್ಣ ಕತೆಯೊಂದರಿಂದ ಪ್ರೇರಿತವಾದರೆ, ಈ ಕಾದಂಬರಿ ಒಂದು ವೃತ್ತಪತ್ರಿಕೆಯಲ್ಲಿವರದಿಯಾದ ಸಂಗತಿಯಿಂದ ಮೂಡಿಬಂದಿದೆ. ಎಚ್ಚರದ ಕಣ್ಣಿಗೆ ವಿಚಾರವಂತ ಮನಸ್ಸಿಗೆ, ಕೃತಿರಚನೆಗೆ ಬೇಕಾದ ಅಪಾರವಸ್ತುರಾಶಿಯನ್ನು ಪ್ರಪಂಚ ಒದಗಿಸುತ್ತದೆ. ಅಂತೆಯೇ ಆ ವರದಿಯೊಂದರ ಓದುವುದರ ಮೂಲಕ ಕಾದಂಬರಿಯ ರೂಪುರೇಷೆಗಳು ಸಿದ್ಧಗೊಂಡದ್ದನ್ನು ತಮ್ಮ ಈ ಕಾದಂಬರಿಯ 'ಅರಿಕೆ' ಭಾಗದಲ್ಲಿ ವಿವರಿಸಿದ್ದಾರೆ. ಅವರ ಮಾತುಗಳಲ್ಲಿ ಕಾದಂಬರಿಯ ಹಿನ್ನೆಲೆಗೆ ಇರಬಹುದಾದ ತಾತ್ವಿಕ ಆಲೋಚನೆಗಳು ಏನೆಂಬುದು ಸ್ಪಷ್ಟವಾಗುತ್ತದೆ. "ಈ ಕಾದಂಬರಿಯ ಕೊನೆಯಲ್ಲಿ ನಡೆಯುವಂಥ ಒಂದು ಸಂಗತಿ ಎಲ್ಲಿಯೋ ಒಂದೆಡೆ ನಡೆಯಿತೆಂದು ವೃತ್ತ ಪತ್ರದಲ್ಲಿ ಓದಿದ್ದೆ. ಇದು ಹೀಗೇಕೆ ನಡೆಯಿತು, ಹೀಗೇಕೆ ನಡೆಯ ಬೇಕು? ಎಂದು ಮುಂತಾಗಿ ಯೋಚಿಸುತ್ತಿದ್ದಾಗ, ಕಾದಂಬರಿಯ ರೂಪುರೇಷೆ ಮನಸ್ಸಿನೆದುರು ನಿಂತಿತು, ಕೊನೆಯಲ್ಲಿ ಕುತೂಹಲವುಂಟಾಯಿತು, ನನ್ನ ಕುತೂಹಲಕ್ಕೊಂದು ಉತ್ತರವೆಂದು ಸಹಜ ಸಾಧ್ಯವಾದ ಹಿನ್ನೆಲೆಯನ್ನೆಲ್ಲ ಕಲ್ಪಿಸಿಕೊಂಡೆ, ಆದ್ದರಿಂದ ಇಲ್ಲಿ ಹಿನ್ನೆಲೆಯಾಗಿ ನಿಂತ ಒಂದು ವಾತಾವರಣ, ವ್ಯಕ್ತಿಗಳ ಆಸೆ, ಆಕಾಂಕ್ಷೆಗಳು ಕೊನೆಯಲ್ಲಿ ನಡೆಯಲಿದ್ದುದನ್ನು ರೂಪಿಸುವುದರಲ್ಲಿ ನಿರ್ಣಾಯಕವಾದ ಶಕ್ತಿಗಳಾಗಿ ನಿಂತವು ಎಂದು ನಂಬಿ ಹಾಗೆ ಚಿತ್ರಿಸಿದ್ದೇನೆ. ಅದೇ ಒಂದು ಕಥೆ. ಇಂದು ನಡೆಯುವ ಒಂದು ಸಂಗತಿ, ಒಂದು ಸಾಮಾನ್ಯ ದೃಷ್ಟಿಗೆ ಪೂರ್ವಾಪರ ಸಂಬಂಧವಿಲ್ಲದ್ದಾಗಿ, ಅಕಸ್ಮಾತ್ತಾಗಿ ಕಾಣಬಹುದು. ಆದರೆ ಯಾವ ಸಂಗತಿಯೂ ಈ ಪ್ರಪಂಚದಲ್ಲಿ ಅಕಸ್ಮಾತ್ತಾಗಿ ನಡೆಯುವುದಿಲ್ಲ. ಅದಕ್ಕಾಗಿ ಅನುಗಾಲವೂ ಪೂರ್ವಸಿದ್ಧತೆ ನಡೆದಿರುತ್ತದೆ. ನಮ್ಮ ಕಣ್ಣಿಗೆ ಕಾಣದ ಹಾಗೆ, ನಮ್ಮ ಪರಿಮಿತ ಬುದ್ಧಿಗೆ ಗೋಚರಿಸದ ಹಾಗೆ ಈ ಸಿದ್ಧತೆ ಅನಾದಿ ಕಾಲದಿಂದಲೂ

ನಡೆದಿರಬೇಕು; ನಡೆದಿರುತ್ತದೆ. ಕಾರ್ಯಕಾರಣ ಸಂಬಂಧ ಇದ್ದೇ ತೀರಬೇಕು ಎಂದು ಹೇಳಿದ ಇವರ ಸುದೀರ್ಘವಾದ ಮಾತುಗಳಲ್ಲಿ, ಹಿಂದಿನಿಂದಲೂ ನಂಬಿಕೊಂಡು ಬಂದ ವಿಧಿವಾದದ ದರ್ಶನವೇ ಪುನರಾವರ್ತನೆಯಾಗಿದೆ. ಇಂಥ ಒಂದು ತಾತ್ವಿಕ ನಂಬಿಕೆ, ಸೈದ್ಧಾಂತಿಕ ನಿಲುವಿನ ಹಿನ್ನೆಲೆಯಲ್ಲಿ ರೂಪುಗೊಂಡ ಕಾದಂಬರಿಗೆ ತಾರ್ಕಿಕ ವೈಚಾರಿಕ ವಿಶ್ಲೇಷಣೆ, ವಿಮರ್ಶೆಗಳು ಅನಗತ್ಯವೆನಿಸುತ್ತದೆ.

ಪ್ರಕೃತಿಯ ಆರಾಧಕನಾದ ಕಥಾನಾಯಕ ಗೋಪಿ ಮೊದಲು ತನ್ನನ್ನು ಪ್ರೀತಿಸಿದವಳನ್ನು ನಿರಾಕರಿಸಿದರೂ ನಂತರ ಅವಳ ಅಂತರಂಗದ ಸೊಬಗಿಗೆ, ಚೆಲುವಿಗೆ ಮನಸೋತು, ಕೈಹಿಡಿದು ತನ್ನ ಜೀವನ ಸಂಗಾತಿಯಾಗಿ ಸ್ವೀಕರಿಸುತ್ತಾನೆ, ಆದರೆ ವಿಪರ್ಯಾಸವೆಂಬಂತೆ ಪ್ರಕೃತಿಯಾರಾಧಕ, ಪ್ರಕೃತಿಯ ಚೆಲುವು, ಸೊಬಗುಗಳನ್ನು ಗಾಢವಾಗಿ ಆರಾಧಿಸುತ್ತಾ ಮೈ ಮರೆತಿರುವ ಕ್ಷಣಗಳಲ್ಲಿಯೇ ಸಾವಿನ ದುರಂತ ಎದುರಾಗುತ್ತದೆ. ಈ ದುರಂತಕ್ಕೆ ಕಾರಣ ಯಾರು? ಏನು? ಏಕೆ ಎಂಬ ಹಲವು ಪ್ರಶ್ನೆಗಳು ಎದ್ದಾಗ, ಸಿಗುವ ಉತ್ತರ ಒಂದೇ– ವಿಧಿ! ಇದು ಪೂರ್ವನಿಯೋಜಿತ! – ಇದರ ಸಮರ್ಥನೆಯೇ ಕಾದಂಬರಿಯ ಹೂರಣ ಲೇಖಕರು ವಿಧಿವಾದದಲ್ಲಿ ನಂಬಿಕೆ ಇರಿಸಿದವರು. ಅದೇ ಅವರಿಗೆ ಸಮರ್ಥನೀಯ ವೆನಿಸಿರಬೇಕು.

ಶ್ರೀಮಂತ ಗೃಹಸ್ಥ ರಾಘವೇಂದ್ರರಾಯರ ಮಗ ಗೋಪಿಗೆ, ತನ್ನ ಆಶ್ರಯದಲ್ಲಿದ್ದ ವಿಶ್ವನಾಥ ಶಾಸ್ತ್ರಿಗಳ ಮಗಳಾದ ಶಾಂತಳನ್ನು ಕೊಡಬೇಕೆಂಬ ಒತ್ತಾಯದಿಂದ, ಸಂದಿಗಗ್ಧದಲ್ಲಿ ಸಿಲುಕಿದ್ದ ಶಾಸ್ತ್ರಿಗಳು ಏನನ್ನೂ ಉತ್ತರಿಸಲಾಗದ ಅಸಹಾಯಕ ಸ್ಥಿತಿಯಲ್ಲಿರುತ್ತಾರೆ. ತಾನು ಬಡವ, ಅವರ ಆಶ್ರಯದಲ್ಲಿ ಬದುಕುತ್ತಿರುವ ದೀನ ಸ್ಥಿತಿಯಲ್ಲಿರುವ ತಮ್ಮ ಮಗಳನ್ನು ಇಂಥ ಸ್ಥಿತಿವಂತರ ಮಗನಿಗೆ ಕೊಡುವುದಾದರೂ ಹೇಗೆಂಬ ಸಂಕೋಚ ಒಂದು ಕಡೆಯಿದ್ದರೆ, ಗೋಪಿಯ ಜಾತಕದಲ್ಲಿನ ದೋಷವೂ ಮತ್ತೊಂದು ಕಡೆಯಿದ್ದು ಮದುವೆಗೆ ಒಪ್ಪಲು ಹಿಂಜರಿಯುತ್ತಾರೆ. ಆದರೆ ಗೋಪಿ, ಹಿರಿಯರು ಇಷ್ಟಪಟ್ಟು ಮದುವೆ ಮಾಡಲು ಬಯಸಿದ್ದ ಸೋದರ ಮಾವನ ಮಗಳಾದ ವತ್ಸಲೆಯನ್ನು ಅವಳ ಹಾವ–ಭಾವ, ಚೆಲ್ಲು ಚೆಲ್ಲಾಟಗಳಿಂದಾಗಿ, ಇಷ್ಟಪಡದೆ ಶಾಂತಾಳನ್ನೇ ವಿವಾಹ ವಾಗಲು ಹಠ ಹಿಡಿಯುತ್ತಾನೆ. ಮಗನ ಮೇಲಿನ ಪ್ರೀತಿ, ಅವನಿಗಿಷ್ಟವಿಲ್ಲದ್ದನ್ನು ಮಾಡಬಾರದೆಂಬ ನಿಲುವಿನೊಂದಿಗೆ, ಅವನಿಗೆ ಸಂತೋಷ, ಸಮಾಧಾನಗಳು ಸಿಗಲೆಂಬ ಉದ್ದೇಶದಿಂದ ಒಪ್ಪಿ ವಿವಾಹ ಮಾಡುತ್ತಾರೆ.

ರಸಿಕರಾಗಿದ್ದ ರಾಘವೇಂದ್ರರಾಯರೂ ಕೂಡಾ ಮಗನಂತೆ ಪ್ರಕೃತಿ ಸೌಂದರ್ಯ ಪ್ರೇಮಿಗಳೂ ಆರಾಧಕರೂ ಆಗಿದ್ದರಿಂದ 'ರಂಗಧೂಳಿ' ಎಂಬ ಸೌಂದರ್ಯ ಧಾಮವನ್ನು ಅತ್ಯಂತ ಆಸ್ಥೆಯಿಂದ ಸಜ್ಜುಗೊಳಿಸಿ ಮತ್ತಷ್ಟು ರಮಣೀಯವಾಗಿಸುತ್ತಾರೆ. ಗೋಪೀ ದಂಪತಿಗಳೂ ಮದುವೆಯಾದ ಹದಿನಾರು ದಿನಗಳಲ್ಲೇ ಅಲ್ಲಿಗೆ ಹೋಗಿ ತಮ್ಮ ಮಧುಚಂದ್ರವನ್ನು ಕಳೆದು ಬಂದಿರುತ್ತಾರೆ. ಆದರೆ ವಿಧಿಯಾಟವೆಬಂತೆ, ಗೋಪಿ ತನ್ನ ಸೋದರ ಮಾವನ ಮಗಳಾದ ವತ್ಸಲೆಯ ಒತ್ತಾಯಕ್ಕಾಗಿ ಮತ್ತೊಮ್ಮೆ ಕುಟುಂಬದವರೊಂದಿಗೆ ರಂಗಧೂಳಿಗೆ ಬರುತ್ತಾನೆ. ವತ್ಸಲೆ ಆ ಸೊಬಗಿನ ವಾತಾವರಣದ ಅಣು ಅಣುವನ್ನು ಅವಲೋಕಿಸುತ್ತಾ ನಳನಳಿಸುತ್ತಾ ನಿಂತ ಕಮಲದ ಹೂಗಳಿಗಾಗಿ ಆಸೆಪಟ್ಟದ್ದನ್ನು ತಿಳಿದು ಗೋಪಿ, ಆ ಹೂವುಗಳನ್ನು ಕಿತ್ತು ತರಲು, ಈಜಿಕೊಂಡು ಹೋಗುತ್ತಾನೆ. ಹೂ ಕೊಯ್ಯುತ್ತಿದ್ದಂತೆ ಕಮಲದ ಬಳ್ಳಿ ಕಾಲಿಗೆ ತೊಡರಿಕೊಂಡು ಮುಳುಗಿ ಸಾಯುತ್ತಾನೆ.

ಈ ಸಾವಿನ ಸುದ್ದಿ ಪ್ರತಿಯೊಬ್ಬರನ್ನೂ ಒಂದೊಂದು ರೀತಿಯ ದುಃಖದ ಮಡುವಿಗೆ ದೂಡುತ್ತದೆ. ಶಾಂತಾಳ ಬದುಕು ಚಿಗುರೊಡೆಯುತ್ತಿದ್ದಂತೆಯೇ ವಿಧಿಯ ಬೀಸುಗತ್ತಿಗೆ ಬಲಿಯಾಗುತ್ತದೆ. ಗೋಪಿಯಿಲ್ಲದ ಬದುಕು ತನಗೇಕೆಂದು, ಸದ್ದಿಲ್ಲದೆ ಕಣ್ಮರೆಯಾಗುತ್ತಾಳೆ. ಅವಳು ಏನಾದಳೆಂಬ ಸುಳಿವು ಯಾರಿಗೂ ಕಡೆತನಕ ದೊರೆಯುವುದೇ ಇಲ್ಲ.

**ಮುಗಿಯದ ಕತೆ:** ೧೯೫೩ ರಲ್ಲಿ ಮೊದಲ ಆವೃತ್ತಿಯಾಗಿ ಪ್ರಕಟವಾಗಿ ೧೫ ವರ್ಷಗಳ ನಂತರ ೧೯೭೮ ರಲ್ಲಿ ಎರಡನೇ ಆವೃತ್ತಿಯಾಗಿ ಪ್ರಕಟವಾದ ಈ ಕಾದಂಬರಿ, ವಸ್ತು, ತಂತ್ರ, ಶೈಲಿಯ ದೃಷ್ಟಿಯಿಂದ ಉಳಿದ ಕಾದಂಬರಿಗಳಿಗಿಂತ ಭಿನ್ನವಾಗಿದೆ. ವಾಸ್ತವವಾಗಿ ಕಾದಂಬರಿಕಾರನ ಅನುಭವಗಳು, ಆಲೋಚನೆಗಳು, ಸ್ವಗತಗಳು, ಆತನೊಡನೆ ಮಾತಾಡುವ ವ್ಯಕ್ತಿಗಳ ಬದುಕಿನ ಕೆಲವು ನೋಟಗಳು, ಗುಣ ಸ್ವಭಾವಗಳು, ಇತ್ಯಾದಿಗಳೇ ಇಲ್ಲಿನ ವಸ್ತು. ಕಾದಂಬರಿಕಾರ ಅನುಭವಗಳನ್ನೇ ಕಾದಂಬರಿಯಾಗಿಸುತ್ತಾ ಹೋಗುತ್ತಾನೆಯೇ ಹೊರತು ಅದನ್ನು ಪೂರ್ಣಗೊಳಿಸುವುದಿಲ್ಲ, ಯಾಕೆಂದರೆ ಆತನ ಅನುಭವಗಳಿಗೆ ನಿಲುಗಡೆ ಇರುವುದಿಲ್ಲ. ಅದು ಮುಂದುವರೆಯುತ್ತಲೇ ಹೋಗುತ್ತದೆ. ಆದ್ದರಿಂದ ಈ ಕಾದಂಬರಿಯೊಳಗಿನ ಕಾದಂಬರಿಯೂ ಅಪೂರ್ಣ, ಈ ಕಾದಂಬರಿಯೂ ಅಪೂರ್ಣವೇ! ಹೀಗಾಗಿ ಇದೊಂದು ವಿಶಿಷ್ಟವೂ ಮತ್ತು ಪ್ರಯೋಗಶೀಲವೂ ಆದ ರಚನೆಯಾಗಿದೆ. ಇನಾಂದಾರರು ತಮ್ಮ ಪ್ರತಿಯೊಂದು ಕಾದಂಬರಿಯಲ್ಲೂ ಅರಿಕೆಯ, ಅಥವಾ ಪ್ರಸ್ತಾವನೆಯ ಹೆಸರಿನಲ್ಲಿ, ಆಯಾ ಕಾದಂಬರಿಯ ಹಿನ್ನೆಲೆಯ

ಪ್ರೇರಣೆ, ಸೈದ್ಧಾಂತಿಕತೆ ಮತ್ತು ತಾತ್ವಿಕ ನಂಬಿಕೆಗಳ ಬಗ್ಗೆ ಹೇಳಿಕೊಂಡು ಕಾದಂಬರಿಯ ಓದಿಗೆ ಅಚ್ಚುಕಟ್ಟಾದ ವೇದಿಕೆಯೊಂದನ್ನು ಒದಗಿಸುವಂತೆ ಈ ಕಾದಂಬರಿ ಕುರಿತಾಗಿಯೂ ಹೇಳಿದ 'ಎಚ್-ಅರಿಕೆ'ಯ ಮಾತುಗಳನ್ನು ಗಮನಿಸಬಹುದು.

"ಸಾಮಾನ್ಯವಾಗಿ ಅರಿಕೆ ಎಂದು ಬರೆಯುವ ನಾನು ಈ ಸಲ ಎಚ್-ಅರಿಕೆ ಎಂದು ಬರೆದುದಕ್ಕೆ ಕಾರಣವಿಷ್ಟೆ. ಈ ಕಾದಂಬರಿಯಲ್ಲಿಯ ನಾನು-ಕತೆಯನ್ನು ವಿವರಿಸುವ ಕಾದಂಬರಿಕಾರ -ಇನಾಂದಾರ್ ಅಲ್ಲ. ಆ 'ನಾನು' ಒಬ್ಬ ಕಾಲ್ಪನಿಕ ವ್ಯಕ್ತಿ. ಆದ್ದರಿಂದ ಆತ ಹೇಳುವ ಮಾತುಗಳು, ಅಭಿಪ್ರಾಯಗಳು ಅವನವೇ. ಅವನ ಅನುಭವವೂ ಅವನದೇ, ಇನಾಂದಾರರದಲ್ಲ. ಆದ್ದರಿಂದ ಆ ಅಭಿಪ್ರಾಯಗಳನ್ನು ಉಕ್ತಿಗಳನ್ನು ನನ್ನ ತಲೆಗೆ ಕಟ್ಟುವ ಮೂಢ ಸಾಹಸಕ್ಕೆ ಓದುಗರು, ವಿಮರ್ಶಕರು ಇಳಿಯಬಾರದು ಎನ್ನುವುದಕ್ಕಾಗಿ ಈ ಎಚ್- ಅರಿಕೆಯ ಮಾತು. ಇದೊಂದು ಚಿತ್ರ-ವಿಚಿತ್ರ, ಸತ್ಯ ಸ್ವಪ್ನಕ್ಕಿಂತಲೂ ವಿಚಿತ್ರ ಎನ್ನುವುದಕ್ಕೊಂದು ನಿದರ್ಶನ. ಜೀವನವನ್ನು ಕುರಿತು ಊಹಿಸಿ ಕಟ್ಟಬೇಕೆಂಬ ಕತೆ ಯಾವಾಗಲೂ ಮುಗಿಯದ ಕತೆಯೇ, ಇಂಥದೊಂದು ಮುಗಿಯದ ಕತೆಯನ್ನು ಕಲ್ಪಿತ ವ್ಯಕ್ತಿಯೊಂದರ ಅನುಭವದ ಮುಖಾಂತರ ನಿರೂಪಿಸಲಾಗಿದೆ" ಎಂದು ಹೇಳಿ ಸುರಕ್ಷಿತ ದೂರದಲ್ಲಿ ನಿಂತು ತರ್ಕ, ಕುತರ್ಕ, ವಿಮರ್ಶೆ, ಟೀಕೆಗಳಿಂದ ಮುಕ್ತವಾಗುತ್ತಾರೆ.

ಕಾದಂಬರಿಯ ನಾಯಕ-ಕಾದಂಬರಿಕಾರ-ತನ್ನ ಕಾದಂಬರಿಗೆ ಬೇಕಾಗುವ ಕಥಾವಸ್ತುವಿನ ಶೋಧಕ್ಕೆ ಹೊರಟು ಸಾಕಷ್ಟು ಪರಿಪಾಟಲು ಪಡುತ್ತಾನೆ. ಪ್ರಕಾಶಕರಿಂದ, ಕಾದಂಬರಿ ಬರೆಯಲು ಮುಂಗಡವಾಗಿ ಒಂದಷ್ಟು ಹಣ ಪಡೆದುದರಿಂದ ಅವರು ಹೇಳಿದ ಸಮುಯಕ್ಕೆ ಕಾದಂಬರಿಯುನ್ನು ಸಿದ್ಧಪಡಿಸಿಕೊಡಲೇಬೇಕಾದ ನೈತಿಕ ಹೊಣೆಗಾರಿಕೆ ಎಚ್ಚರಿಸುತ್ತಿದ್ದರೂ, ವಾಸ್ತವಾನುಭವಗಳಿಂದ ಕೂಡಿದ ಕೃತಿಯನ್ನೇ ಕೊಡಬೇಕೆಂದುಕೊಂಡದ್ದರಿಂದ, ಅನುಭವ ನಿಷ್ಠ ಕೃತಿ ರಚನೆಗಾಗಿ ತುಡಿಯುತ್ತಿದ್ದ ಸಂದರ್ಭದಲ್ಲಿ ಅಯಾಚಿತವಾಗಿ ಗೋಕರ್ಣದಿಂದ ಭಾಷಣಕ್ಕೆ ಆಹ್ವಾನ ಪತ್ರ ಬಂದಿರುತ್ತದೆ. ಇದು ಅವರ ಪಾಲಿಗೆ ವರದಾನವಾಗಿ ಪರಿಣಮಿಸುವುದಲ್ಲದೆ, ಗೋಕರ್ಣದಲ್ಲಿ ಹೊಸ ಅನುಭವಗಳಿಗೆ ಅವಕಾಶವಾಗುತ್ತದೆಂದು ಹೊರಡುತ್ತಾರೆ. ಅಲ್ಲಿ ಅವರಿಗೆ ಅದ್ದೂರಿಯ ಸ್ವಾಗತ ಸಿಗುವುದಲ್ಲದೆ ರಮಾನಂದರಾಯರ ಪರಿಚಯವಾಗಿ ಅವರ ಮನೆಯಲ್ಲಿಯೇ ವಾಸ್ತವ್ಯದ ಏರ್ಪಾಟೂ ಆಗಿರುತ್ತದೆ. ಅಲ್ಲಿಯೇ ಅವರಿಗೆ ಸೀತೆಯ ಪರಿಚಯ ಆಗುತ್ತದೆ. ಹೋದ ಕೂಡಲೇ ಆಕೆ ರಮಾನಂದರಾಯರ

ಎಲ್ಲ ಕೆಲಸಗಳನ್ನು ಮಾಡುತ್ತಿದ್ದರೂ ಅವರಿಬ್ಬರ ಸಂಬಂಧ ಸ್ಪಷ್ಟವಾಗುವುದಿಲ್ಲ. ನಡವಳಿಕೆ ಸಾಮಾನ್ಯವಾಗಿ ಮಗಳಿಗಿಂತ ಭಿನ್ನವಾಗಿತ್ತು. ಅವರಲ್ಲಿ ಜಾಗೃತವಾದ ಕುತೂಹಲ ಅನೇಕ ಪ್ರಶ್ನೆಗಳನ್ನು ಹಾಕಿಕೊಳ್ಳುವಂತೆ ಮಾಡುತ್ತದೆ. ಅವಳು ಯಾರು? ಅವಳಿಗೂ ಇವರಿಗೂ ಸಂಬಂಧ ಏನು? ಅಲ್ಲದೆ ಅವಳು ವಿಚಾರಿಸುತ್ತಿರುವ ಮತ್ತು ಕಾಯುತ್ತಿರುವ ಶಂಕರರಾವ್ ಯಾರು? ಈ ಕುಟುಂಬದೊಂದಿಗೆ ಅವರ ಸಂಬಂಧ ಏನು? ಅವಳ ಗಂಡನೇ? ಇಲ್ಲ, ಮತ್ತೆ ಯಾರಾದರೂ ಇರಬಹುದೇ.......... ಎಂದು ನೂರೆಂಟು ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಲೇ ತನಗೆ ಬೇಕಾದ ಕಥಾ, ವಸ್ತುವಿಗೆ ಒಂದು ರೂಪ ಕೊಟ್ಟುಕೊಳ್ಳುತ್ತಾ ಹೋಗುತ್ತಾನೆ. ಕಾದಂಬರಿಯ ಕಥಾನಾಯಕಿ ಸೀತೆಯೇ ಸುಧಾ ಆಗಿ ರೂಪಾಂತರಗೊಳ್ಳುತ್ತಾಳೆ, ಅಥವಾ ಅವತರಿಸುತ್ತಾಳೆ. ಇವಳು ಮನೋಹರನನ್ನು ಪ್ರೀತಿಸಿದ್ದರೂ ಹರಿಹರನನ್ನು ಮದುವೆಯಾಗ ಬೇಕಾಗುತ್ತದೆ. ಭಗ್ನ ಪ್ರಣಯ್ಗ ಕಥೆ ಬೆಳೆಯುತ್ತಿದ್ದಂತೆ, ಮುಂದಿನ ಮಜಲುಗಳನ್ನು ಯೋಚಿಸುತ್ತಲೇ ತನಗರಿವಿಲ್ಲದಂತೆ ಅವಳನ್ನು ಕುರಿತು ಯೋಚಿಸುತ್ತಾ ಅವಳ ಬದುಕನ್ನು ವಿಶ್ಲೇಷಿಸುತ್ತಾ, ತಿರುವುಗಳ ಬಗ್ಗೆ ಚಿಂತಿಸುತ್ತಾ, ಕಾದಂಬರಿಯ ಕಥಾವಿನ್ಯಾಸ, ಬೆಳವಣಿಗೆಯನ್ನು ಊಹಿಸುತ್ತಲೇ, ಕಾದಂಬರಿಯ ಕಾಲ್ಪನಿಕ ಕಥಾನಾಯಕಿ ಸುಧಾ, ವಾಸ್ತವದ ಸೀತೆಯಾಗಿದ್ದವಳನ್ನು ಕಾದಂಬರಿಕಾರನೇ ಪ್ರೀತಿಸತೊಡಗುತ್ತಾನೆ, ಕಥೆ ಇಲ್ಲಿಗೆ ಮುಗಿಯದೆ ಕಥೆಯಾಗಿ ಉಳಿಯುತ್ತದೆ. ಕಾದಂಬರಿಗಾಗಿ ಹುಟ್ಟಿಕೊಂಡ ಸುಧಾ, ಮನೋಹರ, ಮಂದಾಕಿನಿ ಹರಿಹರ– ಈ ಪಾತ್ರಗಳ ಮುಂದಿನ ನಡೆ ಹೇಗೆಂಬುದನ್ನು ಕಾದಂಬರಿಕಾರ ತಿಳಿಸುವುದೇ ಇಲ್ಲ. ಕಾದಂಬರಿಯಲ್ಲಿ ಉತ್ತಮ ಪುರುಷದ ಪ್ರಯೋಗದ ಬಗ್ಗೆ ಲೇಖಕರು ಎಚ್–ಅರಿಕೆಯಲ್ಲಿ "ಈ ಕಾದಂಬರಿಯಲ್ಲಿ 'ನಾನು' – ಕತೆಯನ್ನು ವಿವರಿಸುವ ಕಾದಂಬರಿಕಾರ ಇನಾಂದಾರ್ ಅಲ್ಲ......... ಆ ನಾನು ಒಬ್ಬ ಕಾಲ್ಪನಿಕ ವ್ಯಕ್ತಿ"– ಎಂದು ವಿವರಿಸುತ್ತಾ ಎದುರಾಗ ಬಹುದಾದ ಪ್ರಶ್ನೆಗಳಿಂದ ನುಣುಚಿಕೊಳ್ಳುವ ಜಾಣ್ಮೆ ತೋರಿಸುತ್ತಾರೆ. ಅಲ್ಲದೆ ಪ್ರೀತಿಯ ಕಥೆಗೆ ಮುಗಿತಾಯವೇ ಇಲ್ಲವೆಂಬುದು ಅವರ ನಂಬಿಕೆ: ಅದೂ ಅಲ್ಲದೆ ಕಾದಂಬರಿಕಾರನ ಮಾತುಗಳು ಕಾದಂಬರಿಯ ಕೊನೆಯಲ್ಲಿ ಹೀಗೆ ಕೇಳಿಸುತ್ತವೆ "ಈ ಪ್ರೀತಿಯ ಕಥೆ ಎಂದೆಂದಿಗೂ ಮುಗಿಯದ ಕಥೆ ಎಂದು ತೋರಿತು. ನನ್ನ ಯೋಚನೆಯ ಸಾಮರ್ಥ್ಯವೇ ನಿಂತು ಹೋದ ಹಾಗೆ ಇತ್ತು – ಶಿಲಾಮೂರ್ತಿಯಂತೆ. ಮೋಹವೇ ಮೂರ್ತಿವೆತ್ತಂತೆ ಎದುರಲ್ಲಿ ನಿಂತಿದ್ದಳು ಸೀತಾ. ಎವೆಯಿಕ್ಕದೆ ನನ್ನನ್ನೇ ನೋಡುತ್ತಾ ಆಕೆಯ ಉಸಿರು ಬಲವಾಗಿ ಸಾಗುತ್ತಿದ್ದುದನ್ನು ಆಕೆಯ ವಕ್ಷಸ್ಥಲದ ಏರಿಳಿತಗಳಿಂದ ತಿಳಿಯ ಬಹುದಾಗಿತ್ತು" ಎಂದು ಕಾದಂಬರಿಕಾರರ ಕಾದಂಬರಿಯಲ್ಲಿನ ಕಥೆಗೆ ಮುಕ್ತಾಯ,

ತಿರುವು ದೊರೆಯದಿದ್ದರೂ ಕಾದಂಬರಿಯಲ್ಲಿ ಕಡೆಯ ಎರಡು ಸಾಲು ಮುಂದಿನದೆಲ್ಲವನ್ನೂ ಧ್ವನಿಸುತ್ತದೆ. "ಮಧುಕರರಾಯರು ಬರಲಿಲ್ಲವಲ್ಲ?.......... ಅವರು ಬರುವುದಿಲ್ಲ!" ಎಂಬ ಉತ್ತರ ಉನ್ಮಾದದ ಮೆಲುನಗೆಗಳು ಮುಂದಿನ ನಡೆಯನ್ನು ಧ್ವನಿಸುತ್ತದೆ. ಆದರೆ ಕಾದಂಬರಿಯಲ್ಲಿನ ಕಾದಂಬರಿಯಲ್ಲಿ ಬರುವ ಹರಿಹರ, ಮನೋಹರ–ಸುಧಾ–ಮಂದಾಕಿನಿ..... ಇವರೆಲ್ಲರೂ ಪ್ರಶ್ನೆಗಳಾಗಿ ನಿಲ್ಲುತ್ತಾರೆ. ಓದುಗರ ಊಹೆ, ಕಲ್ಪನೆಗಳಿಗೆ ಲೇಖಕರು ಒಂದು ಸವಾಲೆಸೆದಂತೆ ಕಾಣುತ್ತದೆ.

ಸಹಜ ನಿರೂಪಣೆ–ಕುತೂಹಲವನ್ನು ಕಾಯ್ದಿರಿಸುವ ಅವರ ತಂತ್ರ–ಸಂವಿಧಾನದ ಸಂಕೀರ್ಣತೆ–ಇವೆಲ್ಲವೂ ಅವರ ಉಳಿದೆಲ್ಲ ಕಾದಂಬರಿಗಳಿಗಿಂತ ಭಿನ್ನವಾದ ಪ್ರತಿಕ್ರಿಯೆಯನ್ನು ಓದುಗರಿಂದ ನಿರೀಕ್ಷಿಸುತ್ತದೆ. ಅವರ ಪ್ರಯೋಗಶೀಲ ಪ್ರವೃತ್ತಿಗೆ ಇದೊಂದು ನಿದರ್ಶನವಾಗಿದೆ.

**ಚಿತ್ರಲೇಖಾ:** ೧೯೬೧ ರಲ್ಲಿ ಪ್ರಕಟವಾದ 'ಚಿತ್ರಲೇಖಾ' ಕಾದಂಬರಿಯಲ್ಲಿ ಲೇಖಕರು, ತಮ್ಮ ಸುಮಾರು ಎಲ್ಲ ಕಾದಂಬರಿಗಳಲ್ಲಿ 'ಅರಿಕೆ' ಭಾಗದಲ್ಲಿ. ಕಾದಂಬರಿ ರಚನೆಯ ಹಿಂದಿನ ಅವರ ತಾತ್ವಿಕ ಚಿಂತನೆಗಳನ್ನು ವಿವರಿಸಿ, ಕಾದಂಬರಿ ಓದಿಗೆ ಒಂದು ರೀತಿಯಲ್ಲಿ, ಅದರ ಅರ್ಥಗ್ರಹಿಕೆಗೆ ಒಂದು ರೀತಿಯಲ್ಲಿ ಸಹಕರಿಸುತ್ತಾರೆ. ಜೀವನವೇ ಕಾದಂಬರಿಯ ವಸ್ತುವೆಂದು ನಂಬಿರುವ ಅವರಿಗೆ ಜೀವನದಲ್ಲಿನ ನೋವು, ದುಃಖಗಳು ಪಡೆಯುವ ಸ್ವರೂಪವನ್ನು ವಿವರಿಸುವುದು ಮುಖ್ಯವೆನಿಸುತ್ತದೆ. ಅಂತೆಯೇ ಈ ಕಾದಂಬರಿಯ ವಿಷಯದಲ್ಲಿ 'ಅರಿಕೆ' ಭಾಗದಲ್ಲಿ ತಮ್ಮ ಆಲೋಚನೆಗಳನ್ನು "ಬದುಕಿನಲ್ಲಿ ನೋವು, ದುಃಖಗಳು ಯಾಕಿರಬೇಕು? ಅವು ಅನಿವಾರ್ಯವೇ ಎನ್ನುವ ವ್ಯರ್ಥ ಪ್ರಶ್ನೆಗಿಂತ ಆ ನೋವು, ದುಃಖಗಳು ಯಾವ ಯಾವ ದಾರಿಯಲ್ಲಿ ನಮ್ಮನ್ನು ನಡೆಸುತ್ತದೆ, ನಡೆಸಬಹುದು, ಎಂಥ ವಿಫಲತೆಯ ಕಡೆಗೆ ಅಥವಾ ಸಿದ್ಧಿಯ ಕಡೆಗೆ ನಮ್ಮನ್ನು ಸಾಗಿಸಬಹುದು, ಎನ್ನುವ ಪ್ರಶ್ನೆಗಳು ಹೆಚ್ಚು ಅರ್ಥಯುತವಾಗಿವೆ ಎಂದು ಕಾಣುತ್ತದೆ" ಎಂದು ವಿವರಿಸಿದ್ದಾರೆ.

ಇಂತಹ ಒಂದು ತಾತ್ವಿಕತೆಯ ನಿಲುವಿನೊಂದಿಗೆ ಪಾತ್ರಸೃಷ್ಟಿಯಾಗಿದೆ. ಈ ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳೇ ಪ್ರಧಾನ. ಕುಸುಮಾ ಕಥಾ ಕೇಂದ್ರದಲ್ಲಿದ್ದರೂ ಇದೇ ಕಾದಂಬರಿಯಲ್ಲಿನ ಎರಡನೇ ಭಾಗದಲ್ಲಿ 'ಪ್ರತಿಭಾ' ಒಬ್ಬ ಕಲಾವಿದೆ ಕುಸುಮಾಳ ಆಪ್ತಗೆಳತಿ. ಕುಸುಮಾಳ ಬದುಕಿನಲ್ಲಿನ ಅನೇಕ ವಿಷಯಗಳನ್ನು ಬಲ್ಲವಳು, ಮೂರನೇ ಭಾಗವೇ 'ಚಿತ್ರಲೇಖಾ' ಇದೊಂದು ಕಾದಂಬರಿಯಲ್ಲಿನ

ಕಾದಂಬರಿಯಾಗಿ ವಾಸ್ತವದ ಕುಸುಮಾ ಚಿತ್ರಲೇಖಾ ಕಾಲ್ಪನಿಕ ಪಾತ್ರವಾಗಿ ಕಾಣಿಸಿಕೊಂಡು ಕಥೆ ಮುಂದುವರೆಯುತ್ತದೆ.

ಚಿತ್ರಲೇಖಾ ಕಾದಂಬರಿಯ ಅರಿಕೆಯಲ್ಲಿ ಕಾದಂಬರಿಯ ಕಥಾ ಮುಖವನ್ನು ಹೀಗೆ ವಿವರಿಸಿದ್ದಾರೆ: "ಮನೆ ಮನೆಗೊಂದು ಕಥೆ, ನಾಲ್ಕುಗೋಡೆ ಒಂದು ಚಪ್ಪರ ಹಾಕಿಕೊಂಡು ಇರತೊಡಗಿದ ಮನುಷ್ಯನ ಇರವೇ ಒಂದು ಕಥೆ. ನೋಡಿದರೆ ಬಾಳು, ಬರೆದರೆ ಕಥೆ, ಹಾಡಿದರೆ ಕಾವ್ಯ. ಒಂದೊಂದು ಸಲ ನೋಡುವ ಕಣ್ಣು ಅನುಭವಿಸುವ ಹೃದಯದಲ್ಲಿ ಪ್ರಶ್ನೆಗಳನ್ನು ಕೊರೆಯುತ್ತದೆ. ಇದೆಲ್ಲ ಏನು? ಇದರರ್ಥ ಯಾವುದು? ಇದೆಲ್ಲ ಹೀಗೇಕೆ ನಡೆಯುತ್ತದೆ ಎಂದು ಅನುಭವಿಸುವ ಅಂತರಂಗ ದಿಗ್ಭ್ರಮೆಗೊಳ್ಳುತ್ತದೆ. ಆ ದಿಗ್ಭ್ರಮೆಯಲ್ಲಿ ಸಂತಸವನ್ನೂ ಪಡೆಯುತ್ತದೆ ದುಃಖವನ್ನೂ ಅನುಭವಿಸುತ್ತದೆ. ಈ ಸಂತಸದ ದುಃಖ, ಈ ದುಃಖದ ಸಂತಸ ಬದುಕಿನ ಸೋಜಿಗ" (ಚಿತ್ರಲೇಖಾ ಅರಿಕೆ)

ಬದುಕಿನಲ್ಲಿ ಬಯಸುವುದೇ ಒಂದು, ಆಗುವುದೇ ಒಂದು. ಮನುಷ್ಯ ಪ್ರಯತ್ನಗಳಾಚೆಗಿನ ಯಾವುದೋ ಒಂದು ಶಕ್ತಿ ಆಗಬೇಕಾದ್ದನ್ನು ನಿರ್ಣಯಿಸುತ್ತದೆ. ಕೇಂದ್ರಪಾತ್ರವಾದ ಕುಸುಮಾ ರಮೇಶನನ್ನು ಅತಿಯಾಗಿ ಪ್ರೀತಿಸಿರುತ್ತಾಳೆ. ಆದರೆ ಕೆಲ ಅನಿವಾರ್ಯತೆಗಳಿಂದಾಗಿ, ರಮೇಶನನ್ನು ಮದುವೆಯಾಗುವುದು ತಪ್ಪಿ ಹೋಗಿ ಅಶೋಕನನ್ನು ವರಿಸುತ್ತಾಳೆ. ಅಂತರಂಗದಲ್ಲಿನ ಒಲವನ್ನು ಒಬ್ಬರಿಗಿತ್ತು, ಮತ್ತೊಬ್ಬರ ಜೊತೆ ಆತ್ಮಸಾಕ್ಷಿಗೆ ವಿರುದ್ಧವಾಗಿ ಸಹಬಾಳ್ವೆ ದಾಂಪತ್ಯ ನಡೆಸುವುದು ಕುಸುಮಾಗೆ ಅಸಹನೀಯವಾದ ಮಾನಸಿಕ ಯಾತನೆಗೆ ದಾರಿ ಮಾಡುತ್ತದೆ. ಆದರೆ ಧಾರ್ಮಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ ವಿವಾಹವಾದವಳು ಆದರ್ಶ ದಾಂಪತ್ಯ ನಡೆಸಬೇಕೆಂಬ ಪ್ರಜ್ಞೆಯನ್ನು ಹೊಂದಿದವಳಾಗಿರುತ್ತಾಳೆ. ಕುಸುಮಾ ದಾಂಪತ್ಯದ ಕರ್ತವ್ಯ ಮತ್ತು ವಿವಾಹ ಪೂರ್ವದ ಒಲವಿನ ಸಂಬಂಧಗಳ ನಡುವಿನ ಸಂಘರ್ಷದಿಂದ ಅದರಿಂದ ಉಂಟಾಗುವ ಪ್ರತಾಡನಗಳಿಂದ ತತ್ತರಿಸಿ ಹೋಗುತ್ತಾಳೆ. ನೈತಿಕ ಸಂಘರ್ಷದಿಂದ ಹೊರಬರಲಾಗದೆ, ದೈಹಿಕವಾಗಿಯೂ ಬಳಲಿ ಹೋಗುತ್ತಾಳೆ. ಕಡೆಗೆ ಪ್ರಾಣವನ್ನು ಕಳೆದುಕೊಳ್ಳಬೇಕಾಗುತ್ತದೆ.

ಅಶೋಕನನ್ನು ವಿವಾಹವಾಗಿದ್ದೇ ಅವಳ ಕನಸುಗಳನ್ನೆಲ್ಲಾ ಸಮಾಧಿ ಮಾಡಬೇಕಾಗುತ್ತದೆ. ಏರ್ ಪೈಲಟ್ ಆಗಬೇಕೆಂಬ ಅವಳ ದೀರ್ಘಕಾಲದ ಬಯಕೆ, ಗಂಡನ ಪ್ರತಿರೋಧದಿಂದ ಕುಸಿಯುತ್ತದೆ. ಹೆಂಡತಿಯಾದ ಅವಳಿಂದ ಆದರ್ಶ ಗೃಹಿಣಿತ್ವ ಅನ್ಯೋನ್ಯ ದಾಂಪತ್ಯ, ಪತಿನಿಷ್ಠೆ, ವಂಶೋದ್ಧಾರಕ್ಕೆ ಮಕ್ಕಳು – ಇವಿಷ್ಟನ್ನೇ ನಿರೀಕ್ಷಿಸಲಾಗುತ್ತದೆ. ಅವಳಲ್ಲಿ ಕಲೆ, ಸಾಹಿತ್ಯಗಳ ಬಗೆಗೆ ಅಪಾರವಾದ ಆಸಕ್ತಿ ಇದ್ದುದು, ಗಂಡನ ನೀರಸ, ಶುಷ್ಕ ವ್ಯವಹಾರಗಳ ಮನೋಧರ್ಮದಿಂದ

ಕಮರಿ ಹೋಗುತ್ತದೆ. ಇಂಥ ಸಂದರ್ಭಗಳಲ್ಲಿಯೇ ರಮೇಶನ ನೆನಪು ಅವಳನ್ನು ಅತಿಯಾಗಿ ಕಾಡುತ್ತದೆ. ಅವನ ಕೈ ಹಿಡಿದು ಸ್ವತಂತ್ರವಾಗಿ ಸ್ವಚ್ಛಂದವಾಗಿ ವಿಹರಿಸಿ ತನ್ನೆಲ್ಲ ಮನದ ಬಯಕೆಗಳನ್ನು ಸಾಕ್ಷಾತ್ಕರಿಸಿಕೊಳ್ಳಬಹುದೆಂಬ ಕನಸಿನ ಅರಮನೆ ವಿಧಿಯ ಕ್ರೂರ ಅಟ್ಟಹಾಸದ ಆಘಾತದಿಂದ ನೆಲಸಮವಾಗುತ್ತದೆ. ಅವನ ರಸಿಕತೆ, ಕಲಾಭಿಜ್ಞತೆಯ ನೆನಪುಗಳು ತೀಕ್ಷ್ಣವಾಗಿ ಇರಿಯುತ್ತವೆ. ಇದರ ಜೊತೆಗೆ ಮದುವೆಯಾಗಿ ವರ್ಷಗಳೇ ಸಂದರೂ ಸಂತಾನವಿಲ್ಲದ್ದು ಸರಸಮ್ಮನ ಅಸಮಾಧಾನಕ್ಕೆ ಕಾರಣವಾಗುತ್ತದೆ. ಅದರಿಂದ ಕುಸುಮಾ ಕೂಡಾ ಚಿಂತೆಗೆ ಈಡಾಗುತ್ತಾಳೆ.

ಎಷ್ಟೇ ಪ್ರಯತ್ನಿಸಿ, ರಮೇಶನನ್ನು ಮರೆಯಬೇಕೆಂದುಕೊಂಡರೂ ಮರೆಯಲಾಗದಿದ್ದಾಗಲೇ ಮತ್ತೊಂದು ಮುಖಾಮುಖಿಯಾಗುವ ಸನ್ನಿವೇಶ ಎದುರಾಗುತ್ತದೆ. ಆರು ವರ್ಷಗಳ ಹಿಂದೆಯೇ ಮದುವೆಯಾದ ಹೊಸದರಲ್ಲಿ ಅಶೋಕ ಹೆಂಡತಿಯ ಜೊತೆ ಬಂದಿದ್ದರೂ. ಮತ್ತೆ ಗೆಳೆಯರ ಜೊತೆಗೆ ಬಂದಿದ್ದ ಕುಸುಮಾಳ ಜೊತೆ ಹಿಂದೆ ಬಂದಿದ್ದ ಸನ್ನಿವೇಶ ಅಶೋಕನಿಗೆ ಯಾಕೋ ನೆನಪಾಯಿತು. ಕುಸುಮಾಳಲ್ಲಿ ಯಾವುದೇ ಉತ್ಸಾಹವಿದ್ದಂತೆ ಕಾಣಿಸಿರಲಿಲ್ಲ ಕಳೆಗುಂದಿದ ಅವಳ ಮುಖ ಅವನನ್ನು ಯೋಚನೆಗೀಡುಮಾಡಿತ್ತು. ಹಲವು ಸಲ ಕಾರಣ ಕೇಳಿದರೂ ಪ್ರಯೋಜನವಾಗಲಿಲ್ಲ ಅವಳ ಸ್ವಭಾವ ಅವನಿಗೆ ಸಮಸ್ಯೆಯಾಗಿತ್ತು. ಆದರೂ ಪಾಪದ ಅಶೋಕ ಅವಳ ಮೇಲೆ ಸಿಡಿಮಿಡಿಯಾಗದೆ ಸಹಜವಾಗಿಯೇ ಸೌಮ್ಯವಾಗಿಯೇ ನಡೆದುಕೊಳ್ಳುತ್ತಿದ್ದ ಸರಸಮ್ಮನಿಗೆ ಆ ದುಗುಡದ ಹಿಂದೆ ಮಕ್ಕಳಾಗದ ನೋವಿದೆ ಎಂದು ಅರ್ಥೈಸಿದ್ದಳು. ಆದರೆ ಅಶೋಕನಿಗೆ ಆ ಕಾರಣ ಸಮರ್ಥನೀಯವೆನಿಸಿರಲಿಲ್ಲ. ಯಾವುದೋ ನಿಗೂಢ ರಹಸ್ಯ, ನುಂಗಲಾಗದ ಸತ್ಯ ಅಡಗಿರಬೇಕೆಂದು ಎಣಿಕೆ ಹಾಕಿದ್ದ. ಅರಿಯಲಾಗದ ಅಸಮರ್ಥತೆ ಒಂದು ಕಡೆಯಾದರೆ ನಿಗೂಢ ಸತ್ಯವನ್ನು ಅರಿಯದ ಕುತೂಹಲ ಮತ್ತೊಂದು ಕಡೆ. ಇವೆರಡೂ ಕೂಡಾ ಅವನನ್ನು ಸಂಕಟಕ್ಕೆ ಒಳಗಾಗಿಸಿತ್ತು – ಆ ನಿಸರ್ಗ ಸೌಂದರ್ಯದ ಆಸ್ವಾದನೆಯ ಉತ್ಸಾಹಕ್ಕೆ ಕುಸುಮಾಳಿಂದ ಯಾವುದೇ ಬಗೆಯಲ್ಲಿ ಸಹಕಾರವಾಗಲಿ. ಅಪೇಕ್ಷೆಯಾಗಲೀ ಅವಳಲ್ಲಿ ಕಾಣಿಸಲಿಲ್ಲವೆಂಬುದು ಸತ್ಯವಾಗಿತ್ತು.

ಅದೇ ಜಾಗಕ್ಕೆ ಈಗ ಮತ್ತೆ ಬಂದಾಗ ಕುಸುಮಾ ರಮೇಶರು, ಒಂದು ಸನ್ನಿವೇಶದಲ್ಲಿ ಏಕಾಂತದಲ್ಲಿ ಮುಖಾಮುಖಿಯಾಗುತ್ತಾರೆ. ಕುಸುಮಾಳ ಸತ್ವ ಪರೀಕ್ಷೆಯ ಕ್ಷಣ. ಆರುವರ್ಷಗಳಿಂದ ಅನುಭವಿಸಿದ ನಿರಾಶೆಗೆ ಪರಿಹಾರ ಕಂಡುಕೊಳ್ಳುವ ಅವಕಾಶ ಎದುರಾಗುತ್ತದೆ. ಇಬ್ಬರೂ ಅನುಭವಿಸಿದ ಆಗಲಿಕೆಯ ಯಾತನೆಗೆ ಮುಕ್ತಾಯ ಹೇಳ ಬಹುದಾದ ಅವಕಾಶ ಅವರಿಗೆ ಅನಾಯಾಸವಾಗಿ

ಸಂದಿರುತ್ತದೆ. ಪಾಪದ ಕತೆ ಪ್ರಾರಂಭವಾಗುವುದರಲ್ಲಿತ್ತು, ಆದರೆ ಕುಸುಮಾಳ ಸಂಯಮ ಮತ್ತು ನಿಗ್ರಹಗಳು ಅನನ್ಯವಾಗಿದ್ದವು. ಒಂದು ಬಾರಿ ಮಾತ್ರ ಕೈ ಕೊಟ್ಟರೆ ಅದನ್ನು ಕಣ್ಣಿಗೊತ್ತಿಕೊಂಡು ಬಾಳು ಸಾರ್ಥಕ ಮಾಡಿಕೊಳ್ಳುತ್ತೇನೆ. ಎಂದು ಕೇಳಿದರೂ ಒಪ್ಪದಿದ್ದಾಗ ರಮೇಶ ತನಗೆ ಇನ್ನು ಈ ಬದುಕೆ ಬೇಡವೆಂದೂ ಎಲ್ಲಿಗಾದರೂ ದೂರ ಹೋಗಿಬಿಡುತ್ತೇನೆಂದೂ, ತನ್ನೆದೆಯ ನೋವು ಅವಳಿಗೆ ತಟ್ಟಿದ್ದರೆ, ತನ್ನ ಹಣೆಯಮೇಲೆ ಒಮ್ಮೆ ಕೈ ಇಡಲು ಬೇಡಿದಾಗ, ಕುಸುಮಾ ಸಾಧ್ಯವೆ ಇಲ್ಲವೆಂದೂ, ಬೇಕಾದರೆ ಪ್ರಾಣವನ್ನೇ ಕೊಡುತ್ತೇನೆ, ಆದರೆ ಈ ಕೈ ಸಾಧ್ಯವಿಲ್ಲ, ಅದು ಮತ್ತೊಬ್ಬರದು ಎಂದು ಹೇಳಿದಾಗ ರಮೇಶ ತಾನು ಇನ್ನು ಹೊರಟು ಹೋಗುವುದಾಗಿಯೂ ಅವಳು ತನ್ನನ್ನು ಮರೆತು ಬಿಡಬೇಕೆಂತಲೂ ಹೇಳುತ್ತಾನೆ. ಆ ಮಾತನ್ನು ಕೇಳಿದ ಕುಸುಮಾ ಹೋಗುವುದು ಬೇಡವೆಂದು ಅಂಗಲಾಚಿ ಬೇಡಿದ್ದೇ ಅಲ್ಲದೆ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಅಳುತ್ತಿದ್ದುದನ್ನು ನೋಡಿ ಸಮಾಧಾನ ಪಡಿಸಬೇಕೆಂದು ಬಲಗೈಯನ್ನು ಮುಖದಿಂದ ಸರಿಸುತ್ತಿರುವಾಗ, ಆಕೆ "ಆಯ್ಯೋ? ಅಯ್ಯೋ! ಕೊನೆಗೂ ಮುಟ್ಟಿದಿರಾ...... ಏನು ಮಾಡಲಿ? ಇನ್ನು ಬದುಕಲಾರೆ! ಬದುಕಲಾರೆ!" ಎಂದು ಹೇಳುತ್ತಾ ಓಡಿ ಹೋಗುತ್ತಾಳೆ.

ರಮೇಶನೂ ಈ ಘಟನೆಯ ನಂತರ ಮನೆಮಾರು ಆಸ್ತಿ ಪಾಸ್ತಿ ಬಿಟ್ಟು ಹೊರಟು ಹೋಗುತ್ತಾನೆ. ಕುಸುಮಾಳ ಅಂತರಂಗದಲ್ಲಿ ಪಾಪ ಪ್ರಜ್ಞೆ ಭಯಂಕರ ಭೂತವಾಗಿ ಕಾಡುತ್ತಿರುತ್ತದೆ, ಕಡೆಗೆ ಸಾವಿನ ಹಂತಕ್ಕೂ ಅವಳನ್ನು ತಲುಪಿಸುತ್ತದೆ.

ಅಶೋಕನಿಗೆ ಈ ರಹಸ್ಯ ಕಡೆಯಲ್ಲಿ ಮಾಲತಿಯಿಂದ ತಿಳಿಯುವ ವರೆಗೂ ಕುಸುಮಾಳ ವಿಚಾರವಾಗಿ ಅನೇಕ ಸಂಶಯಗಳು ಪ್ರಶ್ನೆಗಳು ಕಾಡುತ್ತಲೇ ಇರುತ್ತವೆ. ಸತ್ಯದ ನಿಗೂಢತೆಯ ಅನಾವರಣವಾಗುತ್ತಿದ್ದಂತೆ ಬದುಕಿದ್ದಾಗ ಕುಸುಮಾಳ ಬಗ್ಗೆ ತಳೆದಿದ್ದ ಅಸಮಾಧಾನ ಮತ್ತಷ್ಟು ಉಲ್ಬಣಿಸುತ್ತದೆ. ಪ್ರತಿಭಾಳಿಂದ ಬೇಡಿ ಪಡೆದಿದ್ದ ಕುಸುಮಾಳ 'ಚಿತ್ರ'ಕ್ಕೆ ಚಪ್ಪಲಿ ಎಸೆಯುವ ಮಟ್ಟಕ್ಕೆ ಕ್ರುದ್ಧನಾಗುತ್ತಾನೆ, ಆದರೆ ಕಡೆಯಲ್ಲಿ ಪೂರ್ತಿಯಾಗಿ ಕುಸುಮಾಳ ಕತೆ ಕೇಳಿದ ಮೇಲೆ ಅವಳ ನಿಷ್ಪಾಪತೆ ಮನದಟ್ಟಾಗುತ್ತಿದ್ದಂತೆ, ತನ್ನ ವರ್ತನೆಗೆ ತಾನೇ ಹೇಸಿ ಪಶ್ಚಾತ್ತಾಪದಿಂದ ಪರಿಹರಿಸಿಕೊಳ್ಳುತ್ತಾನೆ.

ಕುಸುಮಾಳನ್ನು ಮರೆಯಲು ಸಾಧ್ಯವಾಗದೆ, ಪ್ರತಿಭಾಳನ್ನು ಬಯಸಿದರೂ ಕತೆ ಅನೇಕ ತಿರುವುಗಳನ್ನು ಪಡೆದು ಕಡೆಗೆ ಕುಸುಮಾಳನ್ನು ಯಥಾವತ್ತಾಗಿ ಹೋಲುತ್ತಿದ್ದ ಕುಸುಮಾಳ ತಂಗಿಯನ್ನು ಮದುವೆಯಾಗುತ್ತಾನೆ. ಈ ಕಾದಂಬರಿಯ ಹೆಸರಿನ ಸಾರ್ಥಕತೆ ಕಾಣುವುದು ಮೂರನೇ ಭಾಗದಲ್ಲಿ. ಇದು

ಕಾದಂಬರಿಯೊಳಗಿನ ಕಾದಂಬರಿ. ರಮೇಶ ಲೇಖಕನಾದ್ದರಿಂದ, ತನ್ನ ಆತ್ಮವೃತ್ತದನ್ನೇ ಕಾದಂಬರಿಯಾಗಿಸುತ್ತಾನೆ. ವಾತ್ಸವದ ಕುಸುಮಾ, ಚಿತ್ರಲೇಖಾ ಆಗಿ ಅವತರಿಸುತ್ತಾಳೆ. ಗಂಡು ಹೆಣ್ಣಿನ ನಡುವೆ ಅರಳಿದ ಪ್ರೀತಿಯ ಸಂಬಂಧಗಳು ಮುರುಟಿಹೋಗಿ ನಿರಾಶೆಯ ಕಾರ್ಗತ್ತಲಲ್ಲಿ ಕರಗಿ ಹೋಗುವ ದಾರುಣ ಸ್ಥಿತಿಯನ್ನು ವಿವರಿಸುವ ಕಾದಂಬರಿ ಇದಾಗಿದೆ. ಅನಂತನಿಗೆ ಈ ಕಾದಂಬರಿಯ ಹಸ್ತ ಪ್ರತಿ ರಮೇಶನಿಂದ ತಲುಪಿದ ಮೇಲೆ ಎಲ್ಲರೂ ಓದಿದಾಗ ಒಬ್ಬೊಬ್ಬರಿಗೂ ಒಂದೊಂದು ರೀತಿಯಲ್ಲಿ ವಾಸ್ತವದ ಸಂಗತಿಗಳು ಹೊಳೆಯುತ್ತವೆ. ರಮೇಶನ ಆತ್ಮವೃತ್ತಾಂತವೇ ಕಾದಂಬರಿಯಾಗಿ, ಚಿತ್ರಲೇಖಾ ಯಾರೆಂದು ಪ್ರಶ್ನಿಸಿಕೊಳ್ಳುತ್ತಲೇ, ಪ್ರಸಂಗ, ಸನ್ನಿವೇಶಗಳ ಮುಖಾಂತರವಾಗಿ ಆ 'ಅವಳಿ' (ಚಿತ್ರಲೇಖಾ) ಕುಸುಮಾಳೇ ಎಂಬ ಊಹೆಯಲ್ಲಿ ನಿಲ್ಲುತ್ತದೆ.

ಕಲಾತ್ಮಕವೂ, ಕುತೂಹಲಕಾರಿಯೂ ಆದ ಈ ಕಾದಂಬರಿ ಅತ್ಯಂತ ಜನಪ್ರಿಯವಾಗಿದೆ.

**ಊರ್ವಶಿ:** ೧೯೬೮ ರಲ್ಲಿ ಪ್ರಕಟವಾದ ಈ ಕಾದಂಬರಿ ಮುಖ್ಯವಾಗಿ ಒಳಿತು ಕೆಡುಕುಗಳ ಸಂಘರ್ಷದ ಸ್ವರೂಪ, ಅವುಗಳ ಪರಿಣಾಮಗಳ ಕುರಿತು ಚರ್ಚಿಸುವುದಲ್ಲದೆ, ಮೂಲಭೂತವಾಗಿ ಯಾವೊಬ್ಬ ಮನುಷ್ಯನೂ ಪೂರ್ತಿಯಾಗಿ ಕೆಟ್ಟವನಾಗಿಯಾಗಲೀ ಒಳ್ಳೆಯವನಾಗಲೀ ಇರುವುದಿಲ್ಲ, ಒಳಿತು ಕೆಡುಕುಗಳು ಪ್ರತಿಯೊಬ್ಬನಲ್ಲಿ ಅಂತರ್ನಿಹಿತವಾಗಿರುತ್ತದೆ. ಸಮಯ, ಸಂದರ್ಭ ಮತ್ತು ಪಡೆಯುವ ಸಂಸ್ಕಾರ ಬದುಕುವ ಪರಿಸರ ಅವನಲ್ಲಿನ ಈ ಎರಡೂ ದ್ವಂದ್ವಗಳಲ್ಲಿ ಯಾವುದಾದರೂ ಒಂದರ ಪ್ರಮಾಣ ಹೆಚ್ಚಾಗುತ್ತದೆ. ಜೊತೆಗೆ ಕಾಲಕ್ರಮೇಣ ಕೆಟ್ಟವನು ಒಳ್ಳೆಯವನಾಗಬಹುದು, ಒಳ್ಳೆಯವನು ಕೆಟ್ಟವನಾಗ ಬಹುದು. ಮನುಷ್ಯನಲ್ಲಿರಬಹುದಾದ ಯಾವುದೊ ಕೆಡುಕು ಅಥವಾ ಒಳಿತು – ಅವೇ ಅಂತಿಮವಲ್ಲ ಎಂದು ಸಾರುತ್ತದೆ. ಈ ಕಾದಂಬರಿಯಲ್ಲಿ ಒಳಿತು– ಕೆಡುಕುಗಳು ಮುಖಾಮುಖಿಯಾಗುತ್ತವೆ. ನಾರಾಯಣರಾಯ ಶೇಷಗಿರಿ ಪಾತ್ರಗಳು ಒಳಿತು ಕೆಡುಕುಗಳನ್ನು ಪ್ರತಿನಿಧಿಸುತ್ತವೆ. ಕೆಡುಕು ಒಳಿತಿಗೆ 'ಥೀ' ಕೊಟ್ಟಾಗ ದುಃಖ ನೋವು ಕಷ್ಟಗಳಿಗೆ ದಾರಿಮಾಡಬಲ್ಲುದೆಂಬುದನ್ನು ಈ ಕಥಾನಕದಲ್ಲಿ ಬಿಂಬಿಸುವ ಪ್ರಯತ್ನಮಾಡಿದ್ದಾರೆ ಲೇಖಕರು. ಅದನ್ನೇ ಅರಿಕೆ ಭಾಗದಲ್ಲಿ ಸ್ವಲ್ಪ ವಿಸ್ತರಿಸಿ ವಿವರಿಸುವ ಮಾತುಗಳು ಹೀಗಿವೆ : "ಒಳಿತು ಕೆಡುಕುಗಳ ಅನ್ಯೋನ್ಯ ಸಂಪರ್ಕ –ಸಂಬಂಧ ಇಲ್ಲಿ ಸಮಸ್ಯೆಯಾಗಿದೆ. ಒಳಿತು– ಕೆಡುಕುಗಳ ಸಂಪರ್ಕ ಸಂಘರ್ಷ ಲೋಕ ಜೀವನದಲ್ಲಿ ಅನಿವಾರ್ಯ. ಲೋಕದಲ್ಲಿ ಒಳ್ಳೆಯದೂ ಇದೆ. ಕೆಡುಕೂ ಇದೆ. ಒಳಿತು ಎನ್ನುವುದು ಕೆಡುಕಿನಿಂದ ದೂಷಿತವಾಗಬಹುದು, ಆಗುತ್ತದೆ

ದುಃಖಕ್ಕೆ ಕಷ್ಟಕ್ಕೆ ಗುರಿಯಾಗುತ್ತದೆ"......... ಶೇಷಗಿರಿಯಂಥ ಚೇತನ ಒಳಿತಿಗೊಂದು ನಿತ್ಯ ಅಪಾಯ........ ತನ್ನ ಪಾಲಿಗೆ ಬಂದ ತಿಳಿವಿನ ಬೆಳಕಿನಲ್ಲಿ ಎಲ್ಲವನ್ನೂ ಕ್ಷಮಿಸ ಬಲ್ಲ. ನಾರಾಯಣರಾಯರಂಥವರ ಹೃದಯದ ಔದಾರ್ಯವೊಂದೇ ಶೇಷಗಿರಿಯಂಥ ಚೇತನಗಳಿಗೆ ಪ್ರತಿಶಕ್ತಿಯಾಗಿ ನಿಲ್ಲಬಹುದು. ಎಂಥ ಕಷ್ಟಕ್ಕೆ ಗುರಿಯಾದರೂ ಆತ್ಮವಿಶ್ವಾಸವನ್ನು ಕಳೆದುಕೊಳ್ಳದೆ ಒಳಿತಿನ ಬಗೆಯಲ್ಲಿಯ ನಿಷ್ಠೆಯನ್ನು ಕಾಪಾಡಿಕೊಂಡು ಹೋಗಬಹುದು" ಎಂಬ ತಾತ್ವಿಕ ಚಿಂತನೆಗೆ ನಿದರ್ಶನವಾಗಿ ಪಾತ್ರಗಳು, ಸನ್ನಿವೇಶ ಸಂದರ್ಭಗಳು ಈ ಕಾದಂಬರಿಯಲ್ಲಿ ಸೃಷ್ಟಿಯಾಗಿವೆ.

ಮಕ್ಕಳಿಲ್ಲದಿದ್ದ ನಾರಾಯಣರಾಯರಿಗೆ ಊರ್ವಶಿ ಮಗಳಾಗಿ ದೊರೆಯುತ್ತಾಳೆ, ಆದರೆ ಈ ರಹಸ್ಯ ಕಾದಂಬರಿಯ ಬೆಳೆಯುತ್ತಿದ್ದಂತೆ ಕುತೂಹಲವನ್ನು ಸೃಷ್ಟಿಸುತ್ತಾ ಹೋಗಿ ಕಡೆಗೆ ಕಠೋರ ಸತ್ಯವೊಂದು ಬಹಿರಂಗವಾಗುತ್ತದೆ. ಈ ಸತ್ಯವೇ ಕೆಡುಕಿನ ಮನುಷ್ಯನಾಗಿಯೇ ಚಿತ್ರಿತವಾದ ಶೇಷಗಿರಿಯಲ್ಲಿ ಪರಿವರ್ತನೆ ತರಲು ಕಾರಣವಾಗುತ್ತದೆ. ಪಾಪ ಪ್ರಜ್ಞೆ, ಪಶ್ಚಾತ್ತಾಪಗಳು ಅಂಥ ಕೆಡುಕಿನ ಮನುಷ್ಯನಲ್ಲಿಯೂ ಕಾಣಿಸಿಕೊಳ್ಳುತ್ತಿವೆ.

ನಾರಾಯಣರಾಯರು ಕಾಲೇಜೊಂದರಲ್ಲಿ ಪ್ರಾಧ್ಯಾಪಕರಾಗಿದ್ದು ನಿವೃತ್ತಿ ಹಂತದಲ್ಲಿರುತ್ತಾರೆ. ಸಾಚಾತನ, ನಿಸ್ವಾರ್ಥತೆ. ಪ್ರಾಮಾಣಿಕತೆ, ಶಾಂತ ಸ್ವಭಾವ, ಶ್ರದ್ಧೆ, ಸಂಯಮಗಳ ಮೂರ್ತಿರೂಪದಂತೆ ಇರುವ ಇವರಿಗೆ ಗೆಳೆಯ ಶೇಷಗಿರಿ, ಸ್ವಭಾವಗುಣಗಳಲ್ಲಿ ನಾರಾಯಣರಾಯರಿಗೆ ತದ್ವಿರುದ್ಧ, ನಾರಾಯಣರಾಯರಿಂದ ಸಾಕಷ್ಟು ಸಹಾಯವನ್ನು ಕಷ್ಟದ ದಿನಗಳಲ್ಲಿ ಪಡೆದಿರುವಂಥ ಈ ವ್ಯಕ್ತಿ ತನ್ನ ಸ್ವಾರ್ಥಕ್ಕಾಗಿ ಎಂತಹ ಮೋಸವನ್ನಾದರೂ ಮಾಡಬಲ್ಲ. ಪ್ರಾಮಾಣಿಕತೆಯಿಂದ ಬದುಕುವುದು ತೀರಾ ಒಳ್ಳೆಯವನಾಗಿ ಬಾಳುವುದು ಸಾಧ್ಯವಿಲ್ಲ ಎನ್ನುವುದನ್ನು ತನ್ನ ವೈಯಕ್ತಿಕ ಅನುಭವಗಳಿಂದ ಅರಿತಿದ್ದಾನೆ. ತದ್ವಿರುದ್ಧ ಸ್ವಭಾವಗಳುಳ್ಳ ಈ ಇಬ್ಬರ ಸ್ನೇಹ ಮುಂದುವರೆದದ್ದೂ ಅಚ್ಚರಿಯೇ? ಶೇಷಗಿರಿಯ ಜಾಣ ಮಾತುಗಳ ಹಿಂದೆ, ನಡವಳಿಕೆಯ ಹಿಂದೆ ಇರಬಹುದಾದ ದುಷ್ಟ ಆಲೋಚನೆ, ಸ್ವಾರ್ಥದ ವಾಸನೆ ಹಿಡಿಯಬಲ್ಲ ಸಾಮರ್ಥ್ಯ ನಾರಾಯಣರಾಯರಿಗೆ ಇರುತ್ತದೆ. ಆದರೂ ದ್ವೇಷ ಕಟ್ಟಿಕೊಳ್ಳುವ ಮಟ್ಟಕ್ಕೆ ಹೋಗದೆ, ಶೇಷಗಿರಿಯೊಂದಿಗೆ ವ್ಯವಹರಿಸುತ್ತಾರೆ. ಅವನಿಂದ ತಾವು ಎಚ್ಚರದಿಂದ ಇರಲು ಸಾಧ್ಯ. ಆದರೆ ತಮ್ಮ ಮಗಳಾದ ಊರ್ವಶಿ, ಮತ್ತು ಅಳಿಯ ರಾಜು– ಇವರಿಬ್ಬರೂ ಅವನ ಬಲೆಯಲ್ಲಿ ಸಿಕ್ಕದ್ದು ಅವರಿಗೆ ಅತಂಕವನ್ನುಂಟು ಮಾಡುತ್ತದೆ. ಊರ್ವಶಿಗೆ ಆಧುನಿಕತೆಯ ಥಳುಕು ಜೀವನದಲ್ಲಿ ಆಸಕ್ತಿ ತನ್ನ ಚೆಲುವು ಸೌಂದರ್ಯಗಳು ಎಲ್ಲರ ಆಕರ್ಷಣೆಗೆ

ಒಳಗಾಗಬೇಕೆನ್ನುವ ಆಕಾಂಕ್ಷೆ ಥಳುಕಿನ ಬದುಕಿನತ್ತ ದೂಡುತ್ತದೆ. ಇದರ ಪರಿಣಾಮಗಳು ಏನಾಗಬಹುದೆಂಬುದರ ಕಲ್ಪನೆ ಇಲ್ಲದೆ ಅದಕ್ಕೆ ಅವಕಾಶ. ಆಸ್ಪದ ಸಿಗುವ ಎಲ್ಲ ಪರಿಸ್ಥಿತಿಗಳನ್ನು ಅವಳ ನಿರೀಕ್ಷೆಯಂತೆ, ಅವಳ ರೂಪಲಾವಣ್ಯಗಳಿಗೆ ಬೆರಗಾಗುವ, ಮೆಚ್ಚುವ ಹೊಗಳುವ ಶೇಷಗಿರಿಯಂಥವರನ್ನು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾಳೆ. ಅಲ್ಲದೆ ಅತಿಯಾದ ಸಲುಗೆ ಸಂಬಂಧಗಳನ್ನು ಸಾಚಾ ಮತ್ತು ಮುಗ್ಧ ನಂಬಿಕೆಯಿಂದ ಒಪ್ಪಿಕೊಳ್ಳುತ್ತಾಳೆ. ಶೇಷಗಿರಿಯ ದುಷ್ಟತನ ಊರ್ವಶಿ ಬಗೆಗಿನ ಕಾಮುಕ ದೃಷ್ಟಿ ಸಾಕಷ್ಟು ಕಾಲ ಅರಿವಿಗೇ ಬಾರದಂತೆ ವರ್ತಿಸುತ್ತಾನಲ್ಲದೆ ಊರ್ವಶಿಗಾಗಿ, ರಾಜುವಿನ ವ್ಯವಹಾರಗಳಲ್ಲಿ ಪ್ರವೇಶಿಸಿ, ಅನೇಕ ವ್ಯಾಪಾರ ವ್ಯವಹಾರ ಸಂಬಂಧಗಳ ಮೂಲಕ ಅವನಿಗೆ ಲಾಭಗಳಿಸುವ ನೆಪದಲ್ಲಿ ಅವನಿಗೂ ಆತ್ಮೀಯನಾಗುತ್ತಲೇ ಕೆಡುಕಿನ ಸ್ವಭಾವದ ಸುಳಿವೂ ಸಿಗದಂತೆ ವರ್ತಿಸುತ್ತಾನೆ. ಊರ್ವಶಿ, ಅವನ ಸಲುಗೆ ಅವನಿಗಿದ್ದ ತಮ್ಮಹಿತದ ಚಿಂತೆ ಇವೆಲ್ಲವನ್ನೂ ಸ್ನೇಹದ ಪರಿಣಾಮವೆಂದೇ ಭಾವಿಸುತ್ತಾಳೆ. ಆದರೆ ಕ್ರಮೇಣ ಶೇಷಗಿರಿಯ ದುರಾಲೋಚನೆ ಅನುಭವಕ್ಕೆ ಬಂದಾಗ, ಅವಳು ತನ್ನಲ್ಲಿ ಅಂತರ್ಗತವಾಗಿದ್ದ ಸಂಯಮದಿಂದ ತನ್ನನ್ನು ಕಾಪಾಡಿಕೊಳ್ಳುತ್ತಾಳೆ. ಶೇಷಗಿರಿಗೆ ತನ್ನ ಬಯಕೆಗೆ ಪೂರಕವಾದ ಪ್ರತಿಕ್ರಿಯೆ ಅವಳಿಂದ ದೊರಯದೆ ಹೋದಾಗ, ಅವನಲ್ಲಿದ್ದ ಕೇಡಿನ ಭೂತ ಹೊರಹೊಮ್ಮಿ ರಾಜುವನ್ನು ಕೆಲವು ಸಮಸ್ಯೆಗಳಲ್ಲಿ ಸಿಲುಕಿಸುತ್ತಾನೆ. ನಾರಾಯಣರಾಯರಿಗೆ ತಮ್ಮ ಮಗಳು ಅಳಿಯ ಇಬ್ಬರ ಜೊತೆಗಿನ ಶೇಷಗಿರಿಯ ಆತ್ಮೀಯತೆಯನ್ನು ನೋಡಿದಾಗಲೇ. ಅವನಿಂದ ಒದಗಬಹುದಾದ ಕಷ್ಟ ಪರಂಪರೆಗಳ ಸುಳಿವು ಸಿಗುತ್ತದೆಯಾದರೂ ಅವರಿಗೆ ನಂಬಿಕೆ ಬರುವುದಿಲ್ಲ, ಶೇಷಗಿರಿಯ ಕೆಡುಕಿನ ಸ್ವಭಾವ ಬಯಲಾಗುವ ಸಮಯಕ್ಕೆ ರಾಜುವಿನ ಸಮಸ್ಯೆ ಕೈ ಮೀರಿರುತ್ತದೆ. ಇದೆಲ್ಲದರ ಅರಿವಿದ್ದೂ ನಾರಾಯಣರಾಯರು ಶೇಷಗಿರಿಯೊಂದಿಗೆ ಮುಖಾಮುಖಿ ಘರ್ಷಣೆಗೆ ಇಳಿಯುವುದಿಲ್ಲ, ಅವರ ನಂಬಿಕೆಯಂತೆ "ಕೆಡುಕಿಗೆ" ಭಯಂ ಕರ ಸಾಮರ್ಥ್ಯವಿರುವುದಲ್ಲದೆ. ಒಮ್ಮೆ ಮಾಡಿದ ಪಾಪ! ಲೋಕ ಜೀವನದ ಸರೋವರದಲ್ಲಿ ಎಸೆದ ಕಲ್ಲು ಅಲೆಅಲೆಯಾಗಿ ಅದರ ದುಷ್ಪರಿಣಾಮಗಳು ಕಾಲತೀರದವರೆಗೂ ವಿಸ್ತರಿಸುತ್ತ ಹೋಗುತ್ತದೆ. ಹಿಂದಿರುಗಿಯಾದರೂ ಬಂದು ಒಂದಿಲ್ಲೊಂದು ದಿನ ಒಂದಿಲ್ಲೊಂದು ರೀತಿಯಲ್ಲಿ ಎಸಗಿದವನಿಗೆ ಮಾತ್ರವಲ್ಲದೆ ಉಳಿದವರಿಗೂ ತಾಗುತ್ತವೆ, ಪಾಪದ ವಿಷ ಪರಿಣಾಮಗಳನ್ನು ಅನುಭವಿಸಿಯೇ ತೀರಬೇಕು". ಹೀಗಾಗಿ ಶೇಷಗಿರಿಯಂಥವರನ್ನು ಮೇಲೆ ಹಾಕಿಕೊಳ್ಳುವುದಕ್ಕಿಂತ ಅಂಥವರಿಂದ ಬಿಡಿಸಿಕೊಂಡು ತೆಪ್ಪಗಿರುವುದೆ ಲೇಸೆಂದು ಭಾವಿಸುತ್ತಾರೆ.

ಊರ್ವಶಿ ಮೇಲೆ ನೋಡುವವರಿಗೆ ನಾರಾಯಣರಾಯ ಲಕ್ಷ್ಮಿಯರ ಮಗಳು, ಆದರೆ ವಾಸ್ತವದಲ್ಲಿ ಶೇಷಗಿರಿ ಮತ್ತು ದೇವಿಯರ ಅನೈತಿಕ ಸಂಬಂಧದ ಫಲ, ಈ ಕಟು ಸತ್ಯದ ಅರಿವಾಗುವುದು "ನಿನ್ನ ನಿಜದ ತಾಯಿ ಯಾರು?" ಎಂಬ ಶೇಷಗಿರಿಯ ಪ್ರಶ್ನೆ ಎದುರಾದಾಗ ನಾರಾಯಣರಾಯರಿಂದ ಈ ಸತ್ಯದ ಮನವರಿಕೆಯಾದಾಗ ಶೇಷಗಿರಿ ಪಾಪ ಪ್ರಜ್ಞೆಯಿಂದ ಕುಸಿಯುತ್ತಾನೆ. ತನ್ನ ಮತ್ತು ದೇವಿ ಸಂಬಂಧವಾಗಿ ನಾರಾಯಣರಾಯರಂಥ ವಿಶ್ವಾಸಪಾತ್ರ ಮಿತ್ರನಿಗೇ ಸುಳ್ಳುಗಳನ್ನು ಹೇಳಿದ್ದಕ್ಕಾಗಿ ಪರಿತಪಿಸುತ್ತಾನೆ "ನಾನೊಬ್ಬ ಪರಮ ಪಾಪಿ! ನಾರಾಯಣ, ನಾನೊಬ್ಬ ಪರಮ ಪಾಪಿ! ನನ್ನನ್ನು ಕ್ಷಮಿಸಬೇಕು" ಎಂದು ಅಂಗಲಾಚಿ ಬೇಡಿಕೊಳ್ಳುವಷ್ಟು ಮಟ್ಟಿಗೆ ಅವನಲ್ಲಿ ಬದಲಾವಣೆ ಕಾಣಿಸುತ್ತದೆ. ಈ ಸತ್ಯದ ಅನಾವರಣದಿಂದ ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ನೋವನ್ನು ಅನುಭವಿಸುತ್ತಾರೆ. ಇಪ್ಪತ್ತೆಂಟು ವರ್ಷಗಳ ಕಾಲ ತಮ್ಮ ಬದುಕನ್ನೇ ಧಾರೆಯೆರೆದು ಅವಳ ಬದುಕಿನಲ್ಲಿ ಸುಖದ ಕ್ಷಣಗಳನ್ನೇ ಕಾಣಿಸಲು ಪ್ರಯತ್ನಿಸಿದವರಿಗೆ ಅವಳು ತಮ್ಮ ಕನಸು ಎಂದು ನಂಬಿದವರಿಗೆ, "ನನ್ನ ಬದುಕೇ ಬುಡ ಮೇಲಾಯಿತು. ನಾನು ಯಾರು ಎನ್ನುವುದನ್ನು ತಿಳಿಯದೆ ಬದುಕಿದೆ, ಇಷ್ಟುದಿನ ಬೆಳೆದೆ. ಇದು ನನ್ನ ಮೂಲ, ಇವರೇ ನನ್ನ ಜನ್ಮದಾತರು, ಇವರೇ ನನ್ನ ದೇವರು ಎಂಬ ನಂಬಿಕೆಯಲ್ಲಿ ಬೆಳೆದೆ, ಇಂದು ಆ ನಂಬಿಕೆ ಬಿದ್ದು ಹೋಯಿತು!" – ಎನ್ನುವ ಊರ್ವಶಿಯ ವಿಷಾದದ ಉದ್ಗಾರ ಖಂಡಿತವಾಗಿಯೂ ಕೃತಘ್ನತೆಯ ಅಭಿವ್ಯಕ್ತಿಯಂತೆ ಕಾಣಿಸಿ ಆ ಮುದಿ ದಂಪತಿಗಳ ಮನಸ್ಸಿಗೆ ಆದ ನೋವು ಕಲ್ಪನಾತೀತವೇ ಆಗುತ್ತದೆ. ಈ ಸನ್ನಿವೇಶ ನಾರಾಯಣರಾಯರಲ್ಲಿ ಹಲವಾರು ಪ್ರಶ್ನೆಗಳನ್ನು ಹುಟ್ಟು ಹಾಕುತ್ತದೆ. ಅನುಕಂಪ, ಸಹಾನುಭೂತಿ, ಅನ್ಯರ ಒಳಿತು ಕ್ಷೇಮ ಚಿಂತನೆ, ಬದುಕಿಗೇ ಎರವಾಗಬಹುದಾಗಿದ್ದ ಒಂದು ಜೀವಕ್ಕೆ ಸುಗಮವಾದ ದಾರಿಯೊಂದನ್ನು ಕಲ್ಪಸಿಕೊಟ್ಟು ಸುಖವಾಗಿ ಬಾಳಲೆಂದು ಬಯಸಿದ ಬಯಕೆ ಇತ್ಯಾದಿ ಪ್ರಶ್ನೆಗಳು – ಪ್ರಶ್ನೆಗಳಾಗಿಯೇ ಉಳಿಯುತ್ತವೆ.

ದೇವಿಯ ಪಾತ್ರ ಈ ಕಾದಂಬರಿಗೆ ಒಂದು ಬಗೆಯ ರಮ್ಯತೆಯನ್ನು ನೀಡಿದೆ. ನೇರವಾಗಿ ಪ್ರಮುಖ ಪಾತ್ರವಾಗಿ ಕಾಣಿಸಿಕೊಳ್ಳದಿದ್ದರೂ ಅವಳಿಗೆ ಜನಿಸಿದ ಊರ್ವಶಿಯ ಮೂಲಕ ಅಮೂರ್ತವಾಗಿ ಹಿನ್ನೆಲೆಯಲ್ಲಿ ಉಳಿದೇ ಇರುತ್ತಾಳೆ. ಶೇಷಗಿರಿಯಿಂದ ತನಗೆ ಜನಿಸಿದ ಮಗುವನ್ನು ಮಕ್ಕಳಿಲ್ಲದೆ ಕೊರಗುತ್ತಿದ್ದ ನಾರಾಯಣ– ಲಕ್ಷ್ಮೀದಂಪತಿಗೆ ದತ್ತು ನೀಡುತ್ತಾಳೆ. ಆದರೆ ಶೇಷಗಿರಿಯಿಂದ ಈ ವಿಷಯ ಮರೆಮಾಚಲು ಸರಿಯಾದ ಸಮರ್ಥನೆ ಸಿಗುವುದಿಲ್ಲ ಬಹುಶಃ ಶೇಷಗಿರಿ ತನ್ನ ಸ್ವಾರ್ಥ ತೀರಿದ ಮೇಲೆ ನಿರ್ಲಕ್ಷಿಸಿ ಕಾಣಿಸಿಕೊಳ್ಳದೆ ಮರೆಯಾದದ್ದೇ ಕಾರಣವಿರಬಹುದೆ ಎನ್ನುವುದರ ಜೊತೆಗೆ ವಿದೇಶಕ್ಕೆ ಹೋಗುವಾಗ ಇಲ್ಲಿನ

ಯಾವ ಸಂಬಂಧಗಳ ನೆನಪನ್ನೂ ಹೊತ್ತೊಯ್ಯ ಬಾರದೆನ್ನುವ ವಿಚಾರವೂ ಇರಬಹುದು. ನಾರಾಯಣರಾಯ ದಂಪತಿಗಳೂ, ದತ್ತು ಮಗಳೆಂಬುದು ಲೋಕಕ್ಕೆ ತಿಳಿಯಬಾರದೆಂಬ ಕಾರಣಕ್ಕೆ ದೂರದ ಅಹಮ್ಮದಾ ಬಾದಿಗೆ ಹೋಗಿ ನೆಲೆಸುತ್ತಾರೆ.

ಕಾದಂಬರಿ ಆದರ್ಶ, ಮೌಲ್ಯಗಳು ಸಂಪ್ರದಾಯ ನೈತಿಕತೆಯ ಆಶಯಗಳೊಂದಿಗೇ ಕಲಾತ್ಮಕವಾಗಿ ಮೂಡಿಬಂದು ಓದುಗರ ಮೆಚ್ಚುಗೆಗೆ ಪಾತ್ರವಾಗಿದೆ.

**ನವಿಲು ನೌಕೆ ೧೯೭೧:** ಇನಾಂದಾರರು ತಾನು ಬರೆದ ಪ್ರತಿಯೊಂದು ಕಾದಂಬರಿಯ ಹಿಂದೆಯೂ ನಿರ್ದಿಷ್ಟವಾದ ಒಂದು ತಾತ್ವಿಕ ನಿಲುವನ್ನು ಹೊಂದಿದ್ದು, ಅದಕ್ಕೆ ಪೂರಕವಾದ ಕಥಾಹಂದರವನ್ನು ತಮ್ಮ ಅನುಭವಕ್ಕೆ ಬಂದ ಸನ್ನಿವೇಶ ಘಟನೆಗಳಿಂದಲೋ ಇಲ್ಲವೆ ಎಲ್ಲಿಯಾದರೂ ಪತ್ರಿಕೆಗಳಲ್ಲಿ ಓದಿದ ಸಂಗತಿಗಳಿಂದಲೊ ಅಥವಾ ತಮ್ಮ ಸ್ವಂತ ಕಲ್ಪನೆಯ ಮೂಲಕವೋ, ನಿರ್ಮಿಸಿಕೊಂಡು ಅದಕ್ಕೆ ಹೊಂದುವ ಪಾತ್ರ ಪರಿಸರ, ಸಂದರ್ಭಗಳನ್ನು ಸೃಷ್ಟಿಸಿಕೊಳ್ಳುತ್ತಾರೆ. ಇವುಗಳಿಂದ ಇನಾಂದಾರರ, ಜಗತ್ತಿನ ಆಗುಹೋಗುಗಳ, ಬದುಕಿನ ಅನುಭವಗಳ ಗ್ರಹಿಕೆ ಎಷ್ಟು ಸೂಕ್ಷ್ಮವಾದುದು ಎಂಬುದರ ಸ್ಪಷ್ಟ ಅರಿವು ಓದುಗರಿಗೆ ಉಂಟಾಗುತ್ತದೆ.

ಇನಾಂದಾರರು ಮೂಲತಃ ನಂಬಿಕೆ, ಸಂಪ್ರದಾಯ ಪರಂಪರೆಗಳಲ್ಲಿ ಆಸ್ಥೆಯುಳ್ಳವರು ಪ್ರಪಂಚದಲ್ಲಿ ಸಂಭವಿಸುವ ಪ್ರತಿಯೊಂದು ಘಟನೆಯ ಹಿಂದೆಯೂ ಕಾರ್ಯ ಕಾರಣ ಸಂಬಂಧವಿರುವುದೆಂಬುದರ ಜೊತೆಗೆ ಯಾವುದಕ್ಕೂ (ಜೀವ, ಆತ್ಮ ಇತ್ಯಾದಿ) ನಾಶವಿಲ್ಲವೆಂಬುದನ್ನೂ, ಅದು ನಿರಂತರ ಸಾತತ್ಯತೆಯನ್ನು ಹೊಂದಿರುತ್ತದೆ ಎನ್ನುವುದನ್ನೂ ಬಲವಾಗಿ ನಂಬುತ್ತಾರೆ. ಅವರ ಮಾತಿನಲ್ಲಿಯೇ ಹೇಳುವುದಾದರೆ "ಈ ಪ್ರಪಂಚದಲ್ಲಿ ಯಾವುದೂ ನಾಶವಾಗುವುದಿಲ್ಲ – ಸ್ಥಿತ್ಯಂತರ ಹೊಂದುತ್ತದೆ..... ಐವತ್ತು ವರ್ಷ ಅರವತ್ತು ವರ್ಷ, ನೂರು ವರ್ಷ ಒಂದು ಜೀವ ಒಂದು ದೇಹದಲ್ಲಿ ನಿಂತು ಅದನ್ನು ನಡೆಸುತ್ತದೆ. ಒಂದು ದಿನ ಅದು ಹೊರಟು ಹೋಗುತ್ತದೆ.... ದೇಹ ಜೀರ್ಣವಾದಾಗ ಹೊರಟು ಹೋಗುತ್ತದೆ ಎಂದ ಮಾತ್ರಕ್ಕೆ ಅದು ಪೂರ್ತಿಯಾಗಿ ಇಲ್ಲವಾಗುತ್ತದೆ ಎಂದು ಹೇಳುವುದು ಹೇಗೆ? ನಾವು ಕಾಣುವ ಹಾಗೆ ಇಲ್ಲ ಎಂದಿಷ್ಟೇ ಹೇಳಬಹುದು. ಇನ್ನೊಂದೆಡೆಯಲ್ಲಿ ಅದು ಇಲ್ಲ ಎಂದು ಹೇಗೆ ಹೇಳುವುದು? ಇನ್ನೆಲ್ಲಿಯೋ ಇನ್ನುಯಾವುದೋ ಒಂದು ರೂಪದಲ್ಲಿ ಮುಂದುವರೆಯುತ್ತದೆ. ಅದು ಅನಿವಾರ್ಯವೂ ಹೌದು. ಈ ಮಾತುಗಳು ಪುನರ್ಜನ್ಮದಲ್ಲಿ ಅವರಿಗೆ ನಂಬಿಕೆ ಇರುವುದನ್ನು ದೃಢಪಡಿಸುತ್ತದೆ.

ಇಂತಹ ಒಂದು ತಾತ್ವಿಕ ಚಿಂತನೆಯ ಹಿನ್ನೆಲೆಯಲ್ಲಿ 'ನವಿಲು ನೌಕೆ' ಕಾದಂಬರಿಯ ಕಥೆ ರೂಪು ಪಡೆದು ಅದರ ಸಮರ್ಥನೆಯಾಗಿ ಮುಂದುವರೆಯುತ್ತದೆ.

ನಮ್ಮ ಕಣ್ಣಿಗೆ ಅಗೋಚರವಾದ ಜಗತ್ತೊಂದಿದೆ. ಅದರ ಅರಿವು ಪ್ರಜ್ಞಾರೂಪದಲ್ಲಿ ನಮ್ಮೊಂದಿಗೆ ಇರುತ್ತದೆ ನಮಗೆ ತೀರಾಹತ್ತಿರದ ವ್ಯಕ್ತಿಗಳ ಸಾವು, ನಮ್ಮ ಭಾವುಕ, ಸಂವೇದನಾಶೀಲ ಮನೋವಲಯಗಳ ಆಚೆಗೆ ಮರೆಯಾಗದೆ ನಮ್ಮೊಂದಿಗೇ ನಮ್ಮ ಪ್ರಜ್ಞಾ ಪರಿಸರಗಳಲ್ಲಿಯೇ ಉಳಿದು ಹೋಗಿರುತ್ತದೆ, ಮರೆಯುವುದಾಗಲೀ, ಸಾವಿನ ಸತ್ಯವನ್ನಾಗಲಿ ನಂಬುವುದಕ್ಕೆ ಸಾಧ್ಯವಾಗುವುದಿಲ್ಲ. ಇದಕ್ಕೆ ನಿದರ್ಶನವಾಗಿಯೇ ಇಲ್ಲಿ ಅರವಿಂದ ಶಾರದೆಯರ ಸುತ್ತ ಕಥೆ ಹೆಣೆಯಲಾಗಿದೆ. ಈ ಕಾದಂಬರಿಯ ಕೇಂದ್ರ ಪಾತ್ರ ಶಾರದೆಯ ಗಂಡ ಅರವಿಂದ ಕಂದಾಯ ಇಲಾಖೆಯ ಅಧಿಕಾರಿ, ವಿವೇಕವಂತ ಎಲ್ಲರಿಗೂ ಬೇಕಾದವನು, ಶಿವಮೊಗ್ಗೆಯ ಮಲೆನಾಡ ಪರಿಸರ ಅವನ ಭಾವುಕ ಮನಸ್ಸಿಗೆ ಆಪ್ತವಾದ ತಾಣ. ಅದು ಅವನ ಕಾರ್ಯಕ್ಷೇತ್ರವೂ ಆಗಿರುತ್ತದೆ. ಅರವಿಂದ ಬ್ರಿಟಿಷ್ ಕಾಲದ ಅಧಿಕಾರಿಗಳಂತೆ ಕುದುರೆಯೇರಿ, ಕಾರ್ಯಕ್ಷೇತ್ರಗಳಲ್ಲಿ ಅಡ್ಡಾಡಿ. ಅಲ್ಲಲ್ಲಿ ಬೀಡು ಬಿಡುವುದು ಪದ್ಧತಿಯಾಗಿರುತ್ತದೆ. ಬಿಟ್ಟ ಬೀಡಿನಲ್ಲಿ ಕ್ಯಾಂಪ್ ನಡೆಸುತ್ತಾನೆ, ಹೀಗೆ ನಡೆಸುವ ಕ್ಯಾಂಪ್ ಒಮ್ಮೆ ಬಾಗೂರಿನಲ್ಲಿ ನಡೆಸಬೇಕಾಗಿರುತ್ತದೆ. ಅಲ್ಲಿನ ಶಿರಸ್ತೇದಾರ ಆದರ್ಶವಾದಿಯಾದರೂ ವಾಸ್ತವಕ್ಕೆ ದೂರವಾಗಿರಲಾರದವನಾಗಿದ್ದ.

ಅರವಿಂದ ಮದುವೆಯಾದ ನಾಲ್ಕೇ ವರ್ಷಗಳಲ್ಲಿ ಮಡದಿ ಶಾರದೆ ಗಾಜನೂರು ಜಲಾಶಯದಲ್ಲಿ ಆಕಸ್ಮಿಕ ದುರ್ಮರಣಕ್ಕೆ ತುತ್ತಾಗಿ ಅವನದು ಒಂಟಿ ಬಾಳಾಗಿರುತ್ತದೆ. ಆದರೆ ಕಾರ್ಯ ಚಟುವಟಿಕೆ, ನಿಸರ್ಗ ಸೌಂದರ್ಯಾನುಭೂತಿಗಳಲ್ಲಿ ತನ್ಮಯನಾಗಿರುತ್ತಿದ್ದುದರಿಂದ ಸಮಯ ಹೇಗೋ ಕಳೆದು ಹೋಗುತ್ತಿತ್ತು. ಆದರೆ ಬಾಗೂರೆಂಬ ಒಂದು ಕುಗ್ರಾಮಕ್ಕೆ ಅಲ್ಲಿನ ಸ್ಥಳೀಯರ ನಡುವೆ ಗಡಿ ವಿವಾದ ಸಂಬಂಧ ಸಮಸ್ಯೆಯೊಂದನ್ನು ಪರಿಹರಿಸುವ ಜವಾಬ್ದಾರಿ ಇವನ ಹೆಗಲಿಗೆ ಬಿದ್ದು ಅಲ್ಲಿಗೆ ಬರುತ್ತಾನೆ. ಅರವಿಂದನ ಮನರಂಜನೆಗೆಂದು ಗೋಪಾಲಯ್ಯ ಒಮ್ಮೆ ಆ ಊರಿನ ದೊಡ್ಡ ಕೆರೆಯ ಪ್ರದೇಶದಲ್ಲಿ ನಡೆದಿದ್ದ ದುರಂತ ಕಥೆಯನ್ನು ಹೇಳುವ ಲಾವಣಿಯನ್ನು ಹಾಡಿಸುತ್ತಾವೆ. ಅರವಿಂದನಿಗೆ ಕಥೆ ಅತ್ಯಂತ ಕುತೂಹಲಕಾರಿ ಎನಿಸುತ್ತದೆ. ಅಲ್ಲಿ ನಡೆದಿದ್ದ ಐತಿಹಾಸಿಕ ಕಥೆಯಂತೆ, ಈಗ ಕಾಣುತ್ತಿರುವ ಕೆರೆಯು ಹಿಂದೆ ರಾಜ ರಾಣಿಯರು ವಿಹರಿಸಲೆಂದಿದ್ದ ಸರೋವರವಾಗಿತ್ತು. ಜಯವರ್ಧನ, ಚಂಪಕಮಾಲೆಯೆಂಬ ರಾಜದಂಪತಿ ಅಲ್ಲಿ ವಿಹರಿಸುತ್ತಿದ್ದರೆಂಬ ವದಂತಿಯಿದೆ, ಆ ದಂಪತಿಯ ಸುಖ ಸಂತೋಷಗಳು

ಪಕ್ಕದೂರಿನ ಪಾಳೆಗಾರನ ಆಕ್ರಮಣ ಮೋಸಗಳಿಂದ ಅಲ್ಪಾಯುಷ್ಯದ್ದಾಗಿ ಪರಿಣಮಿಸುತ್ತದೆ. ಕೋಟೆ ಪಾಳೆಗಾರನ ಕೈವಶವಾಗಿದ್ದೇ ಅಲ್ಲದೆ ರಾಜನೂ ಮಡಿಯುತ್ತಾನೆ. ಗಂಡನ ಸಾವಿನ ಆಘಾತವನ್ನು ಸಹಿಸದೆ ರಾಣಿ ನವಿಲಿನಾಕಾರದ ನೌಕೆಯೊಂದರಲ್ಲಿ ಕುಳಿತು ನಡು ನೀರಿಗೆ ಬಂದು, ನೌಕೆಯನ್ನು ಮುಳುಗಿಸಿ ತಾನೂ ಸಾಯುತ್ತಾಳೆ. ಅಲ್ಲಿನ ಜನ, ಪ್ರತಿಹುಣ್ಣಿಮೆಗೂ ನೌಕೆ ಮೇಲದ್ದು ಕಾಣಿಸಿಕೊಳ್ಳುತ್ತದೆ ಎಂದು ನಂಬುತ್ತಾರೆ.

ಈ ಕಥೆ ಅರವಿಂದನನ್ನು ಭಾವಪರವಶತೆಗೆ ಕೊಂಡೊಯ್ಯುತ್ತದೆ. ಗೋಪಾಲಯ್ಯನ ಮನೆಗೆ ಬಂದ ಅರವಿಂದನಿಗೆ ಗೋಪಾಲಯ್ಯನ ಮಗಳು ಕುಮುದಾ ಕಾಣಿಸಿಕೊಂಡಾಗ ದಿಗ್ಭ್ರಮಿತನಾಗುತ್ತಾನೆ. ಶಾರದೆಯ ಪ್ರತಿರೂಪವೋ ಎಂಬಂತೆ ಅವಳಿರುತ್ತಾಳೆ. ಅವಳಿಗೆ ನಿವೃತ್ತ ನ್ಯಾಯಾಧೀಶ ನಾಗೇಶರಾಯರ ಮಗನನ್ನು ನೋಡುವ ಪ್ರಯತ್ನ ನಡೆಯುತ್ತದೆ. ಆದರೆ ಕುಮುದಳನ್ನು ನೋಡಲು ಬರಬೇಕಾಗಿದ್ದವರು ಬರುವುದೇ ಇಲ್ಲ, ಈ ಮಧ್ಯೆ ಹೆಂಗಸರ ಮಾತಿನ ನಡುವೆ ಅರವಿಂದನ ಮಡದಿ ಶಾರದೆಯ ಪ್ರಸ್ತಾಪ ಬರುತ್ತದೆ. ವಿವರಗಳೆಲ್ಲ ಹೊರಬಂದ ಮೇಲೆ ನಾಗೇಶರಾಯರ ಸಾಕು ಮಗಳು ಬೇರೆ ಯಾರೂ ಆಗಿರದೆ ೨೫ ವರ್ಷಗಳ ಹಿಂದೆ ತಿರುಪತಿಯಲ್ಲಿ ಗೋಪಾಲಯ್ಯ ಕಳೆದುಕೊಂಡ ಸ್ವಂತ ಮಗಳೇ ಶಾರದೆ ಆಗಿರುತ್ತಾಳೆ. ಇದನ್ನು ತಿಳಿದ ಗೋಪಾಲಯ್ಯನಿಗೆ ಶಾರದೆಯ ಆಕಸ್ಮಿಕಸಾವಿನ ಸುದ್ದಿಯೂ ಕೇಳಿ ಬರುತ್ತದೆ. ವಿಷಯ ಅರವಿಂದನಿಗೂ ತಿಳಿಯುತ್ತದೆ. ಅಂತೆಯೇ ಕುಮುದಳಲ್ಲಿ ಶಾರದೆಯ ಪ್ರತಿರೂಪ ಕಂಡುದಕ್ಕೆ ಸಮರ್ಥನೆಯೂ ದೊರೆಯುತ್ತದೆ. ಇದೆಲ್ಲದರ ನಂತರ ಅರವಿಂದ ಕುಮುದಳನ್ನು ಬೇಡಿ ಹೆಂಡತಿಯಾಗಿ ಪಡೆಯುತ್ತಾನೆ, ಕಥೆ ಸುಖಾಂತವಾಗುತ್ತದೆ.

ನವಿಲು ನೌಕೆ ಕಥೆಗೂ ಈ ಕಾದಂಬರಿಯ ಕಥೆಗೂ ಯಾವುದೇ ರೀತಿಯ ನೇರ ಸಂಬಂಧವಿಲ್ಲ ಆದರೂ ಅದನ್ನು ಈ ಕಾದಂಬರಿಯಲ್ಲಿ ತರುವುದಕ್ಕೆ ಕಾರಣ ಸ್ಪಷ್ಟವಾಗುವುದಿಲ್ಲ. ಘಟನೆಗಳು ಸಾವಯವ ಸಂಬಂಧವನ್ನು ಹೊಂದಿರದೆ ಕೇವಲ ಕಥೆ ಬೆಳೆಸಲು ಪೂರ್ವ ನಿಯೋಜಿತವೆನಿಸುತ್ತದೆ. ಬಹುಶಃ ಲೇಖಕರ ದೃಷ್ಟಿಯಲ್ಲಿ ಅನಿರೀಕ್ಷಿತ ಘಟನೆಗಳೇ ಅಗೋಚರ, ಅಮೂರ್ತ ನೆಲೆಯಲ್ಲಿ ಯಾವುದೋ ಒಂದು ಸಂಬಂಧ ಸೂತ್ರವನ್ನು ಹೆಣೆದಿರುತ್ತದೆ ಎಂಬ ನಂಬಿಕೆ ಸಮರ್ಥನೀಯವಾಗಿ ಕಾರಣವಾಗಿರಬಹುದು ಅಲ್ಲದೆ ಲೇಖಕರು, ಒಂದು ಕಡೆ "ನಡೆದುದರ ಹಿಂದುಗಡೆಯಲ್ಲಿ ಒಂದು ಕಾರಣ ಪರಂಪರೆಯಾಗಲೀ, ಒಂದು ಅದೃಷ್ಟ ಸಂಕಲ್ಪವಾಗಲೀ ಇದ್ದಿರಲಾರದು ಎಂದು ಹೇಳಲಾಗುವುದಿಲ್ಲ, ನಡೆದ ಸಂಗತಿ ಮಹತ್ವದ್ದಾದಾಗ ಮನಸ್ಸು ಕಣ್ಣು ಕಾಣಬಹುದಾದ್ದರ ಆಚೆಗೆ

ಹವಣಿಸುತ್ತದೆ...... ಹೆಂಡತಿಯ ಸಾವಿನಿಂದ ಒಡೆದು ಎರಡಾದ ಅರವಿಂದನ ಬಾಳು ಎರಡು ಪ್ರವಾಹವಾಗಿ ಹರಿಯುತ್ತದೆ. ಈ ಪ್ರವಾಹಗಳು ಮತ್ತೆ ಬಂದು ಸೇರಿ ಆತನ ಬಾಳು ಒಂದಾಗುವುದೇ ಇಲ್ಲಿನ ಕಥೆ" ಎಂದ ವಿವರಿಸಿ ಓದುಗರನ್ನು ಒಪ್ಪಿಕೊಳ್ಳುವಂತೆ ಮಾಡುವ ಪ್ರಯತ್ನವಿದ್ದರೂ, 'ನವಿಲು ನೌಕಕೆ' ಪ್ರಸಂಗಕ್ಕೂ ಅರವಿಂದನ ಬಾಳಿಗೂ ಯಾವುದೇ ಸಂಬಂಧವಿಲ್ಲದಿರುವಾಗ, ಅದರ ಪ್ರಸ್ತುತತೆ ಕಾದಂಬರಿಯಲ್ಲಿ ಹೇಗೆಂಬುದು ಅರ್ಥವಾಗುವುದಿಲ್ಲ.

**ಮಂಜು ಮುಸುಕಿದ ದಾರಿ ೧೯೬೫:** ಚಿತ್ರಲೇಖಾ ಮತ್ತು ಊರ್ವಶಿ ಕಾದಂಬರಿಗಳ ಮಧ್ಯೆ ೧೯೬೫ರಲ್ಲಿ "ಮಂಜು ಮುಸುಕಿದ ದಾರಿ" ಕಾದಂಬರಿಯನ್ನು ರಚಿಸಿದರು. ಈ ಕಾದಂಬರಿ ದುಃಖಕ್ಕೆ ಕಾರಣವೇನೆಂಬುದರ ಶೋಧದ ಬೆನ್ನು ಹತ್ತಿ ಮುಂದುವರೆಯುತ್ತದೆ. ಇನಾಂದಾರರು ಮೊದಲಿನಿಂದಲೂ ಕಾದಂಬರಿಯನ್ನು ಜೀವನಾನುಭವದ ಒಂದು ಬಗೆಯ ಸಂಶೋಧನೆ ಎಂದೇ ಭಾವಿಸಿರುವವರು. ತೊಡಕು ತುಂಬಿದ ಬಾಳಿನ ಅನುಭವಗಳಿಗೆ ಕಾರಣ, ಅರ್ಥಗಳನ್ನು ಹುಡುಕುವುದು ಅವರ ಪ್ರವೃತ್ತಿ. ಇದರ ಪರಿಣಾಮವಾಗಿಯೇ ಕಾದಂಬರಿಯ ಸೃಷ್ಟಿ ಜೀವನದಲ್ಲಿ ದುಃಖಗಳಿಲ್ಲದೆ ಬದುಕುವ ಮನುಷ್ಯ ಇರಲು ಸಾಧ್ಯವೇ ಇಲ್ಲ. ಒಬ್ಬೊಬ್ಬರಿಗೆ ಒಂದೊಂದು ತೆರನಾದ ದುಃಖಗಳು ಕಾಡುತ್ತವೆ. ಈ ದುಃಖಗಳಿಗೆ ಕಾರಣಗಳು ಹಲವಾರು, ಸಮಾಜ, ಅನ್ಯರು, ಪರಿಸರ ಹೀಗೆ ಎಷ್ಟೋ ಹೊರಗಿನ ಕಾರಣಗಳಲ್ಲದೆ ಸ್ವತಃ ತಾನೇ ತನ್ನ ಬದುಕಿನ ದುಃಖ ಕಷ್ಟಗಳಿಗೆ ಅಥವಾ ದುಃಖ ಪರಂಪರೆಗೇ ಕಾರಣನಾಗಬಹುದು. ಈ ಕಾರಣಗಳನ್ನು ಕಂಡು ಹಿಡಿಯುವ ಕುತೂಹಲದ ಪ್ರಯತ್ನವಾಗಿ ಕಾದಂಬರಿಯ ರಚನೆ. ಈ ಕಾದಂಬರಿಯಲ್ಲಿನ ಒಂದು ಪಾತ್ರ ನುಡಿಯುವಂತೆ" ಕಾಲ ನಿಲ್ಲುವುದಿಲ್ಲ. ಬದುಕು ಮುಂದುವರಿಯಬೇಕು. ಇಂಥ ರೀತಿಯಲ್ಲಿಯೇ ಅದು ಮುಂದುವರಿಯುವಂತೆ ಮಾಡುತ್ತೇನೆ ಎನ್ನುವುದು ವೃಥಾಭಿಮಾನ. ಯಾಕೆಂದರೆ "ಬದುಕಿದ್ದ ಮನುಷ್ಯ ಒಂದೊಂದು ಕ್ಷಣಕ್ಕೂ ಒಂದೊಂದು ನಿರ್ಣಯವನ್ನು ಕೈ ಕೊಳ್ಳಬೇಕು. ಆತನ ತಿಳಿವು, ಕಾಣ್ಕೆ, ಸಂಸ್ಕಾರ, ಬುದ್ಧಿ ಹಿನ್ನೆಲೆ, ಪರಿಸ್ಥಿತಿ, ಎಲ್ಲವೂ ಆ ನಿರ್ಣಯವನ್ನು ರೂಪಿಸುತ್ತದೆ. ಆ ಕ್ಷಣದ ಮಟ್ಟಿಗೆ ನಿರ್ಣಯ ಸರಿಯಾದದ್ದು ಎಂದುಕೊಂಡೇ ಅದನ್ನು ಕೈ ಕೊಳ್ಳುತ್ತಾನೆ, ಅದಕ್ಕನುಗುಣವಾಗಿ ನಡೆಯುತ್ತಾನೆ, ಆದರೆ ಆ ನಿರ್ಣಯ ಕಾಲಾಬಾಧಿತವಾಗಿ ನಿಲ್ಲಬೇಕಾದರೆ ಆತನ ತಿಳಿವು ತಿಳಿಯಾಗ ಬೇಕು; ಪಾರದರ್ಶಿಯಾಗ ಬೇಕು. ಮನುಷ್ಯನ ಬುದ್ಧಿಗೆ ಧಾತುಗತವಾಗಿ ಮುಸುಕಿದ ಮಂಜು ಸರಿಯಬೇಕು; ಮಾನವ ತ್ರಿಕಾಲಜ್ಞನಾಗಬೇಕು. ಅಲ್ಲಿಯ ವರೆಗೆ ಬುದ್ಧಿಯು ಪರಿಮಿತವಾದ ಕಾಣ್ಕೆ ಅನೇಕ ಸಂದರ್ಭಗಳಲ್ಲಿ ವಿಪರೀತ ಪರಿಣಾಮಗಳಿಗೆ

ಎಡೆಕೊಡುತ್ತದೆ" ಎಂದು ಹೇಳುವ ಲೇಖಕರ ಮಾತಿಗೆ ಕಾದಂಬರಿಯ ಪ್ರಧಾನ ಪಾತ್ರವಾದ ಶ್ರೀಧರನ ಬದುಕೇ ಸಾಕ್ಷಿ.

ಕಥಾನಾಯಕ ಶ್ರೀಧರ ಋಣಾನುಬಂಧವೋ ಎಂಬಂತೆ ಕಾಯಿಲೆಯಿಂದ ನರಳುವ ನಾಯಿ ಜಿಮ್ಮಿಯನ್ನು ಬೆಂಗಳೂರಿನಿಂದ ತರುವುದರೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಅವನಿಗೆ ಮಕ್ಕಳಿಲ್ಲದ ಕೊರತೆಯನ್ನು ನಾಯಿಯ ಮೇಲಿನ ಅಪಾರವಾದ ಪ್ರೀತಿಯಿಂದ ಪರಿಹರಿಸಿಕೊಳ್ಳುತ್ತಾನೆ. ಆದರೆ ನಾಯಿಯ ಮೇಲಿನ ಪ್ರೀತಿಯಿಂದಾಗಿ, ತಾನು ಅವನ ಪ್ರೀತಿಯಿಂದ ವಂಚಿತಳಾಗುತ್ತಿದ್ದೇನೆಂಬ ಅರಿವು ಮೂಡುತ್ತಿದ್ದಂತೆಯೇ ಲಕ್ಷ್ಮಿಗೆ ನಾಯಿಯ ಮೇಲೆ ಅಪಾರವಾದ ಸಿಟ್ಟು ಮೂಡುತ್ತದೆ. ತಮ್ಮಿಬ್ಬರ ಮಧ್ಯೆ ಅಡ್ಡಿಯಾಗಿದ್ದ ನಾಯಿಯನ್ನು ಕೊಲ್ಲಿಸುತ್ತಾಳೆ. ನಾಯಿಯ ಸಾವು ಶ್ರೀಧರನನ್ನು ಅತಿಯಾಗಿ ಕಾಡುತ್ತಿದ್ದರೆ, ಲಕ್ಷ್ಮಿಯನ್ನು ಕನಸಿನ ಮೂಲಕ ಕಾಡುತ್ತದೆ. ಜೊತೆಗೆ ಅವಳಲ್ಲಿ ನಾಯಿಯನ್ನು ಕೊಂದ ಪಾಪ ಪ್ರಜ್ಞೆ ಮತ್ತಷ್ಟು ಜರ್ಝರಿತಳಾಗುವಂತೆ ಮಾಡುತ್ತದೆ. ಸದಾ ಕನಸಿನಲ್ಲಿ ಕಾಡುವ ನಾಯಿ ಅವಳಿಗೆ ಭರಿಸಲಾಗದ ಯಾತನೆಗೆ ಕಾರಣವಾಗುತ್ತದೆ. ಇದರ ಮಧ್ಯೆ ಅಪರೂಪಕ್ಕೆ ಲಕ್ಷ್ಮಿ ಬಸಿರಾಗುತ್ತಾಳೆ. ಅವಳ ಉದ್ವಿಗ್ನ ಮನಃ ಸ್ಥಿತಿಯನ್ನು ಶಾಂತಗೊಳಿಸಲು ಚುಚ್ಚುಮದ್ದು ಕೊಡಿಸುತ್ತಾನೆ. ಕಡೆಗೆ ಹೆರಿಗೆಯ ಸಮಯದಲ್ಲಿ ಮಗುವಿನ ಆರೋಗ್ಯದ ಬಗ್ಗೆ ಸಂದೇಹವುಂಟಾಗಿ ಪರೀಕ್ಷಿಸಿದಾಗ ಬುದ್ಧಿಮಾಂದ್ಯಳೆಂಬುದು ಖಚಿತವಾಗುತ್ತದೆ: ಜೊತೆಗೆ ಅಪಸ್ಮಾರವೂ ಅವಳನ್ನು ಕವಿಯುತ್ತದೆ. ಇದೆಲ್ಲವೂ ಲಕ್ಷ್ಮಿಯನ್ನು ಮತ್ತಷ್ಟು ಸಂಕಟಕ್ಕೆ ದೂಡುತ್ತದೆ. ಆದರೂ ದಂಪತಿ ಬುದ್ಧಿಮಾಂದ್ಯಮಗಳನ್ನು ಸಹಿಸಿಕೊಳ್ಳಲೇ ಬೇಕಾಗುತ್ತದೆ.

ಮುಂದೆ ಲಕ್ಷ್ಮಿಗೆ ಹುಟ್ಟಿದ ಇಬ್ಬರು ಮಕ್ಕಳು ಶಾರದಾ, ಮೋಹನ– ಸ್ವಸ್ಥ, ಸುಂದರವಾಗಿರುತ್ತಾರೆ. ಆದರೆ ಸುಮತಿಯ ಸ್ಥಿತಿ ಮಾತ್ರ ಇದ್ದಹಾಗೇ ಇರುವುದು ಅವರ ದುಃಖಕ್ಕೆ ಕಾರಣವಾಗುತ್ತದೆ. ಮುಂಬಯಿಯಲ್ಲಿ ಎಷ್ಟೇ ಒಳ್ಳೆಯ ಚಿಕಿತ್ಸೆಗೆ ಪ್ರಯತ್ನಿಸಿದರೂ ಫಲಕಾರಿಯಾಗದೆ, ಲಕ್ಷ್ಮಿಯ ಮನಸ್ಸಿಗೆ ವಿರುದ್ಧವಾಗಿ ಬೆಂಗಳೂರಿನಲ್ಲಿ ಇರಿಸಬೇಕಾಗುತ್ತದೆ. ಇಲ್ಲಿಯೂ ಪರಿಹಾರ ಸಿಗದೆ ಕಡೆಗೆ ಸಾವೇ ಪರಿಹಾರವೆಂಬಂತಾಗುತ್ತದೆ, ಶ್ರೀಧರ– ಲಕ್ಷ್ಮಿಯರ ದುಃಖ ಮೇರೆ ಮೀರಿದ್ದಾಗುತ್ತದೆ. ಲಕ್ಷ್ಮಿಗೆ ಒಳಗೇ ಕೊರೆಯುತ್ತಿರುವ ಪಾಪ ಪ್ರಜ್ಞೆ, ಸುಮತಿಯ ಸಾವು– ಆಘಾತಗಳಾಗಿ ಮೇಲಿಂದ ಮೇಲೆ ಎರಗಿ ಸಾವಿಗೆ ದೂಡುತ್ತವೆ.

ಶ್ರೀಧರ, ಗೋಪಾಲ ಆತ್ಮೀಯ ಗೆಳೆಯರು. ಅವರಿಬ್ಬರೂ ಒಂದೊಂದು ರೀತಿಯಲ್ಲಿ ಕರುಣಾಜನಕ ಸ್ಥಿತಿಯಲ್ಲಿ ಬದುಕುತ್ತಾರೆ. ಶ್ರೀಧರನ ಬದುಕಿನ ದುರಂತದ ಕಥೆ ಹೀಗಿದ್ದರೆ. ಮದುವೆಯನ್ನೇ ಬೇಡವೆಂದು ನಿರಾಕರಿಸುತ್ತಿದ್ದ ಗೋಪಾಲ

ಕಡೆಗೆ ಗೆಳೆಯನ ಒತ್ತಾಯದಿಂದ ಮದುವೆಯಾಗುತ್ತಾನೆ. ಗೆಳೆಯನ ಒತ್ತಾಯ ಪೂರ್ವದಲ್ಲಿ ಅವನಿಗಿದ್ದ ಭೀತಿಯೆಂದರೆ, ಅಜ್ಜ, ತಂದೆಯರು ದುಂದುಗಾರರಾಗಿ, ವಿಲಾಸಿಗಳಾಗಿ ಸಾಲಗಾರರಾಗಿ, ಅನೇಕ ಪಾಪಗಳ ಹೊರೆ ಹೊತ್ತವರಾಗಿ ಇದ್ದುದರಿಂದ– ಅವರು ಮಾಡಿದ ಪಾಪ ಪುಣ್ಯಗಳು ಪಾಪ ಕರ್ಮಗಳು ತಲೆತಲಾಂತರವಾಗಿ ತನ್ನವರೆಗೂ ಹರಿದು ಬರುತ್ತದೆ ಎಂದು ನಂಬಿದ್ದ ಕಾರಣ, ಮದುವೆಯಿಲ್ಲದೆ ಉಳಿದು ತನ್ನ ತಲೆಮಾರಿಗೇ ಪಾಪ ಪರಂಪರೆಯನ್ನು ಕೊನೆಗಾಣಿಸಬೇಕೆಂದಿದ್ದ. ಆದರೆ ಗೆಳೆಯನ ಒತ್ತಾಯ ಒಂದು ಕಡೆಯಿದ್ದರೆ ಕಡೆಗೆ ಶ್ರೀಧರನ ಬದುಕಿನಲ್ಲಿ ಘಟಿಸುತ್ತಿದ್ದ ಸನ್ನಿವೇಶ ಸಂದರ್ಭಗಳ ಅನುಭವದಿಂದ, ಕಾಣದ ಕೈಯೊಂದು ಅವರವರ ಬಾಳನ್ನು ಅರಳಿಸುತ್ತದೆ, ಮುಗಿಸುತ್ತದೆ. ಅದರಲ್ಲಿ ತಮ್ಮ ನಿರ್ಣಯವೇ ಕೊನೆಯದೆಂದು ಹೇಳಲಾಗುವುದಿಲ್ಲ, ಕಾಲ ನಮ್ಮನ್ನು ನೂಕುತ್ತದೆ. ನಾವು ಎಚ್ಚತ್ತಿದ್ದರೂ ಅದರ ಕೈವಾಡಕ್ಕೆ ಮಣಿಯಲೇ ಬೇಕೆಂಬುದನ್ನು ಗ್ರಹಿಸಿ, ಮದುವೆಗೆ ಒಪ್ಪಿ, ಶ್ರೀಧರ, ಶಂಕ್ರಪ್ಪನ ಮಗಳು ಸುಮಿತ್ರೆಯನ್ನು ಮದುವೆಯಾಗುತ್ತಾನೆ. ಗೋಪಾಲನ ಬಾಳಿನಲ್ಲಿ ಇದರಿಂದ ಶಾಂತಿ, ಸುಖ, ಸಮೃದ್ಧಿಗಳು ಲಭಿಸುತ್ತವೆ. ಸುಮಿತ್ರೆಯೂ ಸುಖದ ಸುಪ್ಪತ್ತಿಗೆಯಲ್ಲಿ ಸಾರ್ಥಕ ಬದುಕನ್ನು ಅನುಭವಿಸುತ್ತಾಳೆ. ಸಾರ್ವಜನಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳುತ್ತಾಳೆ. ಸುಖದ ಉತ್ತುಂಗದಲ್ಲಿ ಮೈ ಮರೆತು ಇರುವಾಗಲೇ ಸಮಸ್ಯೆಗಳು ನುಸುಳುತ್ತವೆ. ಪರಂಪರೆಯಿಂದ ಸಾಗಿ ಬರಬಹುದಾದ ಪಾಪಗಳ ನಿವಾರಣೆಗೆಂದು ಮಕ್ಕಳನ್ನು ಬೇಡವೆಂದುಕೊಂಡಿದ್ದ ಗೋಪಾಲ ಹತ್ತುವರ್ಷಗಳ ಕಾಲ ನಿರ್ಭೀತನಾಗಿದ್ದ. ಮಕ್ಕಳಿಲ್ಲದೆ ಬದುಕಿನಲ್ಲಿ ಕವಿದಿದ್ದ ಶೂನ್ಯತೆಯನ್ನು ಮರೆಯಲು ಸಾಮಾಜಿಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ ಸುಮಿತ್ರೆ ಸ್ವಲ್ಪ ಸ್ವಲ್ಪವಾಗಿ ಮಿತಿಗಳನ್ನು ಮೀರುತ್ತಾ ಹೋಗುತ್ತಾಳೆ. ಸಿಕ್ಕಿದ್ದ ಸ್ವಾತಂತ್ರ್ಯವನ್ನು ಸ್ವಚ್ಛಂದವೆನ್ನುವಂತೆ ಪರಿವರ್ತಿಸುತ್ತಾಳೆ. ಆದರೂ ಗೋಪಾಲ ತಾಳ್ಮೆ ಗೆಡದೆ ಸಹಿಸಿಕೊಂಡಿರುತ್ತಾನೆ. ಹತ್ತು ವರ್ಷದ ನಂತರ ಬಸಿರಾದ ಸುಮಿತ್ರೆಗೆ ಹೆರಿಗೆಯಾದಾಗ ಮಗು ಜೀವಂತವಾಗಿಲ್ಲದೆ ಹೋದದ್ದು ಅವನ ಮನಸ್ಸು ಹಿಂದಿನ ನೆನಪುಗಳಿಂದಾಗಿ, ಭಯ, ತಲ್ಲಣ, ಆತಂಕಗಳಿಂದ ತತ್ತರಿಸುತ್ತಿದ್ದರೆ ಸುಮಿತ್ರೆ ಆಸ್ಪತ್ರೆ ಕಟ್ಟಡದ ಕಂಟ್ರಾಕ್ಟರ್ ಸುಬ್ಬರಾಯನೊಂದಿಗೆ ಅತ್ಯಂತ ಸಲುಗೆಯನ್ನು ಬೆಳೆಸಿಕೊಳ್ಳುತ್ತಾಳೆ. ಗೋಪಾಲನ ಮೌನ ನಿರ್ಲಿಪ್ತತೆಗಳು ಅವಳಿಗೆ ಪರೋಕ್ಷವಾಗಿ ಸಹಕಾರಿಯಾಗುತ್ತವೆ. ಸಲುಗೆ ಸ್ನೇಹದ ಸರಹದ್ದುಗಳನ್ನು ದಾಟಿ ಬಿಡುತ್ತದೆ. ಅವನೊಂದಿಗೆ ಸುಖ–ಸರಸ–ಸಂತೋಷಗಳು ಮೇರೆ ಮೀರುತ್ತಿರುತ್ತವೆ, ಪರಸ್ಪರ ಉಡುಗೊರೆಗಳ ವಿನಿಮಯವೂ ನಡೆಯುತ್ತದೆ. ಸುಮಿತ್ರೆ ಸುಬ್ಬರಾಯನಿಗೆ ಕಾಣಿಕೆಯಾಗಿ ನೀಡಿದ ಉಂಗುರ ಗೋಪಾಲನ ಕಣ್ಣಿಗೆ ಬಿದ್ದು, ಅವರಿಬ್ಬರ

ನಡುವಿನ ಸ್ನೇಹದಾಳವನ್ನು, ಸ್ವರೂಪವನ್ನು ಅನೈತಿಕ ಸಂಬಂಧವನ್ನು ಊಹಿಸುತ್ತಾನಾದರೂ ಅವಳಿಗೆ ಬುದ್ಧಿ ಹೇಳಲು ಮುಂದಾಗುವುದೇ ಇಲ್ಲ. ಕಾರಣ, ಇದಕ್ಕೆ ತನ್ನನ್ನೇ ಹೊಣೆಯಾಗಿಸಿಕೊಳ್ಳುತ್ತಾನೆ. ಸುಮಿತ್ರೆ ಅದೃಷ್ಟವಶಾತ್ ಎಚ್ಚರಗೊಂಡು ತನ್ನನ್ನು ತಾನೇ ತಿದ್ದಿಕೊಂಡು ಮಾಡಿದ್ದಕ್ಕಾಗಿ ವ್ಯಥೆ ಪಡುತ್ತಾಳೆ. ಸ್ವಲ್ಪ ಕಾಲ ದುಃಖದ ಮಂಜು ಕರಗಿದಂತೆನಿಸಿದರೂ, ಮತ್ತೆ ಮಂಜು ಮುಸುಕಿ ದಾರಿ ಕಾಣದಾಗುತ್ತದೆ. ಗೋಪಾಲನ ದುಃಖಕ್ಕೆ ಸುಮಿತ್ರೆ ಕಾರಣವಾದರೆ, ಶ್ರೀಧರನ ದುಃಖಕ್ಕೆ ಲಕ್ಷ್ಮಿಯೇ ಕಾರಣಳಾಗುತ್ತಾಳೆ, ಒಟ್ಟಾರೆಯಾಗಿ ಈ ಇಬ್ಬರ ಬದುಕಿನಲ್ಲಿ, ಮಂಜು ಮುಸುಕಿದ ದಾರಿಗಳೇ ಶಾಶ್ವತವಾಗಿ ಉಳಿಯುತ್ತವೆ.

ಲಕ್ಷ್ಮಿಗೆ ಹೆರಿಗೆ ಮಾಡಿಸುವಾಗ ತಾನು ಕೊಟ್ಟ ಚುಚ್ಚುಮದ್ದೇ 'ಸುಮತಿ'ಯ ಬುದ್ಧಿ ಮಾಂದ್ಯತೆಗೆ ಕಾರಣವಾಗಿರಬಹುದೆಂಬ ಅನುಮಾನವೇ ಗೋಪಾಲನನ್ನು ಕಾಡುತ್ತಿರುತ್ತದೆ. ಹಾಗೆಯೇ ನಾಯಿಯ ಸಾವಿಗೆ ತಾನೇ ಕಾರಣವೆಂಬ ನಂಬಿಕೆ ಲಕ್ಷ್ಮಿಯನ್ನು ದುಃಖ ಪರಂಪರೆಗೆ ದೂಡುತ್ತದೆ. ಕಡೆಗೆ ಸಾವಿನ ದುರಂತಕ್ಕೆತಳ್ಳುತ್ತದೆ, ಹೀಗಾಗಿ ಎಲ್ಲರೂ ಒಂದಿಲ್ಲೊಂದು ರೀತಿಯಲ್ಲಿ ಮಂಜು ಮುಸುಕಿದ ದಾರಿಗಳಲ್ಲಿಯೇ ಸಾಗ ಬೇಕಾದ ಅನಿವಾರ್ಯತೆ ಸೃಷ್ಟಿಯಾಗುತ್ತದೆ.

ಬದುಕಿನಲ್ಲಿನ ಒತ್ತಡಗಳು, ಕಷ್ಟ ಪರಂಪರೆಗಳು ನಮ್ಮ ವಿಚಾರ ಸರಣಿಯನ್ನೇ ಬದಲಾಯಿಸಿ ಬಿಡುತ್ತದೆ. ಶ್ರೀಧರನಿಗೆ ಪಾಪ-ಪುಣ್ಯ ಕರ್ಮಗಳಲ್ಲಿ ವಿಶ್ವಾಸವಿಲ್ಲ. ಆದರೆ ಸುಮತಿಯ ಸ್ಥಿತಿಗಾಗಿ ಹತಾಶೆಗೊಂಡಿದ್ದು, ಮನೆಯವರ ಒತ್ತಾಯದ ಮೇಲೆ 'ಶಾಂತಿ' ಹರಕೆಗಳಿಗೆ ಮೊರೆ ಹೋಗುತ್ತಾನೆ. ಗೋಪಾಲ ವೃತ್ತಿಯಲ್ಲಿ ಡಾಕ್ಟರು ವೈಜ್ಞಾನಿಕವಾಗಿ ವೈಚಾರಿಕವಾಗಿ ಆಲೋಚಿಸಬಲ್ಲವನಾಗಿದ್ದರೂ ಪಾಪ, ಪುಣ್ಯ, ಕರ್ಮಗಳಲ್ಲಿ ನಂಬಿಕೆಯಿಡುತ್ತಾನೆ. ಹಿಂದಿನವರು ಮಾಡಿದ ಕರ್ಮ ಪರಂಪರೆ-ಪಾಪಗಳು ತಲೆ ತಲಾಂತರಕ್ಕೂ ಹರಿದು ಬರುತ್ತದೆ ಎಂದು ನಂಬಿ, ಅದನ್ನು ತಡೆಗಟ್ಟಲು ಮದುವೆಯನ್ನೇ ಬೇಡವೆನ್ನುತ್ತಾನೆ.

ಈ ಕಾದಂಬರಿಯಲ್ಲಿ ವೈಚಾರಿಕತೆಗಿಂತ ಭಾವನಾ ವಿಲಾಸವೇ ಹೆಚ್ಚಿಗೆ ಕೆಲಸ ಮಾಡಿದೆ. ವ್ಯಕ್ತಿಯಲ್ಲಿನ ಪಾಪ ಪ್ರಜ್ಞೆಯ ಪರಿಣಾಮಗಳ ಸ್ವರೂಪ ದರ್ಶನ, ಸಂವೇದನಾಶೀಲ ಮತ್ತು ಭಾವುಕತೆಯುತ್ತಲೇ ಬಾಗುವ ಪಾತ್ರಗಳು, ಕಾಣಿಸಿಕೊಳ್ಳುತ್ತವೆ. ಪಾತ್ರಗಳ ದುರಂತಕ್ಕೆ ಪಾತ್ರಗಳೇ ಕಾರಣವಲ್ಲದಿದ್ದರೂ ದುರಂತಗಳು ಸಂಭವಿಸುತ್ತದೆ, ಬಹುಶಃ ಇದು ಲೇಖಕರ ನಂಬಿಕೆಯಂತೆ ವಿಧಿಯ ಕೈವಾಡವೇ ಆಗಿದೆ. ಕುಟುಂಬ, ಪಾತ್ರ ಕೇಂದ್ರಿತವಾಗಿಯೇ ಕಥೆ ಮುಂದುವರೆಯುತ್ತದೆ. ಸಮಕಾಲೀನ ಸಾಮಾಜಿಕ ಪರಿಸರವಾಗಲೀ, ವೈಚಾರಿಕ ನಿಲುವುಗಳಾಗಲೀ ಇಲ್ಲಿ ಕಾಣುವುದಿಲ್ಲ ಎಲ್ಲ ಕಾದಂಬರಿಗಳಲ್ಲಿಯೂ

ಕಾಣಿಸಿಕೊಳ್ಳುವಂತೆ ಜೀವನ, ಸಂಪ್ರದಾಯ, ಪರಂಪರೆ, ನಂಬಿಕೆ, ಕರ್ಮ ಸಿದ್ಧಾಂತಗಳಲ್ಲಿನ ಆಸ್ಥೆ, ವಿಶ್ವಾಸಗಳೇ ಇಲ್ಲಿಯೂ ಗೋಚರಿಸುತ್ತವೆ.

**ಯಾತ್ರಿಕರು ೧೯೭೬:** ಸದಾ ಪ್ರಯೋಗಶೀಲತೆಗೆ, ಹೊಸ ಹೊಸ ಕಥಾ ಆವಿಷ್ಕಾರಗಳಿಗೆ ತುಡಿವ ಮನಸ್ಸು ಲೇಖಕರದು, ಸಾಮಾಜಿಕ, ಕೌಟುಂಬಿಕ, ರಾಜಕೀಯ ಕಥಾನಕಗಳ ಜೊತೆಗೆ ವೈವಿದ್ಯತೆಯನ್ನು ಸೇರ್ಪಡಿಸುವ ದೃಷ್ಟಿಯಿಂದ, 'ಯಾತ್ರಿಕರು' ಎಂಬ ವಿಭಿನ್ನ ಪ್ರದೇಶ, ಸಂಸ್ಕೃತಿ, ಕಥಾನಕವನ್ನು ಒಳಗೊಂಡ ಕಾದಂಬರಿಯನ್ನು ೧೯೭೬ ರಲ್ಲಿ ರಚಿಸಿದರು. ಈ ಕಾದಂಬರಿಗೆ "ಡೆತ್ ಆಫ್ ಅಹುಸ್ಯುರಸ್" ಎನ್ನುವ ಕಥೆಯೊಂದು ಪ್ರೇರಣೆ ನೀಡಿದೆ. ಈ ಕಾದಂಬರಿಯಲ್ಲಿನ ಕಥೆಯ ಸ್ವರೂಪವನ್ನು ಅವರು ಹೀಗೆ ವಿವರಿಸುತ್ತಾರೆ. "ಈ ಕಥೆ ಈ ಕಾಲದ್ದಲ್ಲ ನಮ್ಮ ಸಾಂಸ್ಕೃತಿಕ ಪರಂಪರೆಗೆ ಸಂಬಂಧಿಸಿದ್ದೂ ಅಲ್ಲ. ಬೇರೆ ಜನಗಳ ಕಥೆ; ಹಳೆಯ ಕಾಲದ್ದು, ಬೇರೊಂದು ಸಾಂಸ್ಕೃತಿಕ ಹಿನ್ನೆಲೆಗೆ ಸೇರಿದ್ದು. ಯೇಸುಕ್ರಿಸ್ತನು ಶಿಲುಬೆಯನ್ನು ಏರಿದ ನಂತರ ಅವನ ಸಾವು ಒಂದು ಧರ್ಮ ಜಾಗೃತಿಯ ಮೂಲವಾಯಿತು" ಅಂತಹ ಒಂದು "ಚೇತನ ಅಂದಿನ ಅಪನಂಬಿಕೆಯ ಸನ್ನಿವೇಶದಲ್ಲಿ ಬೇಡವೆಂದವರ ಹೃದಯಗಳನ್ನೂ ಹೇಗೆ ಅಲ್ಲಾಡಿಸಿತು ಎನ್ನುವುದು ಮಾನವೀಯ ದೃಷ್ಟಿಯಿಂದ ಒಂದು ಹೃದ್ಯ ಸನ್ನಿವೇಶ" – ಎಂದು ಹೇಳಿದ್ದೇ ಅಲ್ಲದೆ ಆ ಸನ್ನಿವೇಶವನ್ನು ತಮ್ಮ ಕಾದಂಬರಿಯಲ್ಲಿ ಸಮರ್ಥವಾಗಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ.

'ಯಾತ್ರಿಕರು' ಕಾದಂಬರಿಯಲ್ಲಿ ಒಂದು ಗುಂಪು ಜೆರುಸಲೇಂ ಕಡೆಗೆ ಹೊರಟಿದೆ. ಈ ಗುಂಪು ಒಂದು ಮಿನಿ ವಿಶ್ವದಂತಿದೆ, ಈ ಗುಂಪಿನಲ್ಲಿ ಅಪರಿಚಿತರಾದ ಆತ – ಆಕೆ ಎಂಬಿಬ್ಬರು ವಿಚಿತ್ರ ಪಾತ್ರಗಳು ಅವರ ನಡುವಿನ ಸಂಬಂಧಗಳು ಹುಟ್ಟಿಕೊಳ್ಳುವ ರೀತಿಯೂ ಒಂದು ವಿಚಿತ್ರವೇ, ತಂಗು ಮನೆಯೊಂದರಲ್ಲಿ ಈ ಗುಂಪು ಉಳಿದುಕೊಳ್ಳುತ್ತದೆ. ಗುಂಪಿನಲ್ಲಿ ಬಗೆಬಗೆಯ ಜನರಿದ್ದಾರೆ, ಯಾರು ಯಾರು ಏನೆಂದು ಹೇಳಿಕೊಳ್ಳಲು ಸಾಧ್ಯವಿಲ್ಲ, ಎಲ್ಲರದೂ ಮುಖವಾಡಗಳೇ, ವಿಚಿತ್ರವೆಂದರೆ ತಂಗುಮನೆಯಲ್ಲಿ ಇರುವವರೇ ಅಲ್ಲಿಗೆ ಬರುವ ಯಾತ್ರಿಕರನ್ನು ಸುಲಿದುಕೊಂಡು ಬದುಕುತ್ತಾರೆ. ಒಬ್ಬೊಬ್ಬರ ನಡವಳಿಕೆಯೂ ಒಂದೊಂದು ಬಗೆಯಲ್ಲಿ ವಿಚಿತ್ರ, ಆದರೆ ಆ ನಡವಳಿಕೆಗೆ ಅವರದೇ ಆದ ಸಮರ್ಥನೆಗಳಿರುತ್ತವೆ, ಕರೆದ ಯಾವ ಯಾತ್ರಿಕನ ಜೊತೆ ಮಲಗುವುದೂ ಪಾಪವಲ್ಲ; ಏಕೆಂದರೆ ಲೋಕೋದ್ಧಾರನ ಸಮಾಧಿಯ ಮುಂದೆ ಮಂಡಿಯೂರಿ ಪ್ರಾರ್ಥಿಸಿದರೆ ಅವಳ ಪಾಪ ಕ್ಷಮಾರ್ಹ ಎಂಬ ನಂಬಿಕೆ ಅವಳದು.

ಕಾದಂಬರಿಯ ನಾಯಕ 'ಆತ' ಮತ್ತು 'ಆಕೆಯ' ನಡುವೆ ಒಂದು ವಿಶಿಷ್ಟವಾದ ಸಂಬಂಧ. ಒಂದು ಕಾಲಕ್ಕೆ ಆತ – ಆಕೆ ಕಾಡಿನಲ್ಲಿ ಸ್ವಚ್ಛಂದವಾಗಿ ಸಂತೋಷವಾಗಿ ದಿನ ಕಳೆಯುತ್ತಿದ್ದವರು. ಆದರೆ ಒಂದು ದಿನ, ಅದೂ ಅವರಿಬ್ಬರ ಮೊದಲ ಭೇಟಿಯಾದ ದಿನ, ಆ ದಿನವೇ ವಿಚಿತ್ರ! ಕಾಮೋನ್ಮತ್ತನಾಗಿ ಆತ ಆಕೆಯ ಮೇಲೆ ಪಶುವಿನಂತೆ ಎರಗಿ ಅತ್ಯಾಚಾರ ಮಾಡುತ್ತಾನೆ. ಆದರೂ ಆತ ಪಾಪಿ ಎನಿಸಿಕೊಳ್ಳುವುದಿಲ್ಲ; ಪಶು ಎನಿಸಿಕೊಳ್ಳುವುದಿಲ್ಲ ಯಾಕೆಂದರೆ ಆತ ವೇದಾಂತಿ, ನೋಡಿದರೆ, ನುಡಿದರೆ ಜ್ಞಾನಿ ಎನಿಸುತ್ತದೆ. ಆಕೆ ಇದಕ್ಕೆ ಪೂರ್ವದಲ್ಲಿ ಕಾಡಿನಲ್ಲಿ ಸ್ವಚ್ಛಂದವಾಗಿ ಅಲೆದಾಡುತ್ತಾ ಪ್ರಾಣಿಯಂತೆ ಬದುಕುತ್ತಿದ್ದವಳು, ಸೈನಿಕನಾದ 'ಆತ'ನ ಹಿಂದೆ ಒಂದು ಸೈನಿಕರ ಗುಂಪು ಸೇರಿ ಎಲ್ಲ ಸೈನಿಕರ ಸ್ವತ್ತಾಗಿಬಿಡುತ್ತಾಳೆ. ಅವರೆಲ್ಲರೊಡನೆ ಕುಡಿಯುವುದು, ಕೂಡುವುದು ಅವಳ ಸಹಜ ಬದುಕಾಗುತ್ತದೆ; ಜೀವನ ಶೈಲಿಯಾಗುತ್ತದೆ. ಆದರೂ ಆತ ಆಕೆಯನ್ನು ಯಾವುದೇ ರೀತಿಯಲ್ಲಿ ಸೂಳೆ ಎಂದಾಗಲೀ ಮತ್ತಾವುದೇ ಅವಮಾನಕರ ರೀತಿಯಲ್ಲಿ ಹೆಸರಿಸಿ ಕರೆಯುವುದಾಗಲೀ ಮಾಡುವುದಿಲ್ಲ. ಪ್ರತಿಯಾಗಿ 'ಆತ' 'ಆಕೆ'ಯನ್ನು ತನ್ನ ಅನಿರ್ವಚನೀಯ ಆನಂದದ ಪ್ರತೀಕವಾಗಿ ಭಾವಿಸುತ್ತಾನೆ.

ಯುದ್ಧ ಮುಗಿದು ಸೈನಿಕರು ಸುಲಿಗೆಗಾರರಾಗುತ್ತಾರೆ. ಆಗಲೂ ಅವಳು ಆ ಸುಲಿಗೆಗಾರರೊಂದಿಗೂ ತನ್ನ ಸೂಳೆತನವನ್ನು ಮುಂದುವರೆಸುತ್ತಾಳೆ. ತನ್ನ ಬದುಕಿನ ರೀತಿಯನ್ನು ಬಿಟ್ಟುಕೊಡಲು ಒಪ್ಪದಿದ್ದಾಗ 'ಆತ' ಆಕೆಯನ್ನು ಬಿಟ್ಟು ದೂರವಾಗುತ್ತಾನೆ, ಆದರೆ 'ಆತ' ನಿಗೆ ಬದುಕು ಈಗ ಅಸಹನೀಯವಾಗುತ್ತದೆ. 'ಆಕೆ' ತನ್ನಿಂದ ದೂರವಾದ 'ಆತ'ನ ಬಗ್ಗೆ ಯಾವುದೇ ಅಸಮಾಧಾನ ತಳೆಯುವುದಿಲ್ಲ. ಪ್ರತಿಯಾಗಿ ಆತನಿಗೆ ಗುರಿಯಿಟ್ಟ ಬಾಣವೊಂದಕ್ಕೆ ತನ್ನನ್ನು ಆಹುತಿ ಮಾಡಿಕೊಳ್ಳುತ್ತಾಳೆ 'ಆತ'ನ ಪ್ರಾಣ ಉಳಿಸುತ್ತಾಳೆ. ಆಗ 'ಆತ' ನಿಗೆ 'ಆಕೆ' ಮೊದಲಿನ 'ಆಕೆ' ಯಾಗಿ ಕಾಣಿಸುತ್ತಾಳೆ. ಸಾಯುವ ಕ್ಷಣಗಳಲ್ಲಿಯೂ 'ಆಕೆ' ಆತ ತಲುಪಬೇಕೆಂದಿರುವ ಪುಣ್ಯ ಭೂಮಿಯನ್ನು ಸೇರುವಂತೆ ಹಾರೈಸುತ್ತಾಳೆ.

'ಆತ' ಯಾತ್ರಿಕನಾಗಿ ಹೊರಡುವುದಕ್ಕೆ ಲೇಖಕರು ಒಂದು ಸನ್ನಿವೇಶವನ್ನು ಸೃಷ್ಟಿಸುತ್ತಾರೆ, ಒಂದು ದಿನ ಎಲ್ಲೆಲ್ಲಿಯೋ ಸುತ್ತಾಡಿ ಬಂದು ಗುಡಿಸಲಿಗೆ ಬರುತ್ತಾನೆ, ಅಲ್ಲಿ ಹೆಂಗಸೊಬ್ಬಳು ಮಲುಗಿರುತ್ತಾಳೆ ಆದರೆ ಆ ಹೆಂಗಸು ವಾಸ್ತವವಾಗಿ ಶವವಾಗಿರುತ್ತಾಳೆ. ಅವನಿಗೆ ಅವಳು ಸತ್ತಿರುವುದು ಅರಿವಾಗುತ್ತದೆ. ಜೊತೆಗೆ ಅವಳ ಮೈ ಮೇಲಿನ ಶಿಲುಬೆಯಾಕೃತಿಯ ಸುಡು ಮುದ್ರೆಗಳಿರುವುದನ್ನು ಗಮನಿಸುತ್ತಾನೆ. ಅವಳನ್ನು ಕಾಯುವುದಕ್ಕಾಗಿ ಯಾರಾದರೂ ಅವಳ ಬಳಿ ಇರಬೇಕೆನಿಸುತ್ತದೆ. ಕಡೆಗೆ ತಾನೇ ಇರಲು ನಿರ್ಧರಿಸಿ ಇಡೀ ದಿನ ರಾತ್ರಿ ಕತ್ತಲಲ್ಲಿ

ಕಾವಲಿರುತ್ತಾನೆ. ಅಲ್ಲಿಂದ ಯಾವ ಅಂತಃ ಪ್ರೇರಣೆಯಿಂದಲೂ ಗೊಲ್ಗೊಥಾಗೆ ಯಾತ್ರೆ ಹೊರಡುತ್ತಾನೆ.

'ಆತ' ಅನ್ಯ ಯಾತ್ರಿಕರಿಗಿಂತ ಬೇರೆಯಾಗಿಯೇ ವರ್ತಿಸುತ್ತಾನೆ. ಪ್ರಾರ್ಥನೆ ಮಾಡುವುದಾಗಲೀ, ತಪ್ಪು ಅಥವಾ ಪಾಪ ಒಪ್ಪಿಕೊಳ್ಳುವುದಾಗಲೀ ಅವನಿಂದ ಸಾಧ್ಯವಿಲ್ಲ. ಆದರೆ ಹೆಣದ ಮುಂದೆ ಮೊಣಕಾಲೂರುತ್ತಾನೆ, ಆದರೆ ಅದಕ್ಕೆ ಸಮರ್ಥನೆ ಅವನಿಂದಲೂ ಸಾಧ್ಯವಿಲ್ಲ, ಯಾಕೆ ಮೊಣಕಾಲೂರ ಬೇಕು ಎಂಬ ಪ್ರಶ್ನೆಗಾಗಲೀ, ದೇವರ ಮುಂದೆ ಮೊಣಕಾಲೂರಬೇಕೆಂಬ ನಂಬಿಕೆಯಾಗಲಿ ಅವನಲಿಲ್ಲ; ಅದಕ್ಕೆ ವಿಶ್ಲೇಷಣೆಯೂ ಸಾಧ್ಯವಿಲ್ಲ. ಆದರೆ ಇದರ ಸಂಬಂಧ, ಅಪರಿಚಿತ ಮತ್ತು 'ಆತ'ನ ನಡುವೆ ತಾತ್ವಿಕ ಘರ್ಷಣೆ ನಡೆಯುತ್ತದೆ.

ಇಡೀ ಕಾದಂಬರಿಯಲ್ಲಿ 'ನಂಬಿಕೆ' ಕುರಿತೇ ಗಂಭೀರವಾದ ಚಿಂತನೆ ನಡೆಯುತ್ತದೆ. ಕಾರ್ಯ ಕಾರಣಗಳು ಅರ್ಥವಾಗಬೇಕಾದರೆ ನಂಬಿಕೆಯೇ ಮುಖ್ಯವೆನ್ನುವ 'ನಿಲುವು' ಪ್ರಧಾನವಾಗಿ ಕಾಣುತ್ತದೆ.

**ತ್ರಿಶಂಕು:** ೧೯೮೦ರಲ್ಲಿ ಪ್ರಕಟವಾದ ಕಟ್ಟ ಕಡೆಯ ಕಾದಂಬರಿ ಯಾಗಿರಬೇಕೆನಿಸುತ್ತದೆ. ಪುರಾಣ ಪ್ರಸಿದ್ಧವಾದ ಕಥೆಯನ್ನು ಸಾಂಕೇತಿಕವಾಗಿ ಧ್ವನಿಸುವ ಪ್ರಯತ್ನವಿರುವುದರಿಂದ ಶೀರ್ಷಿಕೆಯೂ 'ತ್ರಿಶಂಕು' ಎಂದಿದೆ.

ತ್ರಿಶಂಕುವಿನ ಸ್ಥಿತಿ ಅಲ್ಲಿಯೂ ಇಲ್ಲದ ಇಲ್ಲಿಯೂ ಇಲ್ಲದ ಅತಂತ್ರ ಸ್ಥಿತಿಯಾಗಿದೆ. ಸ್ವರ್ಗವನ್ನು ಬಯಸಿ ಹೊರಟು ಅಲ್ಲಿ ಅವನಿಗೆ ಪ್ರವೇಶವಿಲ್ಲದೆ ಮತ್ತೆ ಭೂಮಿಗೆ ಬೀಳುವ ಸ್ಥಿತಿಯಲ್ಲಿದ್ದಾಗ 'ವಿಶ್ವಾಮಿತ್ರನ' ದೇವತೆಗಳ ವಿರುದ್ಧದ ಆಕ್ರೋಶ, ಅವನನ್ನು ಭೂಮಿಗೂ ಬೀಳದಂತೆ ಮಾಡಿ ಪ್ರತಿ ಸ್ವರ್ಗವನ್ನು ಸೃಷ್ಟಿಸುವ ಭರವಸೆ ತ್ರಿಶಂಕುವನ್ನು ಅತಂತ್ರ ಸ್ಥಿತಿಯಲ್ಲಿ ನಿಲ್ಲಿಸುತ್ತದೆ. ಹಾಗಾಗಿ ದೇವ ಸಂಸ್ಕೃತಿ– ಮಾನವ ಸಂಸ್ಕೃತಿಗಳ ನಡುವಣ ಸಂಘರ್ಷಗಳ ಮಧ್ಯೆ ನರಳುವ ತ್ರಿಶಂಕುವಿನ ಸ್ಥಿತಿಯಲ್ಲಿ ವಿದೇಶಕ್ಕೆ ವಲಸೆ ಹೋದ ಭಾರತೀಯರ ಸ್ಥಿತಿಯನ್ನು ಬಿಂಬಿಸುವ ಕಥಾನಕವೇ ಈ ಕಾದಂಬರಿಯ ವಸ್ತು, ಈ ವಸ್ತುವಿನ ಆಯ್ಕೆಗೆ ಸಮರ್ಥನೆಯಾಗಿ 'ಅರಿಕೆ' ಭಾಗದಲ್ಲಿ ಈ ರೀತಿಯ ವಿವರಣೆಯನ್ನು ನೀಡುತ್ತಾರೆ.

"ವಿದೇಶಗಳಲ್ಲಿಯ ಜೀವನ ಸೌಲಭ್ಯಗಳ ಆಕರ್ಷಣೆಯಿಂದಲೋ ಸ್ವಂತದ ಪರಿಸ್ಥಿತಿಯ ಒತ್ತಡದಿಂದಲೋ ಬೇರೆಯಾವುದೇ ಕಾರಣಗಳಿಂದಾಗಿ ಅನಿವಾರ್ಯವಾಗಿಯೋ ವಿದೇಶಗಳಲ್ಲಿ ನೆಲಸಬೇಕೆನ್ನುವ, ನೆಲಸಬೇಕಾಗಿ ಬಂದಿರುವ ಎಲ್ಲರೂ ಸಾಂಸ್ಕೃತಿಕ ದೃಷ್ಟಿಯಿಂದ ನಿರ್ವಾಸಿತರಾಗಿ ಬಾಳಬೇಕಾಗಿ, ಅಂಥ ಬಾಳಿನ ಸೂಕ್ಷ್ಮ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅವುಗಳಲ್ಲಿ ಸ್ವಭಾವಗತವಾಗಿ

ತನ್ನದಾಗಿದ್ದು ಅಪರಿಹಾರ್ಯವಾದ ಒಲವು ನಿಲುವುಗಳನ್ನು ಹತ್ತಿಕ್ಕಿಕೊಂಡು, ಸ್ವಂತಿಕೆಗೆ ಎರವಾಗಿ ಬಾಳನ್ನು ನಡೆಸಿಕೊಂಡು ಹೋಗಬೇಕಾಗುವ ಅಗತ್ಯ ಅತಿ ಮುಖ್ಯವಾದದ್ದು. ಒಬ್ಬೊಬ್ಬರು ತಮ್ಮತಮ್ಮ ಅಂತರ್ಯದ ಸಂಸ್ಕಾರ ವಿಶೇಷಗಳಿಗೆ ಅನುಗುಣವಾಗಿ ಈ ಸಮಸ್ಯೆಗಳನ್ನು ಎದುರಿಸುತ್ತಾರೆ. ತಮಗೆ ಸರಿ ಎನಿಸಿದ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ, ಜೀವನಾನುಕೂಲಗಳಿಂದ ಮೋಹಿತರಾದ ಕೆಲವರಿಗೆ ಸಮಸ್ಯೆಯಾಗಿಯೇ ಕಾಣದಿರಬಹುದು. ಎಲ್ಲಿದ್ದರೇನು, ಹೇಗಿದ್ದರೇನು, ಇದ್ದಷ್ಟು ಕಾಲ ಸುಖವಾಗಿರುವುದು ಮುಖ್ಯ ಎಂದು ಪ್ರವಾಹ ಪತಿತರಾಗಿ ಯಾವ ಒಂದು ನೆಲೆಯನ್ನೇ ಕಾಣದೆ, ಒಂದು ನೆಲೆಯಲ್ಲಿ ನಿಲ್ಲುವುದೇ ತಪ್ಪು ಎಂಬ ಸಮರ್ಥನೆಯನ್ನು ಹೇಳಿಕೊಂಡು ತಮಗೆ ತಾವೇ ಪರಕೀಯರಾಗಿ ಬಾಳುವರು, ಇನ್ನು ಕೆಲವರು ತಮ್ಮ ಸಾಂಸ್ಕೃತಿಕ ಹಿನ್ನೆಲೆಯನ್ನು ತಿರಸ್ಕರಿಸಲಾಗದೆ ಜೀವನಾನುಕೂಲಗಳ ಆಕರ್ಷಣೆಯನ್ನೂ ಹತ್ತಿಕ್ಕಲಾಗದೆ ಬಿಟ್ಟು ಬಂದದ್ದರ ಬಗೆಗೆ ಒಂದು ಬಗೆಯ ಕೃತಕವಾದ ಆತ್ಮ ಸಂಭಾವಿತ ತನದ ಮನೋವೃತ್ತಿಯನ್ನು ಬೆಳೆಯಿಸಿಕೊಂಡು ಅದರ ಮೂಲಕ ತಮ್ಮ ಬದುಕಿನ ಇಬ್ಬಗೆಯನ್ನು ಮರೆಮಾಚಲೆತ್ನಿಸುತ್ತಾರೆ. ತಾವು ನೆಲೆ ತಪ್ಪಿದವರು ಎನ್ನುವುದನ್ನು ಒಪ್ಪಲಾರರು (ಪು. ೫-೬).

ಮೂರು ವಿಭಿನ್ನ ಮನೋವೃತ್ತಿಯ ವ್ಯಕ್ತಿಗಳ ಸಾಂಸ್ಕೃತಿಕ ನೆಲೆಯಲ್ಲಿನ ಮಾನಸಿಕ ಸಂಘರ್ಷವೇ ಈ ಕಾದಂಬರಿಯ ವಸ್ತು. ಯಾರೊಬ್ಬರೂ ಇಲ್ಲಿ ಕೇಂದ್ರ ಪಾತ್ರವೆನಿಸಿಕೊಳ್ಳದೆ ಎಲ್ಲರ ಬದುಕೂ, ಅವರ ಮನೋಧರ್ಮ ಅವರ ನಿಲುವುಗಳು, ಆಸೆ ಆಕಾಂಕ್ಷೆಗಳು ಇವುಗಳ ಸ್ವರೂಪವನ್ನು ಬಿಂಬಿಸುವ ಸನ್ನಿವೇಶಗಳು, ಸಂದರ್ಭಗಳು ಸಮಾನವಾಗಿ ಚಿತ್ರಣಗೊಂಡಿದೆ, ಆದರೂ ನಾಗರಾಜನ ಮೂಲಕ ಅಥವಾ ನೆಪದಿಂದಾಗಿ ಅನ್ಯ ಪಾತ್ರಗಳ ವಿವರಣೆಯೂ ಸಿಗುವುದರಿಂದ ಸದ್ಯಕ್ಕೆ ಕಥಾನಾಯಕನೆಂದು ಇರಿಸಿಕೊಳ್ಳಬಹುದು. ಇನ್ನೊಬ್ಬರು ಡಾ.ಡಿ. ಎಸ್ ಪ್ರಸಾದ್ (ಶಿವಪ್ರಸಾದ್ / ಶಿವೂ), ಮತ್ತೊಂದು ಶ್ರೀಮತಿ ಚಂದ್ರಿಕಾ ಮಂಜುನಾಥ್ ಹಾಗೂ ಪ್ರೊ ಮಂಗಸೂಳಿ ಇವರೆಲ್ಲರೂ ವಿಭಿನ್ನ ಆಲೋಚನೆ ಉದ್ದೇಶಗಳೊಂದಿಗೆ ವಿದೇಶದಲ್ಲಿ ನೆಲೆಸಿರುತ್ತಾರೆ. ಕಥಾನಾಯಕ ನಾಗರಾಜನ ಕಥೆ ಬೆಳೆಯುತ್ತಿದ್ದಂತೆ ಇವರೆಲ್ಲರ ಪರಿಚಯ ಓದುಗರಿಗೆ ಆಗುತ್ತದೆ.

ಬೆಂಗಳೂರಿನ ಬಸವನಗುಡಿ, ನಾಗಸಂದ್ರ ರಸ್ತೆಯಲ್ಲಿರುವ ಒಂದು ಮನೆಯಲ್ಲಿ ವಾಸವಾಗಿರುವ ಹೆಸರಾಂತ ತತ್ವಶಾಸ್ತ್ರ ಪ್ರಾಧ್ಯಾಪಕ ದಂಪತಿಯ ಒಬ್ಬನೇ ಮಗ ನಾಗರಾಜ. ಸಮಾಜ ಶಾಸ್ತ್ರ ವಿಷಯದಲ್ಲಿ ಎಂ.ಎ. ಕೇವಲ ಕೆಲವೇ ಅಂಕಗಳಿಂದ ಪ್ರಥಮ ಶ್ರೇಣಿಯಿಂದ ವಂಚಿತನಾಗಿರುತ್ತಾನೆ. ಹೈಸ್ಕೂಲು ಸಹಪಾಠಿ ಕೇಶವ

ಮೂರ್ತಿಯ ತಂಗಿ ಪದ್ಮಾಳ ಪರಿಚಯ, ಸ್ನೇಹಗಳು ಲಭಿಸಿದ್ದರೂ ಬಹುಶಃ ಅವಳ ವಿಚಾರವಾಗಿ ಕಟ್ಟಿ ಕೊಂಡಿದ್ದ ಕನಸು ಮುರಿದು ಬೀಳುವ ರೀತಿಯಲ್ಲಿ ಪದ್ಮಾ ತನ್ನ ಶ್ರೀಮಂತಿಕೆಗೆ ತಕ್ಕವನನ್ನು ಆರಿಸಿಕೊಂಡು ಮದುವೆಯಾಗುತ್ತಾಳೆ. ಪಾರ್ಥಸಾರಥಿ ಹೆಸರಿನ ಅವಳ ಗಂಡ ದೊಡ್ಡ ವ್ಯಾಪಾರಿಯಾಗಿದ್ದು, ವಿದೇಶಗಳಲ್ಲೆಲ್ಲಾ ಸುತ್ತಾಡುವ ಸಾಕಷ್ಟು ಅವಕಾಶಗಳಿದ್ದು, ಗಂಡ ಹೆಂಡಿರು ವಿದೇಶಗಳಲ್ಲಿನ ಸುಖ, ಸೌಲಭ್ಯ, ವಿಲಾಸಿ ಬದುಕಿನ ಆಕರ್ಷಣೆಗೆ ಮನತೆತ್ತು, ಸುಖ ಸಂತೋಷಗಳಲ್ಲಿ ಓಲಾಡುತ್ತಿರುತ್ತಾರೆ. ಪದ್ಮಳಿಂದ ಆ ಮೋಹದ ಆಕರ್ಷಕ ಬದುಕಿನ ವಿವರಗಳು ಅವನಿಗೆ ತಿಳಿಯುತ್ತಿದ್ದಂತೆ ನಾಗರಾಜನಲ್ಲಿಯೂ ಹೇಗಾದರೂ ಮಾಡಿ ವಿದೇಶಕ್ಕೆ ಹೋಗಲೇಬೇಕೆಂಬ ಸೆಳೆತ ಪ್ರಬಲವಾಗುತ್ತದೆ. ಆದರೆ ಹೋಗುವುದಕ್ಕೆ ಏನಾದರೂ ಅರ್ಹತೆ, ಉನ್ನತ ವಿದ್ಯಾಭ್ಯಾಸಕ್ಕೆ ಬೇಕಾದ ಶ್ರೇಣಿ, ಪ್ರತಿಭೆಗಳು ಅನಿವಾರ್ಯವಾಗಿರುವುದರಿಂದ, ಹೋಗಲೇಬೇಕೆಂಬ ಅದಮ್ಯ ಆಸೆಯಿಂದ ಪ್ರಚೋದಿತನಾಗಿ, ಅಡ್ಡದಾರಿಯಲ್ಲಿ ಹೋಗಿ ಪ್ರಥಮ ಶ್ರೇಣಿ ಎಂದು ನಮೂದಿಸಿದ ಸ್ನಾತಕೋತ್ತರ ಪ್ರಮಾಣ ಪತ್ರವನ್ನು ಪಡೆದು, ತನ್ನ ತಂದೆಯಿಂದ ಉಪಕೃತನಾದ ಡಾ. ಶಿವಪ್ರಸಾದ್ ಎಂಬ ವ್ಯಕ್ತಿಯ ನೆರವಿನಿಂದ, ತಂದೆಯ ವಿರೋಧವಿದ್ದರೂ ಹಠದೊಂದಿಗೆ ವಿದೇಶಕ್ಕೆ ಹೋಗಿ ಅಲ್ಲಿನ ಒಂದು ವಿಶ್ವವಿದ್ಯಾಲಯದಲ್ಲಿ 'ಏಷ್ಯನ್ ಸ್ಟಡೀಸ್' ವಿಭಾಗದಲ್ಲಿ ವಿಶೇಷ ವ್ಯಾಸಂಗಕ್ಕೆಂದು ಸ್ಕಾಲರ್‌ಷಿಪ್‌ನೊಂದಿಗೆ ಸೇರಿಕೊಳ್ಳುತ್ತಾನೆ. ವಿದೇಶಕ್ಕೆ ಹೋಗಲು ಪ್ರಯಾಣದ ಖರ್ಚಿಗೆ ಹಣ ದೊರೆಯದಿದ್ದಾಗ, ತಂದೆ ತಾಯಿಯ ಬಲವಂತವನ್ನು ಒಪ್ಪಿ ಶಾಂತಾ ಎಂಬ ಹುಡುಗಿಯನ್ನೂ ಮದುವೆ ಆಗುತ್ತಾನೆ ಆದರೆ ಹೆಂಡತಿಯನ್ನು ಜೊತೆಗೆ ಕರೆದೊಯ್ಯದೆ ವಿದೇಶಕ್ಕೆ ವ್ಯಾಸಂಗಕ್ಕೆಂದು ಹೋದರೂ ವ್ಯಾಸಂಗ, ಸಂಶೋಧನೆಯಲ್ಲಿ ಯಾವುದೇ ಪ್ರಗತಿಯನ್ನು ತೋರುವುದಿಲ್ಲ, ಬದಲಾಗಿ ಐಷಾರಾಮಿ ಜೀವನದಲ್ಲಿ ತೊಡಗಿ ಶಿಷ್ಯ ವೇತನವನ್ನು ಹಾಳುಮಾಡಿಕೊಳ್ಳುತ್ತಾನೆ. ಅವನ ವ್ಯಾಸಂಗದ ಅವಧಿ ಮುಗಿದು ಶಿಷ್ಯವೇತನ ನಿಂತು ಹೋಗುತ್ತದೆ. ಅವಧಿ ವಿಸ್ತರಣೆಗೆಂದು ಮುಂದಿಟ್ಟ ಬೇಡಿಕೆಯನ್ನು ಪರಿಶೀಲಿಸಲು ವಿಶ್ವವಿದ್ಯಾಲಯದ ಮೇಲಧಿಕಾರಿಗಳು, ಇವನು ಓದಿದ್ದ ವಿಶ್ವವಿದ್ಯಾಲಯದೊಂದಿಗೆ ಪತ್ರವ್ಯವಹಾರ ನಡೆಸಿದಾಗ, ಪ್ರಥಮಶ್ರೇಣಿಯ ಹಿಂದಿನ ಮೋಸ ಬಯಲಾಗಿ, ಕಾನೂನು ಕ್ರಮ ಕೈಗೊಳ್ಳಬೇಕೆಂದ್ದರೂ, ಶಿಫಾರಸು ಮಾಡಿದ ಪ್ರತಿಷ್ಠಿತ ವ್ಯಕ್ತಿಗೆ, ವಿಶ್ವವಿದ್ಯಾಲಯಕ್ಕೆ ಅಪಕೀರ್ತಿಬರುವುದನ್ನು ತಡೆಯಲು, ನಾಗರಾಜನಿಗೆ ಸ್ವದೇಶಕ್ಕೆ ತೆರಳುವಂತೆ ಆದೇಶವನ್ನು ಹೊರಡಿಸುತ್ತದೆ.

ಈ ಕಥೆಯ ಹಿನ್ನೆಲೆಯಲ್ಲಿ ವಿಭಿನ್ನ ಬಗೆಯ ಮೂರು ಪಾತ್ರಗಳನ್ನು ಸೃಷ್ಟಿಸಿ, ಮೂರು ಮನೋಧರ್ಮ ಅಥವಾ ಮನೋವೃತ್ತಿಗಳನ್ನು

ಮುಖಾಮುಖಿಯಾಗಿಸಿ, ಯಾವುದು ಮುಖ್ಯ ಯಾವುದು ಅಮುಖ್ಯ ಎಂಬುದರ ನಿರ್ಣಯವನ್ನು ಓದುಗರಿಗೆ ಬಿಡುವುದರ ಜೊತೆಗೆ ತಮ್ಮ ನಿಲುವು ಯಾವ ಕಡೆಗೆಂಬುದನ್ನು ಸೂಕ್ಷ್ಮವಾಗಿ ಕಾಣಿಸುತ್ತಾರೆ.

ನಾಗರಾಜನ ಹಿನ್ನೆಲೆಗೆ ಒಳ್ಳೆಯ ಸಂಸ್ಕಾರ ಆದರ್ಶಗಳು, ಮೌಲ್ಯಗಳು, ಸಾಂಪ್ರದಾಯಿಕ ನಂಬಿಕೆಗಳಿದ್ದರೂ, ನಾಗರಾಜನಿಗೆ ಅವು ಯಾವುವೂ ದಕ್ಕಿರುವುದಿಲ್ಲ. ತಂದೆ ತತ್ವಶಾಸ್ತ್ರ ಪ್ರಾಧ್ಯಾಪಕರು, ಭಾರತೀಯ ನೀತಿ ಶಾಸ್ತ್ರದಲ್ಲಿ ಅಪಾರ ಜ್ಞಾನವುಳ್ಳವರು. ತಾಯಿಯೂ ಪರಂಪರಾಗತ ಮೌಲ್ಯಗಳಲ್ಲಿ ಶ್ರದ್ಧೆ ಇರಿಸಿಕೊಂಡವರು, ಭೌತಿಕ ಸುಖ, ಸಂಪತ್ತುಗಳಲ್ಲಿ ನಿರಾಸಕ್ತರು. ಇಂತಹ ತಂದೆ ತಾಯಿಯರನ್ನು ಪಡೆದಿದ್ದರೂ ವಿಚಿತ್ರ ವ್ಯಂಗ್ಯವೆಂಬಂತೆ, ಹಣವೇ ಸರ್ವಸ್ವವೆಂದು ಭಾವಿಸುವ ಮತ್ತು ಅದರ ಬೆನ್ನು ಬಿದ್ದಿರುವ ಗೆಳೆಯ ಕೇಶವ ಮತ್ತು ಅವನ ತಂಗಿ ಪದ್ಮಳ ಹಿಂದೆ ಬಿದ್ದು ತಂದೆ ತಾಯಿಯರಿಂದ ದೂರವಾಗುತ್ತಾನೆ; ವಿದೇಶದ ಮೋಹ, ಸುಳ್ಳು ಪ್ರಮಾಣ ಪತ್ರದ ಹಗರಣ, ಮರಳಿ ಭಾರತಕ್ಕೆ ಬರುವ ನಾಗರಾಜನ ದೈನ್ಯ ಸ್ಥಿತಿಯನ್ನು ಕಾದಂಬರಿಕಾರರು ಸಮರ್ಥವಾಗಿ ಚಿತ್ರಿಸಿದ್ದಾರೆ. ಅವನಿಗೆ ಸಹಾಯಮಾಡಿದ ಡಾ.ಶಿವಪ್ರಸಾದರ ಗಮನಕ್ಕೂ ಬಾರದ ಅವನ ನಾಚಿಕೆಗೇಡಿನ ನಡವಳಿಕೆ ಕಡೆಗೆ ಬಹಿರಂಗವಾಗಿ, ಇನ್ನು ಅಲ್ಲಿ ಉಳಿಯಲು ಯಾವ ರೀತಿಯಿಂದಲೂ ಸಾಧ್ಯವಾಗದೆ, ಕೈ ಹಿಡಿದ ಹೆಂಡತಿ ಕಾವೇರಿ ನದಿಯಲ್ಲಿ ಆಕಸ್ಮಿಕ ಸಾವನ್ನಪ್ಪಿದ ಸುದ್ದಿ ತಿಳಿದಾಗಲೂ ಬಾರದ ನಾಗರಾಜ ಈಗ ಅನಿವಾರ್ಯವಾಗಿ ಮರಳಿ ಬರಬೇಕಾಗುತ್ತದೆ. ಇಷ್ಟಾದರೂ ಅವನಲ್ಲಿ ಪಾಪ ಪ್ರಜ್ಞೆಯಾಗಲೀ ಅಪರಾಧಿ ಭಾವವಾಗಲೀ ಮೂಡುವುದೇ ಇಲ್ಲ. ಅವನಿಗೆ ಕರ್ತವ್ಯ, ಜವಾಬ್ದಾರಿಗಳ ಅರ್ಥವೇ ತಿಳಿದಿರುವುದಿಲ್ಲ. ಆದರೆ ಒಂದೇ ಒಂದು ಸಂದರ್ಭದಲ್ಲಿ, ಆದೂ ಶಿಷ್ಯ ವೇತನ ತಪ್ಪಿಹೋದ ಸಂದರ್ಭದಲ್ಲಿ ಪಾರ್ಕರ್ ಎಂಬ ವ್ಯಕ್ತಿಯೊಬ್ಬರು, ಆಡಿದ ಕೆಲವು ಮಾತುಗಳು ಅವನನ್ನು ಯೋಚಿಸುವಂತೆ ಮಾಡುತ್ತದೆ. ಆದರೆ ಅಷ್ಟು ಹೊತ್ತಿಗೆ ಪರಿಸ್ಥಿತಿ ಕೈ ಮೀರಿ ಹೋಗಿರುತ್ತದೆ. ಅವನು ಭಾರತಕ್ಕೆ ಹಿಂತಿರುಗುವಾಗ ವಿಮಾನ ಒಂದೆಡೆ ಅಪಘಾತಕ್ಕೆ ಒಳಗಾಗಿ ಜನ ಜೀವನ್ಮರಣಗಳ ಮಧ್ಯೆ ಸೆಣಸಾಡುವಾಗಲೇ ನಾಗರಾಜನಿಗೆ ನಿಜವಾದ ಜೀವನ ಮೌಲ್ಯಗಳು ಯಾವುದೆಂಬುದರ ಅರಿವು ಉಂಟಾಗುತ್ತದೆ. ತಾನು ಬದುಕಿ ಉಳಿಯ ಬೇಕೆಂಬುದಕ್ಕಿಂತಲೂ ಬೇರೆಯವರನ್ನು ಉಳಿಸುವ ಪ್ರಯತ್ನದಲ್ಲಿ ತತ್ಪರನಾಗುತ್ತಾನೆ. ಬಹುಶಃ ಅವನ ವ್ಯಕ್ತಿತ್ವದಲ್ಲಿ ಆಲೋಚನೆಗಳಲ್ಲಿ ಉಂಟಾದ ಬದಲಾವಣೆಗಳಿಂದಲೇ ಬಹುಶಃ ಅವನಿಗೆ ಜೀವ ಬೋನಸ್ಸಾಗಿ ದೊರೆಯುತ್ತದೆ. ಕಡೆಗಾದರೂ ನಾಯಕನಲ್ಲಿ ಮಾನವೀಯತೆಯ ಪ್ರಜ್ಞೆ ಜಾಗೃತವಾಯಿತೆಂದು ತಿಳಿಸುವುದೇ ಕಾದಂಬರಿಕಾರರ ಉದ್ದೇಶವಾಗಿದೆಯೆನಿಸುತ್ತದೆ.

ಎರಡನೇ ವರ್ಗದ ಮನೋವೃತ್ತಿಯವರೆಂದರೆ ಡಾ. ಶಿವಪ್ರಸಾದ್, ಬಾಲ್ಯದಿಂದಲೇ ಉತ್ತಮ ವಿದ್ಯಾರ್ಥಿಯಾಗಿದ್ದು ನಾಗರಾಜನ ತಂದೆ ತಾಯಿ ಮೊದಲಾಗಿ ಎಲ್ಲರಿಂದಲೂ ಹೊಗಳಿಸಿಕೊಂಡವನು. ಬಡತನದ ಬವಣೆಗಳ ಮಧ್ಯೆ ಬೆಳೆದು ಬಂದವನು. ಇನ್‌ಷೂರೆನ್ಸ್ ಕಂಪನಿಯಲ್ಲಿ ಕೆಲಸದಲ್ಲಿದ್ದ ತಂದೆ ಕಂಪನಿಯ ಹಣವನ್ನು ತಿಂದು ಹಾಕಿದನೆಂಬ ಸುಳ್ಳು ಆರೋಪಕ್ಕೆ ಒಳಗಾಗಿ, ಅವಮಾನ ಭರಿಸಲಾಗದೆ ಆತ್ಮಹತ್ಯೆ ಮಾಡಿಕೊಂಡದ್ದರಿಂದ ಅನಾಥನಾಗಿ ತಾಯಿ ಬೇಡಿ ತಂದದ್ದರಿಂದಲೇ ಬದುಕು ಸಾಗಿ ತನ್ನ ಸ್ವಂತ ಪ್ರಯತ್ನ, ಪರಿಶ್ರಮಗಳಿಂದ ಮೇಲೆ ಬಂದವನು, ತಾಯಿಯನ್ನು ನಾಗರಾಜನ ತಂದೆಯ ಆಶ್ರಯದಲ್ಲಿರಿಸಿ, ಸ್ಕಾಲರ್‌ಷಿಪ್ ಮುಖಾಂತರ ಅಮೆರಿಕಾಕ್ಕೆ ಹೋಗಿ ನೆಲೆಸಿ ಅಲ್ಲಿನ ಪೌರತ್ವವನ್ನು ಪಡೆದು ಅಮೆರಿಕನ್ ಹೆಣ್ಣನ್ನು ಮದುವೆಯಾಗಿ ಬಂದು ಮಗುವಿನ ತಂದೆಯೂ ಆಗುತ್ತಾನೆ. ಆದರೆ ಭಾರತೀಯ ಸಂಸ್ಕೃತಿಯನ್ನು ಪೂರ್ತಿಯಾಗಿ ಬಿಡಲೂ ಆಗದೆ, ಅಮೆರಿಕನ್ ಸಂಸ್ಕೃತಿಯನ್ನು ಪೂರ್ತಿಯಾಗಿ ಒಪ್ಪಿಕೊಳ್ಳಲೂ ಆಗದೆ ಎಡಬಿಡಂಗಿಯಾಗಿ ಮಾನಸಿಕ ಅಸ್ವಸ್ಥತೆಯಿಂದ ನರಳುತ್ತಾನೆ, ಆದರೆ ಆತ್ಮ ಸಂಯಮದಿಂದ ಅದನ್ನು ಹೊರಗೆ ತೋರಿಸಿಕೊಳ್ಳುವುದಿಲ್ಲ. ವೃತ್ತಿಯಲ್ಲಿ ಸಮಾಜದಲ್ಲಿ ಅಧಿಕಾರದಲ್ಲಿ ಮೇಲೇರಬೇಕಾದರೆ ಸ್ಥಾನಮಾನ ಗಳಿಸಿಕೊಳ್ಳ ಬೇಕಾದರೆ, ಆತ್ಮಸಾಕ್ಷಿಗೆ ವಿರುದ್ಧವಾಗಿ ಹೊಂದಿಕೊಳ್ಳಲೇಬೇಕಾಗುತ್ತದೆ. ಪೌರತ್ವವನ್ನು ಸ್ವೀಕರಿಸಲೇಬೇಕಾಗುತ್ತದೆ; ಅದಕ್ಕೆ ಹೊಂದಿಸಿಕೊಳ್ಳುವ ಪ್ರಯತ್ನದಲ್ಲಿಯೇ, ಸಾಂಪ್ರದಾಯಿಕವಾದ ಕೆಲವು ಭಾರತೀಯ ನೈತಿಕ ಸಂಹಿತೆಗಳ ನಿರೀಕ್ಷೆಯನ್ನೂ ಪೋಷಿಸುತ್ತಿರುತ್ತಾರೆ. ಪರಂಪರಾಗತ ಯಾಜಮಾನ್ಯ ಸಂಸ್ಕೃತಿಯಲ್ಲಿ, ಹೆಣ್ಣನ್ನು ಆದರ್ಶ ಸತಿಯಾಗಿ, ತ್ಯಾಗಜೀವಿಯಾಗಿ, ಮಮತಾಮಯಿ ತಾಯಿಯಾಗಿ ಕಾಣಬೇಕೆಂಬ ಅಪೇಕ್ಷೆ ಇರಿಸಿಕೊಂಡಿರುವುದರ ಜೊತೆಗೆ ಇವುಗಳಲ್ಲಿ ಯಾವುದಕ್ಕಾದರೂ ಅಪಚಾರವಾದೀತೆಂದು ಗಂಡು ಹೆಣ್ಣಿನ ವಿಚಾರದಲ್ಲಿ ಸಂಶಯ ಪ್ರವೃತ್ತಿಯನ್ನೇ ರೂಢಿಸಿಕೊಂಡಿರುತ್ತಾನೆ, ಶಿವಪ್ರಸಾದನೂ ಇದಕ್ಕೆ ಹೊರತಾಗಿರುವುದಿಲ್ಲವಾದ್ದರಿಂದ ಅವನಲ್ಲಿ ಇಬ್ಬಂದಿತನ ಕಾಣಿಸಿಕೊಳ್ಳುತ್ತಲೇ ಇರುತ್ತದೆ. ಮನಸ್ಸಿನ ಶಾಂತಿ ಹದಗೆಡುತ್ತಲೇ ಇರುತ್ತದೆ. ಮೂರನೇ ವರ್ಗದವರೆಂದರೆ ಶ್ರೀಮತಿ ಚಂದ್ರಿಕಾ ಮಂಜುನಾಥ್ ಹಾಗೂ ಪ್ರೊ. ಮಂಗಸೂಳಿ. ಚಂದ್ರಿಕಾ ಪುಣೆಯ ಇಂಜನೀರಿಂಗ್ ಕಾಲೇಜಿನಲ್ಲಿ ಲೋಹಶಾಸ್ತ್ರ ವಿಭಾಗದಲ್ಲಿ ಅಧ್ಯಾಪಕರಾಗಿರುವ ಮಂಜುನಾಥ್ ಎಂಬುವರ ಪತ್ನಿ ಪುಣೆಯ ಇನ್ನೊಂದು ಕಾಲೇಜಿನಲ್ಲಿ ತತ್ವಶಾಸ್ತ್ರ ಪ್ರಾಧ್ಯಾಪಕಿ ವಿದ್ಯಾರ್ಥಿ ವೇತನದ ಮೇರೆಗೆ ನಾರ್ಟನ್ ವಿ.ವಿ ಯಲ್ಲಿ ಸ್ನಾತಕೋತ್ತರ ಪದವಿಗೆಂದು ಅಧ್ಯಯನ ಮಾಡಲು ಭಾರತೀಯ ಸಂಸ್ಕೃತಿಯ ಬಗ್ಗೆ ಅಪಾರ ಶ್ರದ್ಧೆ ಉಳಿಸಿಕೊಂಡು ವಿದೇಶಕ್ಕೆ ಬಂದಿರುತ್ತಾಳೆ.

ಭಾರತೀಯ ಸಂಸ್ಕೃತಿಯ ಬಗೆಗಿದ್ದ ಅವಳ ಅಭಿಮಾನ, ಅರಿವು, ಬದ್ಧತೆಗಳ ಬಗ್ಗೆ ಕೆಲವರು ನಗೆಯಾಡಿದ್ದೂ ಉಂಟು. ಯಾವುದೇ ಸಂದರ್ಭದಲ್ಲಿಯೂ ಭಾರತೀಯ ಸಂಸ್ಕೃತಿಯನ್ನು ಬಿಟ್ಟುಕೊಡಲಾರದವಳು. ಹಾಗೆಯೇ ಮತ್ತೊಬ್ಬರು ಪ್ರೊ ಮಂಗಸೂಳಿ ಎಂಬವರು. ಇವರೂ ಪುಣೆಯಲ್ಲಿ ಮತ್ತೊಂದು ಕಾಲೇಜಿನ ತತ್ವಶಾಸ್ತ್ರ ಪ್ರಾಧ್ಯಾಪಕರು, ನಾರ್ಟನ್ ವಿ.ವಿಯಲ್ಲಿ ಸಂದರ್ಶಕ ಪ್ರಾಧ್ಯಾಪಕರು ಅತ್ಯಂತ ಪ್ರತಿಭಾವಂತ, ಸಮರ್ಥ ಪ್ರಾಧ್ಯಾಪಕರೆನಿಸಿಕೊಂಡವರು, ಆದಷ್ಟು ಬೇಗ ತಮ್ಮ ಕೆಲಸ ಮುಗಿಸಿಕೊಂಡು ಭಾರತಕ್ಕೆ ಮರಳಬೇಕೆಂದು ತುಡಿಯುತ್ತಿದ್ದವರು ಇಷ್ಟ ಪಟ್ಟರೆ ಅಲ್ಲಿಯೇ ನೆಲಸುವ ಅವಕಾಶಗಳು ಸಾಕಷ್ಟು ಇದ್ದವು ಆದರೆ ಅವರು ಹಾಗೆ ಮಾಡಲಿಲ್ಲ, ನೆಲಸಬಹುದಾದ ಅವಕಾಶವನ್ನೇಕೆ ಬಿಟ್ಟರೆಂದು ನಾಗರಾಜ ಪ್ರಶ್ನಿಸಿದಾಗ 'ಇಲ್ಲಿ ಯಾರಿದ್ದರೂ ಏರ್ ಕಂಡೀಷನ್ಡ್ ಜೈಲಿನಲ್ಲಿ, ಏನೆಂದರೂ ನಾವು ಹೊರಗಿನವರೇ– ಎಷ್ಟಾದರೂ ಸೆಕೆಂಡ್ ಕ್ಲಾಸ್ ಸಿಟಿಜನ್ನರು– ಇಲ್ಲಿ ನಮ್ಮನ್ನು ಯಾರು ಕೇಳುತ್ತಾರೆ? ನಮ್ಮ ಸುತ್ತ ನಾವೇ ಒಂದು ಕೋಟೆಯನ್ನು ಕಟ್ಟಿಕೊಂಡು ಒಂದು ದ್ವೀಪದಲ್ಲಿಯಂತೆ ಬಾಳುವುದು ಅರ್ಥಹೀನವಾಗಿ ಕಾಣುತ್ತದೆ. ನನಗಿಂತ ಸಾಂಸ್ಕೃತಿಕವಾಗಿ ಇಲ್ಲಿಯವರೊಡನೆ ಒಂದಾಗುವುದು ಸಾಧ್ಯವೇ ಇಲ್ಲ. ನಾವು ನಾವೂ ಆಗದೆ, ಅವರೂ ಆಗದೆ; ನೀದರ್ ಫಿಶ್ ನಾರ್ ಫೌಲ್ ಎನ್ನುವ ತರಹ ಬದುಕ ಬೇಕಾಗುತ್ತದೆ" ಎನ್ನುವ ಮಾತುಗಳು ನಾಗರಾಜನನ್ನು ಯೋಚಿಸುವಂತೆ ಮಾಡುತ್ತವೆ.

ಇನ್ನೊಬ್ಬ ವ್ಯಕ್ತಿ ಬ್ರಿಟಿಷ್ ಯುವಕ ಅಮೆರಿಕನ್ನರ ಅಹಂಕಾರಕ್ಕೆ ಬೇಸತ್ತು ನಾಗರಾಜನಿಗೆ "ಒಂದು ಹೇಳಬಲ್ಲೆ ಏನು ಮಾಡಿದರೂ ನಾನು ಇಂಗ್ಲಿಷ್ ಮೆನ್ ಹೇಗೊ ಹಾಗೆ– ಏನು ಮಾಡಿದರೂ ನೀನು ಭಾರತೀಯ, ನಾವಿಬ್ಬರೂ ಇನ್ನು ಯಾವ ದೇಶದವರೂ ಆಗಲಾರೆವು" ಎನ್ನುವ ಮಾತುಗಳು, ಮಂಗಸೂಳಿಯವರ ಮಾತಿಗೆ ಪೂರಕವಾಗಿ ಗೋಚರಿಸುತ್ತವೆ, ನಾಗರಾಜನಿಗೆ.

ಕಾದಂಬರಿಯಲ್ಲಿ ಒಂದು ಸಾಂಸ್ಕೃತಿ ನಿರ್ವಾತ ಬಿಕ್ಕಟ್ಟುಗಳಲ್ಲಿ ಬದುಕಬೇಕಾದ ಸಮಸ್ಯೆಯ ಎಳೆ ಎಳೆಗಳನ್ನು ಬಿಡಿಸಿ ತೋರಿಸುವ ಪ್ರಯತ್ನವನ್ನು ಲೇಖಕರು ಅತ್ಯಂತ ಗಂಭೀರವಾಗಿ ನಡೆಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ, ಒಟ್ಟಾರೆಯಾಗಿ ತಾರ್ಕಿಕ ನೆಲೆಯಲ್ಲಿನ ಸಮಸ್ಯೆಯ ವಿಶ್ಲೇಷಣೆ, ವಿಶ್ಲೇಷಣೆಗೆ ಪೂರಕ ಪಾತ್ರ ಸೃಷ್ಟಿ, ತಮ್ಮ ವೈಯಕ್ತಿಕ ನಿಲುವಿನ ಸೂಕ್ಷ್ಮದರ್ಶನಗಳಷ್ಟೂ ಕಾದಂಬರಿಗೆ ಮೌಲಿಕತೆ ಯನ್ನು ನೀಡಿದೆ.

■

## ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ

ಸೃಜನಶೀಲ ಬರಹದಷ್ಟೇ ಸಮರ್ಥವಾಗಿ ಇನಾಂದಾರರು ಸಾಕಷ್ಟು ವಿಮರ್ಶಾ ಕೃತಿಗಳನ್ನು, ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯ ಮೀಮಾಂಸಾ ಕೃತಿಗಳನ್ನು ತೌಲನಿಕ ದೃಷ್ಟಿಯಿಂದ ಮಾಡಿದ ಅಧ್ಯಯನದ ಫಲವಾಗಿ ಮೂಡಿ ಬಂದ ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆ ಶೀರ್ಷಿಕೆಯಡಿಯಲ್ಲಿ ಮೈಸೂರು ವಿ.ವಿಯ ಪ್ರಸಾರಾಂಗದಿಂದ ೧೯೭೩ ರಲ್ಲಿಯೇ ಅವರ ಮಹತ್ವದ ಕೃತಿಯೊಂದು ಮೊದಲ ವಿಮರ್ಶಾ ಕೃತಿಯಾಗಿ ಹೊರಬಂದಿದೆ. ನಂತರ ಬೇರೆ ಬೇರೆ ಅವಧಿಗಳಲ್ಲಿ ಪಾಶ್ಚಾತ್ಯ ವಿಮರ್ಶೆಯ ಮಧ್ಯಯುಗ, ಪಾಶ್ಚಾತ್ಯ ವಿಮರ್ಶೆಯ ಸಂಪ್ರದಾಯ ಯುಗ, ಪಾಶ್ಚತ್ಯ ವಿಮರ್ಶೆಯ ರೊಮ್ಯಾಂಟಿಕ್ ಯುಗ ಪಾಶ್ಚಾತ್ಯ ವಿಮರ್ಶೆಯ ಆಧುನಿಕ ಯುಗ ಈ ಎಲ್ಲವೂ ಒಟ್ಟಾಗಿ ಸೇರಿ ಪಾಶ್ಚಾತ್ಯ ಕಾವ್ಯ ಮೀಮಾಂಸೆ ಕೃತಿ ರಚನೆಯಾಗಿದೆ ಇದರಲ್ಲಿ ಪಶ್ಚಿಮದ ಕಾವ್ಯ ಸಾಹಿತ್ಯ ಕುರಿತಾದ ಭಿನ್ನ ಭಿನ್ನ ಕಾಲಘಟ್ಟಗಳಲ್ಲಿ ನಡೆದ ಚರ್ಚೆ, ಸಂವಾದ, ವೈವಿಧ್ಯಮಯ ಚಿಂತನೆಗಳು ಭಾರತೀಯ ಕಾವ್ಯ ಮೀಮಾಂಸೆಯ ಜೊತೆ ಜೊತೆಗೆ ಅಧ್ಯಯನದ ಮೂಲಕ ತಾವು ರೂಪಿಸಿಕೊಂಡ ಕೆಲವು ಅಭಿಪ್ರಾಯಗಳ ನಿಲುವುಗಳ ಸಮರ್ಥ ವಿಶ್ಲೇಷಣೆಯ ಮೂಲಕ, ಪಾಶ್ಚಾತ್ಯ ವಿಮರ್ಶೆಯ ಸ್ಪಷ್ಟವಾದ ಸ್ವರೂಪವನ್ನು ಕಟ್ಟಿಕೊಡುವಲ್ಲಿ, ಅವರ ಅಧ್ಯಯನದ ಆಳ, ಚಿಂತನೆಗಳ ಗಹನತೆ, ಅದಕ್ಕಾಗಿ ಪಟ್ಟ ಶ್ರಮ ಇತ್ಯಾದಿಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಮೊದಲಿಗೆ ಐದು ಸಂಪುಟಗಳಲ್ಲಿ, ಅವರು ವಿಶ್ವವಿದ್ಯಾನಿಲಯಗಳಲ್ಲಿ ಬೇರೆ ಬೇರೆ ಸಂಧರ್ಭಗಳಲ್ಲಿ ನೀಡಿದ ವಿಶೇಷ ಉಪನ್ಯಾಸಗಳಲ್ಲಿ ಕಾಣಿಸಿಕೊಂಡ ವಿಮರ್ಶೆಯ ಕುರಿತಾದ ಅವರ ಅಧ್ಯಯನಗಳು ಚಿಂತನೆಗಳು ನಿಲುವುಗಳನ್ನು ಬಿಡಿ ಬಿಡಿ ಸಂಪುಟಗಳಲ್ಲಿ, ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆಯಲ್ಲಿ ಮಧ್ಯಯುಗದಲ್ಲಿ ಸಂಪ್ರದಾಯ ಯುಗದಲ್ಲಿ ರೊಮ್ಯಾಂಟಿಕ್ ಯುಗದಲ್ಲಿ ಮತ್ತು ಆಧುನಿಕ ಯುಗದಲ್ಲಿ, ಆಯಾ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಪ್ರಬುದ್ಧ ಚಿಂತಕರಾದ ಪ್ಲೇಟೋ ಅರಿಸ್ಟಾಟಲ್ ಹಿಡಿದು ಆಧುನಿಕಯುಗದ ಟಿ.ಎಸ್. ಎಲಿಯಟ್, ಎಜ್ರಾಪೌಂಡ್ ಮೊದಲಾದವರನ್ನು ಒಳಗೊಂಡಂತೆ ಅತ್ಯಂತ ಮಹತ್ವದ ಇಪ್ಪತ್ಮೂರು ಚಿಂತಕರ ವಿಮರ್ಶೆ ಕುರಿತಾದ, ಕಾವ್ಯ ಕುರಿತಾದ ಚರ್ಚೆಗಳನ್ನು, ಅಭಿಪ್ರಾಯಗಳನ್ನು ತಮ್ಮ ವಿಶ್ಲೇಷಣೆಯ ಒಳನೋಟಗಳೊಂದಿಗೆ ಸಮಗ್ರವಾದ ಚಿತ್ರವನ್ನು

ಕಟ್ಟಿಕೊಟ್ಟಿದ್ದಾರೆ, ೧೯೮೪ ರಲ್ಲಿ ಬಿಡಿ ಬಿಡಿ ಸಂಪುಟಗಳನ್ನು ಒಟ್ಟಾಗಿ ಸೇರಿಸಿ ಪಾಶ್ಚಾತ್ಯ ಕಾವ್ಯ ಮೀಮಾಂಸೆ ಎಂಬ ಹೆಸರಿನಲ್ಲಿ ಸಮಗ್ರ ಸಂಪುಟವನ್ನು ನೀಡಿ ಕನ್ನಡದ ಬೌದ್ಧಿಕ ವಲಯಕ್ಕೆ, ವಿದ್ಯಾರ್ಥಿ ಸಮುದಾಯಕ್ಕೆ ಕನ್ನಡ ಕಾವ್ಯ ಮೀಮಾಂಸೆಯ ಜೊತೆ ಜೊತೆಗೇ ಅದಕ್ಕೆ ಪೂರಕವೆಂಬಂತೆ ಪಾಶ್ಚಾತ್ಯ ಸಾಹಿತ್ಯ ಅಥವಾ ಕಾವ್ಯ ಮೀಮಾಂಸೆಯ ಅಧ್ಯಯನಕ್ಕೆ ಅನುವು ಕಲ್ಪಿಸಿ ಕೊಟ್ಟಿದ್ದಾರೆ.

ಮೊದಲ ಸಂಪುಟ ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆ ಎಂದಿದ್ದು ಮುಂದಿನ ಸಂಪುಟಗಳಲ್ಲಿ ದಾರಿ ತೆರೆದುಕೊಳ್ಳುವುದಕ್ಕೆ ಬೇಕಾದ ಪೀಠಿಕೆ ಹಿನ್ನೆಲೆಗಳಿದ್ದು, ಮಧ್ಯ ಯುಗದ ಸರಣಿಗೆ ಬಂದಾಗ ನಾಲ್ಕು ಭಾಗಗಳಲ್ಲಿ ಹಿನ್ನೆಲೆ, ಪ್ಲೇಟೋ, ಅರಿಸ್ಟಾಟಲ್‌ರ ನಂತರದಲ್ಲಿ ಕಾಣಿಸಿಕೊಂಡ ಡಾಂಟೆ ಫಿಲಿಪ್ ಸಿಡ್ನಿ ಮುಂತಾದವರ ಅಭಿಪ್ರಾಯಗಳ ಕುರಿತ ವಿವರಣೆ ನಡೆದಿದೆ. ಪ್ಲೇಟೋನ ನಂತರದಲ್ಲಿ ಬಂದ ಅರಿಸ್ಟಾಟಲನು ಪಾಶ್ಚಾತ್ಯ ವಿಮರ್ಶೆಯ ಆಚಾರ್ಯನೆಂದು ಗುರುತಿಸುತ್ತಲೇ ಪ್ಲೇಟೋನ ಸಾಹಿತ್ಯವಿಮರ್ಶೆಯ ಸಿದ್ಧಾಂತಗಳ ಹಿನ್ನೆಲೆಗೆ ಇದ್ದ ರಾಷ್ಟ್ರಕನ ಹಿತಾಹಿತ ದೃಷ್ಟಿಗಿಂತ ಭಿನ್ನವಾಗಿ ಪ್ಲೇಟೋನ ಶಿಷ್ಯನೇ ಆಗಿದ್ದರೂ ಗುರುವಿನ ಸಾಹಿತ್ಯ ಸಂಬಂಧ ನಿಲುವುಗಳನ್ನು ಒಪ್ಪದೆ ಸ್ವತಂತ್ರ ಬುದ್ಧಿಯಿಂದ ರೂಪಿಸಿಕೊಂಡ ಸಾಹಿತ್ಯ, ಕಲಾ ಮೀಮಾಂಸೆ ಗ್ರಂಥಗಳಲ್ಲಿ ನಿರೂಪಿಸಿರುವುದನ್ನು ಗಮನಿಸಿದ್ದಾರೆ. ಅವನು ವಿವರಿಸುವ ಮೂರು ಬಗೆಯ ಶಾಸ್ತ್ರಗಳನ್ನು ಪ್ರಸ್ತಾಪಿಸುತ್ತಾ ಅವನು ಅವುಗಳನ್ನು ವಿವರಿಸಿರುವ ಕ್ರಮವನ್ನೂ ಮತ್ತು ಅವನು ಅನುಕರಣದ ತತ್ವಕ್ಕೆ ಕೊಟ್ಟ ಮಹತ್ವವನ್ನು ಎತ್ತಿ ತೋರಿಸುತ್ತಾರೆ. ಅವನು ಹೇಳುವ ಅನುಕರಣದ ಅರ್ಥಗಳಾದ "ಪ್ರಕೃತಿಯ ಅನುಕರಣೆ ಕಲೆ" ಕಾರ್ಯಗಳಲ್ಲಿ ತೊಡಗಿರುವ ಮನುಷ್ಯರ ಅನುಕರಣೆ ಇತ್ಯಾದಿಗಳನ್ನು ಪ್ರಸ್ತಾಪಿಸಿ, "ಕಾರ್ಯಗಳಲ್ಲಿ ತೊಡಗಿರುವ ಮನುಷ್ಯರು ಎಂಬ ಮಾತು ಅವರ ಕಾರ್ಯಗಳನ್ನು ಮಾತ್ರವಲ್ಲದೆ ಅವರ ಆಚಾರವಿಚಾರ, ಭಾವನೆಗಳೆಲ್ಲವನ್ನೂ ಎಂದರೆ ಮನುಷ್ಯನ ಇಡೀ ವ್ಯವಹಾರ ಪ್ರಪಂಚವನ್ನೇ ಒಳಗೊಳ್ಳುತ್ತದೆ" ಎಂದು ಅರ್ಥ ವಿಸ್ತರಣೆಯನ್ನು ನೀಡಿದ್ದಾರೆ. ಇವುಗಳ ಜೊತೆಗೆ ಸ್ಫೂರ್ತಿ, ಕಾವ್ಯ ನಿರ್ಮಿತಿ 'ಕೆಥಾರ್ಸಿಸ್' ವಸ್ತುವಿನ್ಯಾಸ ಇತ್ಯಾದಿ ಪರಿಕಲ್ಪನೆಗಳನ್ನು ಗ್ರೀಕ್ ದುರಂತ ನಾಟಕಗಳ ಉದಾಹರಣೆಗಳ ಹಿನ್ನೆಲೆಯಲ್ಲಿ ವಿವರಿಸಿರುವ ಕ್ರಮವನ್ನು ಮತ್ತು ನಾಟಕ ಪ್ರಕಾರಗಳ ವಿವರಣೆಯನ್ನೂ ನೀಡಿದ್ದಾರೆ. ಅಲ್ಲದೆ ಸಮಗ್ರ ಅಧ್ಯಯನದ ಮೂಲಕ "ಅರಿಸ್ಟಾಟಲನ ಕಾವ್ಯ ಮೀಮಾಂಸೆ ಸಾಹಿತ್ಯದ ಸತ್ವ, ಸ್ವರೂಪ ಲಕ್ಷಣ ಪರಿಣಾಮ, ಪ್ರಯೋಜನಗಳನ್ನು ಕುರಿತು ಶಾಸ್ತ್ರೀಯವಾಗಿ, ಸುಸಂಬದ್ಧವಾಗಿ ವಿವೇಚಿಸುವ ಆದಿಗ್ರಂಥವಾಗಿದೆ" ಎನ್ನುವ ನಿಲುವನ್ನು ತಲುಪುತ್ತಾರೆ. ಮುಂದೆ ಕಾವ್ಯದಲ್ಲಿ 'ರೀತಿ' ತತ್ವವನ್ನು ಎತ್ತಿಹಿಡಿದ ಹೆರಾಕ್ಲಿಯೊ ಡೊರಾಸ್, ಆ್ಯಂಡ್ರೊ ಮೆನೆಡಿಸ್ ಮೊದಲಾದವರ

ಚರ್ಚೆಗಳನ್ನು ವಿವರಿಸಿದ್ದಾರೆ. ಹಾಗೆಯೇ ಹೋಮರ್ ಕಾವ್ಯದ ವಿಮರ್ಶೆಯಲ್ಲಿ ಅರಿಸ್ಟಾರ್ಕಸ್‌ನ ಮೌಲಿಕ ಅಭಿಪ್ರಾಯಗಳನ್ನು ರೋಮನ್ ಕಾವ್ಯ ವಿಮರ್ಶೆಯಲ್ಲಿ ಪ್ಲಾಟಿಸ್, ಲ್ಯೂಸಿಲಿ ಯಾಸ್. ಟೆರೆನ್ಸ್ ಮುಂತಾದವರ ಚರ್ಚೆಗಳ ಕುರಿತು ಮಧ್ಯೆಮಧ್ಯೆ ತಮ್ಮ ಅಭಿಪ್ರಾಯಗಳನ್ನು ಒಳಗೊಂಡಂತೆ ವಿವರಿಸಿದ್ದಾರೆ.

ಇದೇ ಗ್ರಂಥದ ಎರಡನೇ ಭಾಗದಲ್ಲಿ, ಅರಿಸ್ಟಾಟಲನ ನಂತರದ ಮಹತ್ವದ ವಿಮರ್ಶಕನೆನೆಸಿಕೊಂಡ ಹೊರೇಸನ ಕಾವ್ಯ ಚಿಂತನೆಗಳನ್ನು ಒಳಗೊಂಡ 'ಕಾವ್ಯ ಕಲೆ' ಎಂಬ ಗ್ರಂಥದ ಕುರಿತು, ಅರಿಸ್ಟಾಟಲನ ಗ್ರಂಥದ ನಂತರ ಹೊರೇಸನ ಈ ಗ್ರಂಥ ಕಾವ್ಯ ಅಥವಾ ಗ್ರಂಥವಿಮರ್ಶೆಯ ಎರಡನೇ ಅಥವಾ ಮುಂದುವರಿಕೆಯ ಘಟ್ಟ ಎಂದು ಹೇಳಿ ಹೊರೇಸನ ಒಟ್ಟು ವಿಮರ್ಶೆಯ ನಿಲುವನ್ನು" ಅರಿಸ್ಟಾಟಲನ ತಾತ್ವಿಕ ಅನ್ವೇಷಣೆಯ ರೀತಿ ಹೊರೇಸನದಲ್ಲವಾದರೂ ಬಹುಮಟ್ಟಿಗೆ ಪೂರ್ವಿಕರ ವಿಚಾರ ಸರಣಿಯನ್ನೇ ಹೊಸ ಸಂದರ್ಭಕ್ಕನುಗುಣವಾಗಿ ಅರ್ಥವಿಸಿ ಅನ್ವೇಷಣೆಯ ವ್ಯಾಪ್ತಿಯನ್ನು ಅದರ ವ್ಯಾವಹಾರಿಕ ಉಪಯುಕ್ತತೆಯನ್ನೂ ವಿಸ್ತರಿಸುತ್ತಾನೆ. ಅಷ್ಟನ್ನು ಸಾಧಿಸುವಲ್ಲಿ ಸಾಹಿತ್ಯ ರಚನೆಗೆ ಸಂಬಂಧಿಸಿದ ಹಾಗೆ ಆತನ ವಿಶ್ಲೇಷಣೆ ಅನೇಕ ಹೊಸ ವಿಚಾರಗಳತ್ತ ಹರಿದದ್ದು ಕಂಡು ಬರುತ್ತದೆ. ತನ್ನ ಚಿಂತನೆಯಲ್ಲಿ ಹೊಳೆದ ವಿಚಾರಗಳನ್ನು ಸುವ್ಯವಸ್ಥಿತವಾಗಿ, ಹಾಗೆಯೇ ಸಾಹಿತ್ಯದ ಮೂಲೋದ್ದೇಶಗಳ ಬಗೆಯಲ್ಲಿ ತಾನಿರಿಸಿಕೊಂಡ ಕಲ್ಪನೆಗೆ ಹೊಂದುವಂತೆ ವಿಶ್ಲೇಷಿಸುವ ಆತನ ಕಾವ್ಯ ಕಲೆ (ಆರ್ಸ್ ಪೊಯಟಿಕಾ ಆತನ ಸಮ ಕಾಲೀನರಿಗೆ ಹೇಗೋ ಹಾಗೆ ಮುಂದಿನ ತಲೆಮಾರಿನವರಿಗೂ ಒಂದು ಆಕರ ಗ್ರಂಥವಾಗಿ ವಿಶೇಷವಾದ ಮನ್ನಣೆ ಪಡೆಯಿತು" ಎಂದು ಹೊರೇಸನ ಕಾವ್ಯ ಪರಿಕಲ್ಪನೆಗಳ ವಿಶ್ಲೇಷಣೆಯೊಂದಿಗೆ ಅದರ ಮೌಲಿಕತೆಯನ್ನೂ ಎತ್ತಿ ತೋರಿದ್ದಾರೆ.

ಡಿವೈನ್ ಕಾಮೆಡಿ ಯ ಡಾಂಟೆ ವಿಮರ್ಶಕ, ಕಾವ್ಯ ಚಿಂತಕ ಎಂದು ಪರಿಗಣಿತನಾಗಿಲ್ಲದಿದ್ದರೂ "ಡಿವಡ್ಯಾರಿಎಲೊಕ್ವೆನ್ಷಿಯಾ" (ಓಜಸ್ವಿಯಾದ ದೇಶ ಭಾಷೆ) ಎಂಬ ಗ್ರಂಥದಲ್ಲಿ ಕಾವ್ಯ ಭಾಷೆಯನ್ನು ಕುರಿತಾದ ವಿಸ್ತೃತ ಚರ್ಚೆಯತ್ತ ನಮ್ಮಗಮನ ಸೆಳೆಯುತ್ತಾರೆ. ಅವನಿಗೆ ತನ್ನ ಮಾತೃಭಾಷೆಯಾದ ಇಟಾಲಿಯನ್ ಬಗೆಗಿದ್ದ ಪ್ರೀತಿ, ನಿಷ್ಠೆ ಮುಂದೆ ಸ್ಥಿರವಾದ ನಂಬಿಕೆಯಾಗಿ ಮಾರ್ಪಟ್ಟು, ಅನೇಕ ರೀತಿಯಲ್ಲಿ ಪ್ರತಿಭಟನೆಗಳನ್ನು ಎದುರಿಸಬೇಕಾಗಿಯೂ, ತನ್ನ ನಿಲುವನ್ನು ಸಮರ್ಥಿಸಿಕೊಳ್ಳಬೇಕಾಗಿ ಬಂದುದನ್ನೂ ಮುಂದೆ ಲ್ಯಾಟಿನ್ ಭಾಷೆಯ ಹಿರಿಮೆ ಘನತೆಗಳನ್ನು ಸೌಂದರ್ಯವನ್ನೂ ಒಪ್ಪಿಕೊಳ್ಳಬೇಕಾಗಿ ಬಂದುದನ್ನೂ ವಿವರಿಸಿದ್ದಾರೆ.

ಕಾವ್ಯ ವಿಚಾರದಲ್ಲಿ ಮಾತನಾಡುವ ಸಿಡ್ನಿಯು ಬಗ್ಗೆ ಬರೆಯುವಾಗ ಅವನ ಕಾವ್ಯ ಸಮರ್ಥನೆ ಬಗೆಗಿನ ವಿಚಾರಗಳಿಗೆ ಇರುವ ಐತಿಹಾಸಿಕ ಮಹತ್ವವನ್ನು ಎತ್ತಿಹಿಡಿಯುತ್ತಾರೆ. ಅದಕ್ಕೆ ಇರುವ ಮಹತ್ವಕ್ಕೆ ಮುಖ್ಯ ಕಾರಣಗಳನ್ನು ಮೌಲಿಕತೆ, ಮತ್ತು ಹಿಂದಿನವರ ವಿಚಾರಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ, ಅವೆಲ್ಲವುಗಳ ಸಾರವನ್ನು ಅಳವಾಗಿ ಗ್ರಹಿಸಿ ತನ್ನದೇ ಆದ ಒಂದು ಹೊಸ ಕಲ್ಪನೆಯನ್ನು ರೂಪಿಸಿಕೊಂಡಿರುವುದರಲ್ಲಿ ಗುರುತಿಸುತ್ತಾರೆ: ಕಾವ್ಯ ಸಮರ್ಥನೆಯಲ್ಲಿ ಅವನು ತೋರಿದ ತಾತ್ವಿಕ ದೃಷ್ಟಿ, ಸಂಯಮ ಹೃದಯವಂತಿಕೆ, ವಿಷಯದ ಬಗೆಯಲ್ಲಿಯ ಆತ್ಮೀಯವಾದ ನಿಷ್ಠೆ ಮೊದಲಾದವುಗಳಿಂದ ತನ್ನ ಕಾವ್ಯ ಸಮರ್ಥನೆಗೆ ಒಂದು ಘನತೆಯನ್ನೂ ಪ್ರತಿ ಪಾದನೆಗೆ ಗಾಂಭೀರ್ಯವನ್ನೂ ತಂದುಕೊಟ್ಟಿರುವುದನ್ನು ಗುರುತಿಸಿ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಸಿಡ್ನಿ ವಿಂಗಡಿಸಿ ವಿವರಿಸಿದ ೧. ಧಾರ್ಮಿಕ ೨. ತಾತ್ವಿಕ ಹಾಗೂ ೩. ಲೌಕಿಕ ಪ್ರಕಾರಗಳನ್ನು ಪ್ರಸ್ತಾಪಿಸಿ, ಅವನಿಗೆ ಈ ಬಗೆಯ ವಿಂಗಡಣೆ ಸರಿಯಲ್ಲವೆನಿಸಿದರೂ ಕಾವ್ಯವಲ್ಲದ ಬರಹಗಳಿಂದ ಕಾವ್ಯವನ್ನು ಬೇರ್ಪಡಿಸಲು ಅಗತ್ಯವೆಂಬ ಕಾರಣಕ್ಕಾಗಿ ತಾನು ಆ ರೀತಿ ಮಾಡಬೇಕಾಯಿತೆಂಬ ಅವನ ಅಭಿಪ್ರಾಯವನ್ನು ತಿಳಿಸುತ್ತಾರೆ. ಅವನು ಹೇಳುವ ಕಾವ್ಯದ ಸ್ವರೂಪ ಪ್ರಕಾರಗಳು, ಜನಾಂಗದ ಜೀವನದಲ್ಲಿ ಅದರ ಕಾರ್ಯ, ಒಳ್ಳೆಯದರ ಅರಿವಿನ ಜೊತೆಗೆ ಒಳ್ಳೆಯದನ್ನು ಮಾಡುವುದರತ ಮನುಷ್ಯನನ್ನು ಪ್ರೇರಿಸುವ ಶಕ್ತಿಯ ಬಗ್ಗೆ ಸಿಡ್ನಿಯ ವಿಚಾರಗಳನ್ನು ವಿವರಿಸಿದ್ದಾರೆ. ಅಲ್ಲದೆ ಅವನು ಕಾವ್ಯದ ಸಮರ್ಥನೆಗೆಂದು ಹೇಳುವ ಕೆಲವು ಮಾತುಗಳನ್ನೂ ವಿವರಿಸಿದ್ದಾರೆ ತನ್ನಲ್ಲಿರುವ ವಿಶಿಷ್ಟ ಗುಣಗಳ ಮೂಲಕ ಕಾವ್ಯ ಓದುಗನನ್ನು ತನ್ನೆಡೆಗೆ ಸೆಳೆಯುತ್ತದೆ, ಈ ಆಕರ್ಷಣೆಯೇ ಅದರ ಶಕ್ತಿ. ಕಾವ್ಯ ಕಣ್ಣೆದುರು ಚಿತ್ರಗಳನ್ನು ನಿಲ್ಲಿಸಿ, ಕಲ್ಪನೆಯನ್ನು ಕೆರಳಿಸಿ, ಸಮ ಪ್ರಮಾಣದ ನಾದಲಯಗಳನ್ನು ಬಳಸುವುದರಿಂದ ಸಂಗೀತದಂತೆ ಓದುಗನ ಮನಸ್ಸನ್ನು ಸೆರೆ ಹಿಡಿದು, ಹೃದಯವನ್ನು ಕಟ್ಟಿ ಭಾವ ಜಾಗೃತಿಯನ್ನುಂಟು ಮಾಡುತ್ತದೆ. ಇಂಥ ಸಾಮರ್ಥ್ಯದಿಂದ ಕಾವ್ಯ  ಒಳ್ಳೆಯದರತ್ತ ಮನುಷ್ಯನ ಮನಸ್ಸನ್ನು ಸೆಳೆದೊಯ್ಯುತ್ತದೆ, ದಾರ್ಶನಿಕ ಇಂಥದು ಒಳ್ಳೆಯದೆಂದು ಹೇಳಬಹುದು, ಚರಿತ್ರೆಕಾರ ದೃಷ್ಟಾಂತಗಳನ್ನು ಒದಗಿಸಬಹುದು ಇದು ದಾರಿ ಎಂದೂ ಇಬ್ಬರು ದಾರಿಯನ್ನು ತೋರಿಸಬಹುದು, ಆದರೆ ಕಾವ್ಯ ದಾರಿಯನ್ನು ತೋರಿಸುತ್ತದೆಯಲ್ಲದೆ ಅದರತ್ತ ಓದುಗನನ್ನು ಮನವೊಲಿಸಿ ಸೆಳೆಯುತ್ತದೆ. ಆದರ್ಶದ ಚಿತ್ರಗಳನ್ನು ತೋರಿಸಿ, ಅದರತ್ತ ಒಲಿಸಿ, ಅಂಥದನ್ನು ತಮ್ಮದಾಗಿಸಿಕೊಳ್ಳಬೇಕೆಂಬ ಅಭಿಲಾಷೆಯನ್ನು ಕಾವ್ಯ ಮೂಡಿಸುತ್ತದೆ ಎಂದು ವಿವರವಾಗಿ ಸಮರ್ಥನೆ ನೀಡುವುದೇ ಅಲ್ಲದೆ ಕಾವ್ಯದ ಬಗ್ಗೆ ಇದ್ದ ಗಂಭೀರ ಆರೋಪಗಳು, ಆಕ್ಷೇಪಗಳು, –ಕಾವ್ಯ ನಿರ್ಮಾಣ ಕೆಲಸಕ್ಕೆಬಾರದ್ದು

ಕಾವ್ಯ ಸುಳ್ಳುಗಳ ಕಂತೆ; ಅಸತ್ಯಗಳ ತಾಯಿ ಮನುಷ್ಯನ ಚಿತ್ತ ವಿಕಾರಗಳನ್ನು ಕೆರಳಿಸುತ್ತದೆ, ದುಷ್ಪ್ರವೃತ್ತಿಗಳಿಗೆ ಪ್ರಚೋದಕವಾಗಿ ಮನಸ್ಸನ್ನು ದುರ್ಬಲವಾಗಿಸುತ್ತದೆ. ೪ ತನ್ನ ಆದರ್ಶ ರಾಜ್ಯದಿಂದ ಪ್ಲೇಟೋ ಅದಕ್ಕಾಗಿಯೇ ಕವಿಗಳನ್ನು ಹೊರದೂಡಿದ್ದ – ಎಂಬುದಕ್ಕೆಲ್ಲ ಸಿಡ್ನಿ ಸಮರ್ಥನೀಯವಾಗಿ ಉತ್ತರಿಸಿರುವುದನ್ನೂ ವಿವರಿಸಿದ್ದಾರೆ ಇವುಗಳ ಜೊತೆಗೆ ನಾಟಕಗಳು, ಭಾಷೆ, ಶೈಲಿ ಇತ್ಯಾದಿಗಳನ್ನೂ ಕುರಿತು ಮಂಡಿಸಿದ ವಿಚಾರಗಳ ಬಗ್ಗೆಯೂ ಗಮನ ಸೆಳೆದಿದ್ದಾರೆ ಮುಂದೆ ಕಾವ್ಯಾನುಭವದಿಂದ ಸಿದ್ಧಿಸುವ ಆನಂದದ ಸ್ವರೂಪದ ವಿವರಣೆಯನ್ನೂ ಮನಗಾಣಿಸಿದ್ದಾರೆ. ವಿಸ್ತೃತವಾದ, ಸಿಡ್ನಿಯ ಕಾವ್ಯ ವಿಚಾರ ತತ್ವಗಳ ಬಗ್ಗೆ ಲೇಖಕರು ಗಂಭೀರ ವಿವರಣೆ ವಿಶ್ಲೇಷಣೆ ನೀಡಿರುವುದರ ಜೊತೆಗೆ, ಲೇಖಕರು ಸಿಡ್ನಿಯ ವಿಚಾರದಲ್ಲಿ, "ಆಕ್ಷೇಪಗಳಿಗೆ ಇದಿರಾಗಿ ಕಾವ್ಯಗಳನ್ನು ಸಮರ್ಥಿಸುವುದೊಂದೇ ಸಿಡ್ನಿಗೆ ಮುಖ್ಯವಾಗಿರಲಿಲ್ಲ........ ಇದ್ದ ಕೊರತೆಗಳನ್ನು ಬಗೆಹರಿಸಿಕೊಂಡು ಕಾವ್ಯ ಬೆಳೆಯಬೇಕಾದರೆ ಏನನ್ನು ಮಾಡಬೇಕು, ಮಾಡಬಹುದು ಎಂಬುದರ ಕಡೆಗೂ ಆತನ ಗಮನವಿದ್ದಿತು ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿ. ಅಭಿಪ್ರಾಯವನ್ನು ತಳೆಯುತ್ತಾರೆ.

ಪಾಶ್ಚಾತ್ಯ ವಿಮರ್ಶೆಯ ಸಂಪ್ರದಾಯ ಯುಗ ಸಂಪುಟದಲ್ಲಿ ನಾಲ್ಕು ಭಾಗಗಳಿದ್ದು, ರಿನೈಸನ್ಸ್ ವಿಮರ್ಶೆಯ ಫಲ ಶ್ರುತಿ, ರಿನೈಸಾನ್ಸ್‌ಯುಗದ ಪರಿಣಾಮವಾಗಿ ಹೊರಬಂದ ಮತ್ತು ಪಾಶ್ಚಾತ್ಯ ವಿಮರ್ಶೆಯ ಪ್ರಗತಿಗೆ ಕಾರಣರಾದ ೧೭-೧೮ ನೇ ಶ.ದ ಅವಧಿಯಲ್ಲಿ ಮೊದಲಲ್ಲಿ ಬಂದ ಬೆನ್‌ಜಾನ್‌ಸನ್, ಮಧ್ಯದಲ್ಲಿ ಅವಧಿಯಲ್ಲಿನ ಜಾನ್ ಡ್ರೈಡನ್ ಹಾಗೂ ಕೊನೆಯಲ್ಲಿ ಬಂದ ಡಾಕ್ಟರ್ ಜಾನ್‌ಸನ್ – ಹೀಗೆ ಮೂವರ ವಿಮರ್ಶಾ ಸಂಬಂಧ ವಿಚಾರಗಳ ಚರ್ಚೆ ಇಲ್ಲಿ ಮುಖ್ಯವಾಗುತ್ತದೆ. ೧೬ ನೇ ಶ ದಲ್ಲಿ ಕಾಣಿಸಿಕೊಂಡ ನವೋದಯದ (ರಿನೈಸಾನ್ಸ್) ಸಂಧಿಕಾಲ ಘಟ್ಟವಾಗಿದ್ದು ಅಲ್ಲಿಯ ವರೆಗೆ ನಡೆದುಬಂದ ಮತ್ತು ಆಧುನಿಕವೆನ್ನಬಹುದಾದ ತಿರುವನ್ನು ಪಡೆದ ವಿಚಾರ ಪರಂಪರೆಯನ್ನು ವಿಶ್ಲೇಷಣೆಯೊಂಧಿಗೆ ವಿವರಿಸಿದ್ದಾರೆ. ಸಾಹಿತ್ಯ ಮಿಮಾಂಸೆಯಲ್ಲಿ ಹೊಸ ಧೋರಣೆಗಳನ್ನು ಗುರುತಿಸುತ್ತಾರೆ. ಆ ಕಾಲಘಟ್ಟದಲ್ಲಿ ನಡೆದ ಪರಂಪರೆಯ ಮನರುಜ್ಜೀವನದ ಪ್ರಯತ್ನಗಳನ್ನು ಸೂಕ್ಷ್ಮವಾಗಿ ಪರಿಚಯಯಿಸುತ್ತಾರೆ.

ಇದೇ ಸಂದರ್ಭದಲ್ಲಿ, ಯೂರೋಪಿನಲ್ಲಿಯ ನವೋದಯ ಇಟಲಿಯಲ್ಲಿ ಪ್ರಾರಂಭವಾದ, ಸಂಗತಿಯನ್ನು ನೆನಪಿಸುತ್ತಾ ಮತ್ತೊಮ್ಮೆ ಅರಿಸ್ಟಾಟಲನ 'ಕಾವ್ಯಮಿಮಾಂಸೆ', ಹೊರೇಸನ ಕಾವ್ಯ ಕಲೆ, ಡ್ಯಾನಿಯೆಲ್ಲೋನ ಪುಟ್ಟ ಪ್ರಬಂಧ, ಇಟಾಲಿಯನ್ ಪ್ರಸಿದ್ಧ ವಿಮರ್ಶಕರಾದ ಸ್ಕಾಲಿಜರ್, ಕ್ಯಾಸ್ಟೆಲ್ ವೆಟ್ರೋ ಮತ್ತು

ಪ್ಯಾಟ್ರಿಝಿ ಮೊದಲಾದವರ ಕಾವ್ಯ ವಿಚಾರಗಳನ್ನು ತೌಲನಿಕವಾಗಿ ಪರಿಶೀಲಿಸಿದ್ದಾರೆ. ಇಂತಹ ಒಂದು ತೌಲನಿಕ ದೃಷ್ಟಿಯಿಂದಾಗಿ 'ಹದಿನಾರನೆ ಶತಮಾನದ' ಕೊನೆಯಿಂದ ಮೊದಲಾಗಿ ಇಂಗ್ಲಿಷ್ ವಿಮರ್ಶೆಯ ವಿಷಯ ಹಾಗೂ ಪ್ರೇರಣೆ ಎರಡೂ ಬೇರೆಯಾಗಿದ್ದರಿಂದ, ಪರಿಣಾಮ, ಫಲಶ್ರುತಿಗಳೂ ಬೇರೆಯಾದವು" ಎನ್ನುವ ತೀರ್ಮಾನಿಕ ನೆಲೆಯನ್ನು ತಲುಪುತ್ತಾರೆ: ೧೭ ನೇ ಶ.ದ ಹೊತ್ತಿಗೆ ಷೇಕ್ಸ್ ಪಿಯರ್ ಮಾರ್ಲೋ, ಕಿಡ್, ವೆಬ್‌ಸ್ಟರ್, ಮೊದಲಾದ ಪ್ರತಿಭಾನ್ವಿತ ನಾಟಕಕಾರರು  ಕಾಣಿಸಿಕೊಂಡು ಅರಿಸ್ಟಾಟಲನ ನಿಯಮಗಳಿಗಾಗಲೀ, ಯೂರಿಪಿಡೀಸನ ಮೇಲ್ಪಂಕ್ತಿಗಾಗಲಿ ಬದ್ಧವಾಗದೆ ಸ್ವಂತ ಪ್ರತಿಭೆ, ಸ್ವತಂತ್ರ ಆಲೋಚನೆಗಳಿಂದ ಮಹತ್ವದ ನಾಟಕಗಳನ್ನು ನೀಡುವುದರ ಮೂಲಕ, ಕಾವ್ಯದತ್ತ ಮಾತ್ರವೇ ಸೀಮಿತವಾಗಿದ್ದ ವಿಮರ್ಶೆಯ ದೃಷ್ಟಿಯನ್ನು ನಾಟಕಗಳತ್ತಲೂ ಹೊರಳುವಂತೆ ಮಾಡಿದರು. ಎಷ್ಟರ ಮಟ್ಟಿಗೆ ನಾಟಕಗಳು ಪ್ರಭಾವ ಬೀರಿದುವೆಂದರೆ ನಾಟಕವೂ ಒಂದು ಪ್ರಮುಖ ಸಾಹಿತ್ಯ ಪ್ರಕಾರವಾಗಿ ಪರಿಗಣಿತವಾಯಿತಲ್ಲದೆ ಮುಂದೆ ನೂರು ವರ್ಷಗಳ ವರೆಗೆ ವಿಮರ್ಶೆ ವಿವೇಚನೆ ವಿಶ್ಲೇಷಣೆಗಳು ನಾಟಕಗಳನ್ನೇ ಕೇಂದ್ರವಾಗಿರಿಸಿಕೊಂಡವು.

ಷೇಕ್ಸ್‌ಪಿಯರ್‌ನ ಸಮಕಾಲೀನನಾಗಿದ್ದ ಬೆನ್‌ಜಾನ್ ಸನ್, ನಾಟಕಕಾರನಾಗಿದ್ದೂ ಒಬ್ಬ ಒಳ್ಳೆಯ ವಿಮರ್ಶಕನಾಗಿದ್ದ. ತನ್ನ ಸಾಹಿತ್ಯ ಬದುಕಿನ ಹೆಚ್ಚು ಕಾಲವನ್ನು ನಾಟಕ ರಚನೆ ಮತ್ತು ಪ್ರಯೋಗಗಳಿಗೇ ಮೀಸಲಿಟ್ಟಿದ್ದ. ಇವನಲ್ಲಿ ಒಬ್ಬ ಸಮರ್ಥ ವಿಮರ್ಶಕ ಅಂತರ್ಗತನಾಗಿದ್ದುದರಿಂದ, ಸಮಕಾಲೀನ ಕಾವ್ಯ– ದುರಂತ ನಾಟಕಗಳು ವಿನೋದ ನಾಟಕಗಳು ಆಗ ಇದ್ದ ದುಃಸ್ಥಿತಿಯಿಂದ ಹೊರಬಂದು ಘನತೆಯನ್ನು ಮತ್ತೆ ಪಡೆಯುವಂತಾಗಬೇಕೆಂಬ ಹಂಬಲದಿಂದ ಮೌಲಿಕವಾದ ತತ್ಸಂಬಂಧಿ ಚಿಂತನೆಗಳನ್ನು, ವಿನೋದ ನಾಟಕದ ಹೊಸ ಕಲ್ಪನೆಯನ್ನು ಮುಂದಿರಿಸಿದ. ಈ ರೀತಿಯಲ್ಲಿ ಜಾನ್‌ಸನ್ ವಿಮರ್ಶಾ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ವಿವರಿಸಿ, "ನೇರವಾಗಿ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಹಾಗೆ ಜಾನ್‌ಸನ್ ಯಾವ ಒಂದು ಗ್ರಂಥವನ್ನು ಬರೆಯದಿದ್ದರೂ ಆತನ ಬರಹದುದ್ದಕ್ಕೂ ವಿಮರ್ಶೆಯ ವಿಚಾರಗಳು ಹಾಸು ಹೊಕ್ಕಾಗಿ ಹರಡಿಕೊಂಡಿವೆ" ಎಂದು ಹೇಳುವುದರ ಮೂಲಕ ಜಾನ್‌ಸನ್‌ನಲ್ಲಿ  ಚಿರಂತನವಾಗಿ ಜೀವಂತವಾಗಿ ಕ್ರಿಯಾಶೀಲವಾಗಿ ಇದ್ದ ವಿಮರ್ಶಾ ಪ್ರಜ್ಞೆಯನ್ನು ಗುರುತಿಸುತ್ತಾರೆ. ಅಲ್ಲದೆ ಕಾವ್ಯದ ಚರ್ಚೆಯಲ್ಲಿ, ಅವನು ಅನುಸರಿಸಿದ ಪೊಯೆಸಿಸ್, ಪೊಯೆಮಾ ಮತ್ತು ಪೊಯೆಟಾ ಮೂರೂ ಕ್ರಮಗಳಲ್ಲಿ ವಿಶ್ಲೇಷಣೆ ಮಾಡುವನಾದರೂ ಅವನ ಹೆಚ್ಚಿನ ಒತ್ತು ಇರುವುದು ಪೊಯೆಟಾದಲ್ಲಿ ಎಂದು ಗುರುತಿಸುತ್ತಾರೆ ಮತ್ತು ಅವನು ಹೇಳಿದ ಕವಿಯ ಅಗತ್ಯಗಳಾದ ನಿಸರ್ಗದತ್ತ ಪ್ರತಿಭೆ, ಸತತ ಪರಿಶ್ರಮ, ಪೂರ್ವ ಸೂರಿಗಳಿಂದ

ಪಡೆದ ಮಾರ್ಗದರ್ಶನ, ವಿಸ್ತೃತವಾದ ವ್ಯಾಸಂಗ ಹಾಗೂ ಕಲೆಗೆ ಸಂಬಂಧಿಸಿದ ತಂತ್ರಜ್ಞಾನ ಎಂದು ಐದನ್ನು ಪ್ರಸ್ತಾಪಿಸಿ ಅವುಗಳ ಬಗ್ಗೆ ಸಂಕ್ಷಿಪ್ತ ವಿವರಣೆಯನ್ನು ನೀಡುತ್ತಾರೆ.

ಸಂಪ್ರದಾಯವಾದ ಮತ್ತು ಹೊಸ ನೋಟ–ಎನ್ನುವ ಭಾಗದಲ್ಲಿ ಬೆನ್‌ಜಾನ್ ಸನ್ ನಿಧನವಾಗುವ ಹೊತ್ತಿಗೇ ಎಲಿಜಾಬೆಥನ್ ಸಾಹಿತ್ಯಯುಗದ ಹಿಂದಿನ ಯುಗದ ಪ್ರೇರಕ ಶಕ್ತಿಗಳು ಕಳೆಗುಂದಿದ್ದುದನ್ನೂ ಷೇಕ್ಸ್ ಪಿಯರ್‌ನ ವರ್ಚಸ್ಸಿನಿಂದಾಗಿ ಸೃಷ್ಟಿಯಾಗಿದ್ದ ಉಚ್ಛ್ರಾಯ ಸ್ಥಿತಿಮುಗಿದು. ಕೆಲವು ರಾಜಕೀಯ ಸ್ಥಿತ್ಯಂತರಗಳಿಂದಾಗಿ; ಮತ್ತು ಪ್ರಬಲವಾಗಿದ್ದ ಫ್ರಾನ್ಸ್‌ನ ಸಾಂಸ್ಕೃತಿಕ ಪ್ರಭಾವದಿಂದಾಗಿ ಬದಲಾಗುತ್ತಿದ್ದ ರೀತಿ–ನೀತಿ ನಡವಳಿಕೆ ವೈಚಾರಿಕ ಧೋರಣೆಗಳಿಂದಾಗಿ ಒಂದು ಹೊಸ ಯುಗದ ಆರಂಭದ ಹೆಜ್ಜೆಗಳನ್ನು ಗುರುತಿಸುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ೧೯ ನೇ ಶ.ದ ವಿಮರ್ಶಾ ಪ್ರಪಂಚದಲ್ಲಿ ಅತ್ಯಂತ ಅದ್ಭುತವಾದ ವಿಮರ್ಶಾ ಪ್ರತಿಭೆಗಳೆಂದು ಗುರುತಿಸಿಕೊಂಡು ಈ ಶತಮಾನಕ್ಕೆ ಮುನ್ನುಡಿಯಾದವರೆಂದರೆ ೧೭ನೇ ಶ.ದ ಉತ್ತರಾರ್ಧದಲ್ಲಿಯ ಜಾನ್ ಡ್ರೈಡನ್ ಮತ್ತು ೧೮ನೇ ಶ.ದ ಸಾಹಿತ್ಯಾಚಾರ್ಯನೆನಿಸಿಕೊಂಡ ಡಾಕ್ಟರ್ ಸಾಮ್ಯುಯೆಲ್ ಜಾನ್‌ಸನ್‌ರ ಬಗ್ಗೆ ಆತ್ಮೀಯವಾಗಿ ಬರೆಯುತ್ತಾ ಅವರಿಬ್ಬರನ್ನೂ ಪಾಶ್ಚಾತ್ಯಾ ವಿಮರ್ಶೆಯ ಚರಿತ್ರೆಯಲ್ಲಿನ ಸೀಮಾಪುರುಷರೆಂದು ಮೆಚ್ಚಿಹೊಗಳುತ್ತಾರೆ. ೧೭ನೇ ಶ.ದಿಂದ ೧೮ನೇ ಶ.ದ ಉತ್ತರಾರ್ಧದವರೆಗೆ ಸರಿಸುಮಾರು ಒಂದು ನೂರು ವರ್ಷಗಳ ಕಾಲ ಫ್ರಾನ್ಸ್‌ನ ವಿಮರ್ಶಾ ಧೋರಣೆಗಳ ಸಂಕೋಲೆಯಲ್ಲಿ ಬಿಗಿದುಕೊಂಡಿದ್ದ ಇಂಗ್ಲೆಂಡಿನ ವಿಮರ್ಶಾ ದೃಷ್ಟಿಗೆ ಒಂದು ರೀತಿಯ ಬಿಡುಗಡೆ ಕಲ್ಪಿಸಿದ ವ್ಯಕ್ತಿ ಜಾನ್ ಡ್ರೈಡನ್, ಫ್ರಾನ್ಸ್‌ನಲ್ಲಿನ ನವಮಾರ್ಗ ಸಂಪ್ರದಾಯದ ವಿಚಾರಗಳನ್ನು ಮತ್ತು ಅವಕ್ಕೆ ಪ್ರತಿಯಾಗಿ ರೂಪುಗೊಳ್ಳುತ್ತಿದ್ದ ವಿಶಾಲ ಮನೋವೃತ್ತಿಗಳನ್ನು ಅರಿಯುವಲ್ಲಿ ಜಾನ್ ಡ್ರೈಡನ್ನನ ವಿಮರ್ಶಾ ನಿಲುವು ಸಿದ್ಧಾಂತಗಳನ್ನು ಅರ್ಥವಾಡಿಕೊಳ್ಳುವುದು ಅನಿವಾರ್ಯ ವೆಂಬಂತಾಯಿತು. ಡ್ರೈಡನ್ನನ ಕೃತಿಗಳಲ್ಲಿ ಮುನ್ನುಡಿಗಳಾಗಿ ಬಂದ ಪ್ರಸ್ತಾವನೆಗಳಲ್ಲಿ ಕಾಣಿಸಿಕೊಂಡ ವಿಮರ್ಶಾ ಸಂಬಂಧ ವಿಚಾರಗಳನ್ನು ಗ್ರಹಿಸಬೇಕಾದ ಅಗತ್ಯ ಮನಗಾಣುವಂತಾಯಿತು. ಇವನ ವಿಮರ್ಶಾ ವಿಚಾರಣೆಗಳಿಗೆ ನಾಟಕ, ನಾಟಕದ ಪ್ರಕಾರಗಳು ಮತ್ತು ನಾಟಕಕ್ಕೆ ಯೋಗ್ಯವಾದ ಪದ್ಯ ಮಾಧ್ಯಮ ಮೊದಲಾದವುಗಳೇ ಪ್ರೇರಣೆಗಳಾದವು ಎಂಬುದನ್ನು ಗುರುತಿಸಿದ ಲೇಖಕರು ಡ್ರೈಡನ್ನನ ಅಭಿಪ್ರಾಯಗಳು ಪ್ರಾಯೋಗಿಕವಾಗಿದ್ದು, ಆತನ ನಿಜವಾದ ಸಾಧನೆಗೆ ಪೂರ್ವಭಾವಿಯಾಗಿದೆ ಎಂಬ ಅಭಿಪ್ರಾಯವನ್ನು ತಲುಪುತ್ತಾರೆ. ಅವನ ಬರಹಗಳಲ್ಲಿ ಡ್ರೈಡನ್ನನ ತೀಕ್ಷ್ಣವಾದ ಪರಿಣಿತವಾದ ವಿಮರ್ಶಾ ಪ್ರಜ್ಞೆಯನ್ನು ಗುರುತಿಸುತ್ತಾರೆ ದುರಂತ

ನಾಟಕಗಳ, ಮಹಾಕಾವ್ಯಗಳ ಬಗ್ಗೆ ಮಾತನಾಡುವಾಗ ಡ್ರೈಡನ್ ಅರಿಸ್ಟಾಟಲನ ಚಿಂತನೆಗಳನ್ನೇ ಬಿಂಬಿಸುವುದನ್ನು ಗಮನಿಸುತ್ತಾರೆ; ಆದರೆ ಡ್ರೈಡನ್ನನ ಸ್ವಂತ ಮತ್ತು ಸ್ವತಂತ್ರ ವಿಚಾರಗಳ ಮೇಲೂ ಬೆಳಕು ಚೆಲ್ಲುವುದನ್ನು ಮರೆಯುವುದಿಲ್ಲ. ಷೇಕ್ಸ್ ಪಿಯರ್‌ನ ಪ್ರತಿಭೆ, ಬೆನ್ ಜಾನ್‌ಸನ್ ಪ್ರತಿಭೆಯ ಬಗ್ಗೆ ಡ್ರೈಡನ್ನಿನಿಗಿದ್ದ ಅಪಾರವಾದ ಮೆಚ್ಚುಗೆ, ಅವರ ಗುಣಗ್ರಹಣ ಸಾಮರ್ಥ್ಯ ಡ್ರೈಡನ್ನನ ಮಾತುಗಳ ಮೂಲಕವೇ ವಿವರಿಸುತ್ತಾರೆ. ಷೇಕ್ಸ್‌ಪಿಯರ್ ಕಲಿತವನಲ್ಲವಾದರೂ, "ಅರ್ವಾಚೀನ ಮತ್ತು ಬಹುಶಃ ಪ್ರಾಚೀನ ಕವಿಗಳಲ್ಲಿ ಅವನಷ್ಟು ವಿಸ್ತಾರವಾದ, ಎಲ್ಲವನ್ನೂ ಒಳಗೊಳ್ಳಬಲ್ಲ ಅಂತರಂಗದ ಶಕ್ತಿಯನ್ನುಳ್ಳ ಇನ್ನೊಬ್ಬನಿಲ್ಲ ಎಂದು ಬಣ್ಣೀಸುವುದೇ ಅಲ್ಲದೆ ಬೆನ್‌ಜಾನ್ಸನ್‌ನನ್ನು ಮೇಧಾವಿ, ವಿವೇಚನಾಶೀಲ ಬರಹಗಾರ ಮತ್ತು ಯಾವ ರಂಗಭೂಮಿಯೂ ಎಂದಿಗೂ ಪಡೆಯಲಾಗದು ಎಂದು ಉದಾತ್ತವಾಗಿ ಬಣ್ಣಿಸಿದ್ದನ್ನೂ ವಿವರಿಸುತ್ತಾರೆ. ಇಂತಹ ಡ್ರೈಡನ್ನನ ವಿಮರ್ಶಾ ಪ್ರತಿಭೆ ಬಹಳ ಕಾಲದ ವರೆಗೆ ಮುಂದುವರೆದದ್ದನ್ನು ದಾಖಲಿಸುತ್ತಾರೆ. ಹಾಗಾಗಿಯೇ ನಿಯಮಗಳಿಗೆ ಕಟ್ಟುಬೀಳದೆ ಪರಿಣಾಮದ ದೃಷ್ಟಿಯಿಂದಲೇ ಸಾಹಿತ್ಯದ ಬೆಲೆಯನ್ನು ಮಹತ್ವವನ್ನು ಗುರುತಿಸುವ ದಾರಿಯನ್ನು ತೋರಿಸಿದ ಕಾರಣವಾಗಿಯೇ ಆಧುನಿಕ ವಿಮರ್ಶೆಯ ಜನಕ ಎಂದು ಪ್ರಚಲಿತವಾದ ಅಂಶವನ್ನು ಪ್ರಸ್ತಾಪಿಸುತ್ತಾರೆ.

ಮುಂದಿನ ವಿಮರ್ಶಾ ಪರಂಪರೆಯಲ್ಲಿ ಬಂದು ಸೇರಿಕೊಂಡವನೆಂದರೆ ಡಾಕ್ಟರ್ ಜಾನ್ಸನ್, ೧೮ನೇ ಶ.ದ ಗಿಲ್ಡನ್, ಡೆನ್ನಿಸನ್, ಆ್ಯಡಿಸನ್ ಮುಂತಾದವರ ವಿಮರ್ಶಾ ವಿಚಾರಗಳನ್ನು ಸೂಕ್ಷ್ಮವಾಗಿ ಮೊದಲಿಗೆ ಪರಿಚಯಿಸಿ ಆ ಕಾಲದ ಸಾಹಿತ್ಯ ಪರಿಸರದ ಬಗ್ಗೆ ಸೂಕ್ಷ್ಮವಾಗಿ ವಿವರಿಸಿ, ಪಾಶ್ಚಾತ್ಯ ವಿಮರ್ಶೆಯ ಚರಿತ್ರೆಯಲ್ಲಿ ಅತ್ಯಂತ ಶ್ರೇಷ್ಠ ವಿಮರ್ಶಕನೆಂದು ಗುರುತಿಸಿಕೊಂಡ ಡಾಕ್ಟರ್ ಸಾಮ್ಯುಯೆಲ್ ಜಾನ್ಸನ್‌ನ ವಿಮರ್ಶಾ ರೀತಿ ನೀತಿಗಳನ್ನು ಪರಿಚಯಿಸುತ್ತಾರೆ. ವಿಮರ್ಶಾ ಕ್ಷೇತ್ರದಲ್ಲಿನ ಅವನ ನಿರಂಕುಶ ಪ್ರತಿಭೆಯ ಅಪರಿಹಾರ್ಯ ಪ್ರಭಾವದ ಬಗ್ಗೆ ವಿವರಿಸುತ್ತಾರೆ, ವಿಮರ್ಶಾ ಕ್ಷೇತ್ರದಲ್ಲಿನ ಅವನ ಸರ್ವಾಧಿಕಾರತ್ವದ ಬಗ್ಗೆ ಸ್ವಲ್ಪ ಅಸಮಾಧಾನ ತೋರಿದರೂ ವಿಮರ್ಶೆಗೆ ಸಂಬಂಧಪಟ್ಟಂತೆ ಆತ ಹೇಳಿದ್ದನ್ನು ನಿರಾಕರಿಸಲಾಗದು ಎಂಬ ವಾಸ್ತವ ಸತ್ಯವನ್ನು ಒಪ್ಪಿಕೊಂಡಿದ್ದನ್ನು ಪ್ರಸ್ತಾಪಿಸುತ್ತಾರೆ. ಅವನ ಬಗೆಗೆ ಪ್ರಚಲಿತವಿದ್ದ. 'ಆತನೊಬ್ಬ ವಿಕ್ಷಿಪ್ತ ವಿಮರ್ಶಕ; ಗಲ್ಲು ಶಿಕ್ಷೆಯನ್ನು ವಿಧಿಸುವ ನ್ಯಾಯಾಧೀಶ; ಪರಿಮಿತ ದೃಷ್ಟಿಯುಳ್ಳವ; ಹೊಸ ಪ್ರಯೋಗಗಳ ವಿರೋಧಿ' ಎಂದೆಲ್ಲ ಆರೋಪಗಳ ನಡುವೆಯೂ ಅವನ ಪ್ರಖರ ವಿಮರ್ಶಾ ಸಿದ್ಧಾಂತಗಳನ್ನು ವಿರೋಧಿಸುವ ಎದೆಗಾರಿಕೆ ಇಲ್ಲದಾಗಿತ್ತು. ಸಮಕಾಲೀನ ವಿಮರ್ಶೆಯ ಕೊರತೆಗಳನ್ನು ಎತ್ತಿ ತೋರಿದ್ದನ್ನು, ನವಮಾರ್ಗ ಸಂಪ್ರದಾಯದ ವಿಚಾರಗಳನ್ನು ವಿರೋಧಿಸಿದ್ದನ್ನು; ಸಾಹಿತ್ಯವನ್ನು ಕಟ್ಟುನಿಟ್ಟಾಗಿ ವಿವಿಧ

ಪ್ರಕಾರಗಳಾಗಿ ವಿಂಗಡಿಸುವುದನ್ನು ನಿರಾಕರಿಸಿದ್ದನ್ನು ಉದಾಹರಣೆಗಳೊಂದಿಗೆ ವಿವರಿಸುವ ಲೇಖಕರು ಕಾವ್ಯದ ಸತ್ವ ಲಕ್ಷಣಗಳ ಬಗ್ಗೆ ಇರಬೇಕಾದ ಕಲ್ಪನೆಗಳನ್ನು ವಿವರಿಸಿ, ಕಾವ್ಯಕ್ಕೆ ಸಂಬಂಧಿಸಿದಂತೆ ಅವನ ಕೆಲವು ಅಭಿಪ್ರಾಯಗಳನ್ನು ಉದ್ಧರಿಸಿದ್ದಾರೆ "ಬುದ್ಧಿಗೆ ಸಹಾಯಕವಾಗಿ ಕಲ್ಪನೆಯನ್ನು ಬಳಸಿ ಸತ್ಯ ಮತ್ತು ಸಂತೋಷಗಳನ್ನು ಉಂಟುಮಾಡುವ ಕಲೆಯೇ ಕಾವ್ಯ" ಎಂದು ಹೇಳಿದ್ದನ್ನು ಮತ್ತು ಕಾವ್ಯ ರಚನೆಯಲ್ಲಿ ಪ್ರಕೃತಿಯಲ್ಲಿ ಕಾಣುವ ಕ್ರಮಬದ್ಧತೆ ಮತ್ತು ಔಚಿತ್ಯದಂಥ ಗುಣಲಕ್ಷಣಗಳನ್ನೇ ನಿರೀಕ್ಷಿಸುವುದನ್ನೂ ಎತ್ತಿ ಹಿಡಿಯುತ್ತಾರೆ: ಈತ ಎಂಥ ಮಹಾನ್ ಕೃತಿಕಾರನೇ ಆಗಿದ್ದರೂ ಗುಣವನ್ನು ಗುರುತಿಸುವುದರ ಜೊತೆಗೆ ಲೋಪದೋಷಗಳನ್ನೂ ಯಾವುದೇ ಪೂರ್ವಗ್ರಹ ಪೀಡನೆಯಿಲ್ಲದೆ, ಹಿಂಜರಿಕೆಯಿಲ್ಲದೆ ಬರೆಯುವುದನ್ನು ಅವನ ದಿಟ್ಟ ನಿಲುವಿಗೆ ಸಂಕೇತವೆಂಬಂತೆ ಬಿಂಬಿಸುತ್ತಾರೆ. ಶ್ರೇಷ್ಠ ಸಾಹಿತ್ಯವನ್ನು ಗುರುತಿಸಲು ಅವನು ನಿರ್ದೇಶಿಸುವ ಮಾನದಂಡಗಳೆಂದರೆ ಕಾಲ ಪರೀಕ್ಷೆ, ಬುದ್ಧಿಯ ಒಪ್ಪಿಗೆ, ಮತ್ತು ಪ್ರಕೃತಿ ನಿಯಮ ಎಂಬುದನ್ನು ನಿಕಷತ್ರಯಗಳೆಂದು ಸೂಚಿಸಿದ್ದನ್ನೂ ವಿವರಿಸಿ, ಕಡೆಯಲ್ಲಿ ಜಾನ್ಸ್‌ನ್ನು ನವಮಾರ್ಗ ಸಂಪ್ರದಾಯದ ಕಟ್ಟುಪಾಡುಗಳನ್ನು ನಿರಾಕರಿಸಿದವನು, ಪಾಶ್ಚಾತ್ಯವಿಮರ್ಶೆಯ ದಿಕ್ಕನ್ನೇ ಬದಲಾಯಿಸಿದವನು ಯುಗಮಾನಕ್ಕೆ ಸರಿಯಾಗಿ ವಿಮರ್ಶೆಯಲ್ಲಿ ಬುದ್ಧಿಗೆ ಪ್ರಾಮಾಣ್ಯವನ್ನು ಒದಗಿಸಿದವನು ಎಲ್ಲಕ್ಕಿಂತ ಹೆಚ್ಚಾಗಿ ವಿಮರ್ಶೆಯ ಕಾರ್ಯವನ್ನು ಮನುಷ್ಯನ ಅಂತರಂಗದೊಳಗಡೆಗೆ ಹೊಗಿಸಿದವನು ಎಂದುಅವನ ಹಿರಿಮೆಯನ್ನು ಸಾರ ಸಂಗ್ರಹವಾಗಿ ವಿವರಿಸುತ್ತಾರೆ.

ಪಾಶ್ಚಾತ್ಯ ವಿಮರ್ಶೆಯ ರೊಮ್ಯಾಂಟಿಕ್ ಯುಗ ಸಂಪುಟದಲ್ಲಿ, ಈ ಸಂಪ್ರದಾಯದ ಹುಟ್ಟಿಗೆ ಹಿನ್ನೆಲೆಯಾಗಿ ಬಂದ ಹಿಂದಿನವರ ವಿಚಾರ ಪರಂಪರೆ, ನಡುವೆ ಹುಟ್ಟಿಕೊಂಡ ತಾಕಲಾಟಗಳು ಕಾವ್ಯ ಸಂಬಂಧಿ ಹೊಸ ವಿಚಾರಗಳು, ಬುದ್ಧಿ ಭಾವಗಳ ನಡುವಿನ ಸಂಬಂಧಗಳು ಇತ್ಯಾದಿ ಕುರಿತ ಚರ್ಚೆಗಳು, ಈ ಕಾಲ ಘಟ್ಟದ ವಿಮರ್ಶಾ ನಿಲುವುಗಳನ್ನು ರೂಪಿಸಿದವು. ಕಾವ್ಯದ ಸತ್ವ, ಸ್ವರೂಪ ಹಾಗೂ ಪರಿಣಾಮಗಳ ಕುರಿತು ಹೊಸದಾಗಿ ಚಿಂತಿಸುವ ಅನಿವಾರ್ಯತೆ ಸೃಷ್ಟಿಯಾಯಿತು, ಕಾವ್ಯ ಮತ್ತು ಕವಿ ಸಂಬಂಧವನ್ನು ಮನಃಶಾಸ್ತ್ರದ ದೃಷ್ಟಿಯಿಂದಲೂ ನೋಡಬೇಕೆಂಬ ಅಭಿಪ್ರಾಯ ಪ್ರಚಲಿತವಾಯಿತು. ಗುಣಗ್ರಾಹಿಯಾದ ರಚನಾತ್ಮಕ ಕೃತಿ ವಿಮರ್ಶೆಯಾಗಬೇಕೆಂಬ ಅಭಿಪ್ರಾಯ ಪ್ರಚಲಿತವಾಯಿತು.

ಕಾವ್ಯ ಮತ್ತು ನಾಟಕಗಳ ಪುನರ್ ವಿಮರ್ಶೆಯಾಗಲು ಆರಂಭವಾಯಿತು. ನವಮಾರ್ಗ ಸಂಪ್ರದಾಯದ ಕಪಿಮುಷ್ಠಿಯಿಂದ ಬಿಡುಗಡೆಗೊಂಡು, ವಿಮರ್ಶೆ ಹೊಸದಾರಿಗಳತ್ತ ಸಾಗುವ ಪ್ರಯತ್ನ ಭರಾಟೆಯಿಂದ ನಡೆದದ್ದೆಂದರೆ ಇಂಗ್ಲೆಂಡಿನಲ್ಲಿ

೧೯ನೇ ಶ.ದ ಆದಿಯಲ್ಲಿ ವರ್ಡ್ಸ್‌ವರ್ತ್ ಮತ್ತು ಕೋಲ್ರಿಜ್ ಕವನ ಸಂಗ್ರಹಗಳ ಪ್ರಕಟನೆಯೊಂದಿಗೆ ರೊಮ್ಯಾಂಟಿಕ್ ಕಾವ್ಯಪಂಥ ಆರಂಭವಾಯಿತು ಎಂದು ಹೇಳಿ, ಅದಕ್ಕೆ ಹಿನ್ನೆಲೆಯಾಗಿದ್ದ ಕಾವ್ಯ ಪಂಥದ ಹಿಂದಿನ ಪ್ರೇರಣೆಗಳ ಸ್ವರೂಪ, ವ್ಯಾಪ್ತಿ ಹಾಗೂ ಪರಿಣಾಮಗಳನ್ನು ವಿವರಿಸುತ್ತಾರೆ: ರೊಮ್ಯಾಂಟಿಕ್ ಪರಂಪರೆಯೆಂದು ಹೆಸರಾದ ಹೊಸದೊಂದು ಕಾವ್ಯ ಪಂಥದ ಹುಟ್ಟು, ಬೆಳವಣಿಗೆ, ಪ್ರಭಾವ, ಪರಿಣಾಮಗಳನ್ನು ರೀತಿ ವಿಧಾನಗಳನ್ನು ಅವುಗಳ ಮೂಲಕ ವ್ಯಕ್ತವಾಗುತ್ತಿದ್ದ ಒಂದು ವಿಶಿಷ್ಟ ಜೀವನ ದರ್ಶನವನ್ನೂ ವಿವರಿಸುತ್ತಾರೆ. ಈ ಪಂಥದ ಮುಖ್ಯ ಕವಿಗಳಾದ ಬ್ಲೇಕ್, ವರ್ಡ್ಸ್‌ವರ್ತ್ ಕೋಲ್ರಿಜ್ ಷೆಲ್ಲಿ ಕೀಟ್ಸ್ ಮುಂತಾದವರು ಕವಿಯ ಕಲ್ಪನಾ ಸಾಮರ್ಥ್ಯಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದರು. ಇದಿಲ್ಲದೆ ಕಾವ್ಯ ನಿರ್ಮಿತಿ ಸಾಧ್ಯವೇ ಇಲ್ಲ ಎಂದೂ ಘೋಷಿಸಿದರು. ಆದರೆ ಹಿಂದಿನವರಾದ ವಿಮರ್ಶಕರು, ಚಿಂತಕರು ಕಲ್ಪನೆಯ ಉಲ್ಲೇಖ ಮಾಡಿದ್ದರೂ ಕಾವ್ಯ ನಿರ್ಮಿತಿಯಲ್ಲಿ ಅದಕ್ಕೆ ಆದ್ಯತೆ ನೀಡಿರಲಿಲ್ಲ, ಬದಲಾಗಿ ವಿವೇಚನೆಗೆ ಹೆಚ್ಚಿನ ಮಹತ್ವ ನೀಡಿದ್ದರು. ಕಲ್ಪನೆಗೆ ಮಹತ್ವಕೊಟ್ಟವರಿಗೆ ಜೀವನದ ನಿಗೂಢ ಸತ್ವವನ್ನು ಒಳಹೊಕ್ಕು ಶೋಧಿಸಬೇಕೆಂಬ ಆಕರ್ಷಣೆಯೇ ಪ್ರಬಲವಾದ ಪ್ರಚೋದನೆಯಾಗಿದ್ದರಿಂದ, ಕಲ್ಪನೆಯನ್ನು ಶೋಧಕ್ಕೊಂದು ಸಾಧನವಾಗಿ ಬಳಸಿಕೊಂಡರು. ಆದ್ದರಿಂದ ಕಾವ್ಯ ನಿರ್ಮಿತಿಗೆ ಕಲ್ಪನಾ ಸಾಮರ್ಥ್ಯವೇ ಮೂಲಾಧಾರವಾಯಿತೆಂಬುದು ಲೇಖಕರ ಸಮರ್ಥನೆಯಾಗಿದೆ

ಐತಿಹಾಸಿಕವಾಗಿ ಮುಖ್ಯವೆನಿಸಿದ ಈ ಕಾವ್ಯ ಪಂಥದ ಅಂತರ್ಗತ ಮುಖ್ಯ ಆಶಯಗಳನ್ನು ಲೇಖಕರು ಹೀಗೆ ಸ್ಪಷ್ಟಪಡಿಸುತ್ತಾರೆ. "ದೃಶ್ಯ ಪ್ರಪಂಚದ ಹಿಂದಿನ ಅದೃಶ್ಯ ಶಕ್ತಿಗಳನ್ನು ಮನುಷ್ಯನ ಮನಸ್ಸು ಗ್ರಹಿಸಬೇಕಾದದ್ದು ದೃಶ್ಯ ಪ್ರಪಂಚದಲ್ಲಿಯ ಆಗು ಹೋಗುಗಳ ಮೂಲಕವೇ. ಯಾವ ಕವಿಯಾದರೂ ತನ್ನ ಇಂದ್ರಿಯಗಳ ಮೂಲಕವೇ ವ್ಯವಹರಿಸಬೇಕು. ಇಂದ್ರಿಯಗಳ ಮೂಲಕ ಬಂದ ಅನುಭವಗಳು ರೊಮ್ಯಾಂಟಿಕ್ ಕವಿಗಳನ್ನು ಇಂದ್ರಿಯಾತೀತದ ಕಡೆಗೆ ಸೆಳೆದವು. ಅದರ ಅದ್ಭುತಕ್ಕೆ ಅವರ ಅಂತರಂಗ ಮಣಿಯಿತು. ಇದು ಸಾಧ್ಯವಾದದ್ದು ಅವರಲ್ಲಿಯ ಕಲ್ಪನಾಶಕ್ತಿಯ ಮೂಲಕವೇ ಎಂಬುದು ಅವರ ದೃಢ ನಂಬಿಕೆಯಾಯಿತು. ಆದರೆ ಆ ಸತ್ವವನ್ನು ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ಕಂಡರು. ಬ್ಲೇಕನು ಅದನ್ನು ಕಲ್ಪನಾಶಕ್ತಿ ಒಳಗಣ್ಣಿನೆದುರು ನಿಲ್ಲಿಸುವ ದರ್ಶನಗಳಲ್ಲಿ ಕಂಡರೆ, ವರ್ಡ್ಸ್‌ವರ್ತ್ ಅದನ್ನು ನಿಸರ್ಗದ ಹಾಗೂ ಮಾನವ ಜೀವನದ ಸಹಜ ಆವಿಷ್ಕಾರಗಳಲ್ಲಿ ಕಂಡ ಕೋಲ್ರಿಜನಿಗೆ (ಕಾವ್ಯದಲ್ಲಿ ಕೆಲಸ ಮಾಡುವ) ಕಲ್ಪನಾಶಕ್ತಿಯ ಕಾರ್ಯ ಸೃಷ್ಟಿಕರ್ತನ ಕಾರ್ಯದ ಪುನರಾವರ್ತನೆಯಾಗಿ ಕಂಡಿತು. ಷೆಲ್ಲಿಗೆ ಪ್ರೀತಿಯ ಮೂಲಕ, ಕೀಟ್ಸನಿಗೆ ಸೌಂದರ್ಯಾನು ಭೂತಿಯ ಮೂಲಕ ಪ್ರಕೃತಿ ಸತ್ವದ ಅತ್ಯಂತಿಕ

ದರ್ಶನವನ್ನು ಪಡೆಯುವಂತಾಯಿತು. ಅಂಥದ್ದನ್ನು ಪಡೆಯ ಬಲ್ಲ ಸಮರ್ಥ ಕಲ್ಪನಾಶಕ್ತಿಗಳು ಜೊತೆಗೆ ತಮ್ಮ ಅನುಭವವನ್ನು ತೀವ್ರವಾಗಿ ಗ್ರಹಿಸುವ ಸಂವೇದನಾಶೀಲತೆಯೂ ಅವರದಾಗಿತ್ತು ಎನ್ನುವುದಾಗಲಿ, ಅದನ್ನೆಲ್ಲ ವ್ಯಕ್ತ ಪಡಿಸುವುದಕ್ಕೆ ಅಗತ್ಯವಾದ ಭಾಷಾ ಪ್ರಭುತ್ವ ಅವರದಾಗಿತ್ತು ಎನ್ನುವುದನ್ನಾಗಲೀ ಬೇರೆಯಾಗಿ ಹೇಳಬೇಕಿಲ್ಲ" ಎನ್ನುವುದರ ಮೂಲಕ ಈ ಪಂಥದ ಬಗ್ಗೆ ಲೇಖಕ ತಮಗಿದ್ದ ನಿಚ್ಚಳವಾದ ಗ್ರಹಿಕೆಯನ್ನು ವ್ಯಕ್ತಪಡಿಸುತ್ತಾರೆ.

ವಿಮರ್ಶೆಯ ದೃಷ್ಟಿಯಿಂದ ರೊಮ್ಯಾಂಟಿಕ್ ಯುಗದ ಪ್ರಾರಂಭವಾದದ್ದು (೧೭೭೦-೧೮೫೦) ವರ್ಡ್ಸ್‌ವರ್ತ್‌ನಿಂದಲೇ ಎನ್ನುವುದು ಲೇಖಕರ ಅಭಿಪ್ರಾಯ. ವರ್ಡ್ಸ್‌ವರ್ತ್ ಕೋಲ್ರಿಜ್‌ನ ಕವನ ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ರೊಮ್ಯಾಂಟಿಕ್ ಯುಗದ ವಿಮರ್ಶೆಯ ನಿಲುವುಗಳು ಕಾಣಿಸುತ್ತವೆ, ಕವಿತೆಗಳ ಮೂಲಕವಾಗಿಯೇ ಕಾವ್ಯದ ಭಾಷೆ, ಶೈಲಿಯ ಬಗ್ಗೆ ಅನೇಕ ವಿಚಾರಗಳನ್ನು ಮಂಡಿಸುತ್ತಾನೆ, ವೃತ್ತ ಬಂಧಗಳ ಸ್ಥಾನ, ಅಗತ್ಯ ಹಾಗೂ ಉಪಯುಕ್ತತೆ ಕುರಿತು ವಿಚಾರಗಳನ್ನು ವಿಶದಪಡಿಸುತ್ತಾನೆ, ಕಾವ್ಯದ ಉಗಮ, ಅದರ ರಚನೆಯ ಪ್ರಕ್ರಿಯೆ, ಅದರಿಂದುಂಟಾಗುವ ಆನಂದಾನುಭವಕ್ಕೆ ಕಾರಣಗಳು, ಕಾವ್ಯವನ್ನು ಓದುಗ ಗ್ರಹಿಸಬೇಕಾದ ಕ್ರಮ, ಕಾವ್ಯ ಭಾಷೆ ಎಂಬ ಕೃತಕ ಶೈಲಿ ಬೆಳೆದು ನಿಂತ ಬಗೆ ಹೇಗೆ?- ಎಂಬುದನ್ನೆಲ್ಲ ವಿಶದವಾಗಿ ಚರ್ಚಿಸಿದ್ದಾನೆ -ಎಂದು ಲೇಖಕರು ಕಾವ್ಯ ಕರ್ಮದ ಎಲ್ಲ ಆಯಾಮಗಳನ್ನು ಅತ್ಯಂತ ಸರಳವಾಗಿ, ಸುಲಭ ಗ್ರಹಿಕೆಗೆ ಎಟುಕುವಂತೆ ವಿವರಿಸುತ್ತಾರೆ. ಈ ಎಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಲೇಖಕರು ವಿವರಣೆಯನ್ನು ನೀಡುತ್ತಾ ಹೋಗಿದ್ದಾರೆ.

ಸೃಜನಶೀಲ ಕಲ್ಪನಾಶಕ್ತಿಗೇ ಎಲ್ಲ ರೊಮ್ಯಾಂಟಿಕ ಪಂಥೀಯರ ಪ್ರಾಮುಖ್ಯತೆ ಸಂದಿದ್ದರೂ ಕೋಲ್ರಿಜ್ ಕಲ್ಪನಾಶಕ್ತಿಯ ತತ್ವವನ್ನು ದಾರ್ಶನಿಕ ಪರಿಭಾಷೆಯಲ್ಲಿ ವಿವರಿಸುವುದರಿಂದ ಅದು ಸುಲಭ ಗ್ರಾಹ್ಯವಲ್ಲ ಎನ್ನುವ ಲೇಖಕರು, ಆತನ ವ್ಯಕ್ತಿತ್ವದ ಗ್ರಹಿಕೆಯ ಮೂಲಕವೇ ಆತನ ಕಾರ್ಯವನ್ನು ಗಮನಿಸಬೇಕು ಎನ್ನುತ್ತಾರೆ. ಕಾವ್ಯ ರಚನಾ ಸಾಮರ್ಥ್ಯ ಕೋಲ್ರಿಜ್‌ನಲ್ಲಿ ಅಷ್ಟಾಗಿ ಇರಲಿಲ್ಲವಾದರೂ ಕಾವ್ಯದ ಬಗೆಗಿನ ಗಾಢ ಆಸಕ್ತಿಯೇ, ಕಾವ್ಯ ವಿಮರ್ಶಾ ಪ್ರಪಂಚವನ್ನು ಶ್ರೀಮಂತವಾಗಿಸಿತು ಎನ್ನುವುದು ಲೇಖಕರ ಅಭಿಪ್ರಾಯ. ಯಾಕೆಂದರೆ ಅವನ 'ಬಯೋಗ್ರಾಫಿಯಾ ಲಿಟರೇರಿಯಾ' ಎಂಬ ವಿಖ್ಯಾತ ಗ್ರಂಥದಲ್ಲಿ ಕಾವ್ಯಸಂಬಂಧವಾದ ಅತ್ಯಂತ ಮೌಲಿಕವಾದ ತಾತ್ವಿಕ ಚಿಂತನೆಗಳು ಹೇರಳವಾಗಿ ಲಭ್ಯವಾಗುತ್ತದೆ: ಆ ಎಲ್ಲ ಪ್ರತಿಪಾದಿತ ತತ್ವಗಳನ್ನು ಲೇಖಕರು ಅತ್ಯಂತ ವ್ಯವಸ್ಥಿತವಾಗಿ ಸಂಗ್ರಹಿಸಿ ಕೊಟ್ಟಿರುವುದೇ ಅಲ್ಲದೆ ಅಲ್ಲಲ್ಲಿ ತಮ್ಮ ಅಭಿಪ್ರಾಯಗಳನ್ನೂ ಸೂಚಿಸುತ್ತಾರೆ.

ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಜ್‌ರ ಕಾವ್ಯ ತತ್ವ ಚಿಂತನೆಗಳು ಅವರ ಪ್ರಸ್ತಾವನೆಗಳಲ್ಲಿ ಮೂಡಿ ಬಂದಿದ್ದರೆ, ಷೆಲ್ಲಿಯನ್ನು ಕುರಿತ ವಿಮರ್ಶೆಯ ಭಾಗದಲ್ಲಿ ರೊಮ್ಯಾಂಟಿಕ್ ಕಾವ್ಯ ಪಂಥದ ಕೆಲವು ಮುಖ್ಯ ಅಂಶಗಳನ್ನು ಪ್ರಸ್ತಾಪಿಸಿ, ಕಾವ್ಯ ಸಮರ್ಥನೆಗೆ ಮತ್ತಷ್ಟು ಹೇಳಬೇಕಾದ ಅಗತ್ಯ ಇರಲಿಲ್ಲವಾದರೂ, ಕಾವ್ಯದ ಅಗತ್ಯ, ಉಪಯುಕ್ತತೆಗಳನ್ನು ಪ್ರಶ್ನಿಸುವ ಧೋರಣೆ ಅಲ್ಲಲ್ಲಿ ಕೇಳಿ ಬರುತ್ತಿದ್ದುದರಿಂದ ಷೆಲ್ಲಿಗೆ ಕಾವ್ಯ ಸಮರ್ಥನೆ ಮಾಡಿಕೊಳ್ಳಬೇಕಾದ ಅಗತ್ಯ ಅನುಭವಕ್ಕೆ ಬಂತು. ಕಾವ್ಯ ವಿರೋಧಿ ವಿಚಾರಗಳನ್ನು ಹತ್ತಿಕ್ಕಲು ಷೆಲ್ಲಿ ಮುಂದಾದ ಸಂಗತಿಯನ್ನು ಅವನು ಸಮರ್ಥಿದಕೊಳ್ಳುತ್ತಿದ್ದ ರೀತಿಯನ್ನು ಲೇಖಕರು ವಿವರಿಸಲು ಮುಂದಾಗಿದ್ದಾರೆ. ಅವರು ಹೇಳುವಂತೆ ಷೆಲ್ಲಿಗೆ ಪ್ಯೂರಿಟನ್ನರ ವಿರೋಧಕ್ಕೆ ಇದಿರಾಗಿಯೂ ಮತ್ತು ಬುದ್ಧಿಪ್ರಧಾನವಾದ, ವೈಜ್ಞಾನಿಕವೆಂದು ಕರೆದುಕೊಳ್ಳಲಾಗುತ್ತಿದ್ದ ಕೆಲವೊಂದು ಪ್ರವೃತ್ತಿಗಳಿಗೂ ಇದಿರಾಗಿ ಕಾವ್ಯ ಸಮರ್ಥನೆ ಮಾಡಿಕೊಳ್ಳಬೇಕಾದ್ದು ಅವನಿಗೆ ಅನಿವಾರ್ಯವಾಯಿತು. ವಿಶೇಷವಾಗಿ ಕಾವ್ಯದ ಸತ್ವ, ಸಾಮರ್ಥ್ಯ ಪ್ರಯೋಜನಗಳನ್ನು ಕುರಿತಂತೆ ಭಾವೋಜ್ವಲವಾದ ರೀತಿಯಲ್ಲಿ ತನ್ನ ವಿಚಾರಗಳನ್ನು ಮಂಡಿಸುತ್ತಾನೆ ಎಂದಿದ್ದಾರೆ. ಅವನ ಕಾವ್ಯ ಸಮರ್ಥನೆಯ ರೀತಿಯನ್ನು ಅವನದೇ ಮಾತುಗಳಲ್ಲಿ ಸಮಗ್ರತೆಯೊಂದಿಗೆ ನೀಡಿದ ವಿವರಣೆಯನ್ನು ಈ ರೀತಿ ದಾಖಲಿಸಿದ್ದಾರೆ. "ಕಾವ್ಯಶಕ್ತಿ ವಿಚಾರಶಕ್ತಿಯಂತಲ್ಲ" ನಮಗೆ ಬೇಕಾದಾಗ ಬಳಸಿ ಬೇಡವಾದಾಗ ಅದನ್ನು ಬದಿಗಿರಿಸುವಂಥದಲ್ಲ. 'ನಾನೀಗ ಕಾವ್ಯರಚನೆ ಮಾಡುತ್ತೇನೆಂದು 'ಯಾರೂ ಹೇಳಲಾರರು,' ಅತ್ಯಂತ ಶ್ರೇಷ್ಠ ಕವಿಕೂಡ ಹಾಗೆ ಹೇಳಲಾರ. ಕಾವ್ಯ ನಿರ್ಮಿತಿಯಲ್ಲಿ ತೊಡಗಿರುವ ಮನಸ್ಸು ಆರಿಹೋಗುತ್ತಿರುವ ಕೆಂಡದಂತೆ ಇರುತ್ತದೆ. ಯಾವುದೋ ಒಂದು ಅದೃಷ್ಟ ಪ್ರಭಾವ, ಗೊತ್ತುಗುರಿಯಿಲ್ಲದ ಗಾಳಿಯಂತೆ ಬೀಸಿ ಬಂದು ಅದು ಕ್ಷಣಕಾಲ ಪ್ರಜ್ವಲಿಸುವಂತೆ ಮಾಡುತ್ತದೆ. ಹೂವಿನ ಬಣ್ಣ ಒಳಗಿನಿಂದಲೇ ಹುಟ್ಟಿ ಬರುವಂತೆ ಈ ಶಕ್ತಿಯಾದರೂ ಅವತರಿಸುವುದು ಕವಿಯ ಅಂತರಂಗದಿಂದಲೇ. ಅದರ ಆಗಮನ ನಿರ್ಗಮನಗಳ ವಿಷಯದಲ್ಲಿ ಒಂದಿಷ್ಟು ಮುನ್ಸೂಚನೆ ಸಿಕ್ಕುವುದಿಲ್ಲ, ಅಂಥದರ ಪ್ರಭಾವ ಬಹುಕಾಲ ಉಳಿಯಬಹುದಾಗಿದ್ದರೆ ಎಂಥ ಪರಮೋತ್ಕೃಷ್ಟವಾದ ಫಲಿತಾಂಶ ಅದರಿಂದ ದೊರಕಬಹುದಾಗಿತ್ತು ಎನ್ನುವುದನ್ನು ಹೇಳಲಾಗುವುದಿಲ್ಲ, ಆದರೆ ಕಾವ್ಯರಚನೆ ಆರಂಭವಾಗುತ್ತಿದ್ದಂತೆಯೇ ಸ್ಫೂರ್ತಿ ಇಳಿಮುಖವಾಗತೊಡಗುತ್ತದೆ. ಪ್ರಪಂಚಕ್ಕೆ ಲಭ್ಯವಾಗಿರುವ ಮಹೋಜ್ವಲವಾದ ಕಾವ್ಯ ಕೂಡಾ ಅದನ್ನು ಕವಿ ಬರೆದ ಕವಿ ಮೂಲದಲ್ಲಿ ಅನುಭವಿಸಿದ ಆವೇಶದ ದುರ್ಬಲ ಛಾಯೆ ಮಾತ್ರ ಎನ್ನುವ ಮಾತನ್ನು ಪ್ರಸ್ತಾಪಿಸಿ. ನಿಜವಾದ ಕಾವ್ಯದ ಮೂಲ ಇರುವುದು ಅಂತರಂಗದಲ್ಲಿ ಮೂಡಿದ ಕ್ಷಣಗಳಲ್ಲಿ ಮಾತ್ರ ಎಂಬುದನ್ನು ಮನವರಿಕೆ ಮಾಡುತ್ತಾರೆ. ಹೀಗಾಗಿ

ಕವಿ ಷೆಲ್ಲಿ ಕಾವ್ಯದ ಸ್ವರೂಪ, ಕಾವ್ಯದ ಸತ್ವ ಅದರ ಕಾರ್ಯ ವಿಧಾನ, ಕಾವ್ಯ ಪ್ರಯೋಜನ, ಕಾವ್ಯದ ಭಾಷೆ ಕಾವ್ಯದ ನೈತಿಕ ಪ್ರಭಾವ ಇತ್ಯಾದಿಗಳನ್ನು ವಿವರಿಸಿರುವ ಪರಿಯನ್ನು ತನ್ಮೂಲಕದ ಅವನ ಕಾವ್ಯ ಸಂಬಂಧಿ ತಾತ್ವಿಕ ನಿಲುವುಗಳನ್ನು ಅತ್ಯಂತ ಸಮರ್ಥವಾಗಿ ಪರಿಚಯಿಸಿದ್ದಾರೆ.

ಇನಾಂದಾರರ ಪಾಶ್ಚಾತ್ಯ ವಿಮರ್ಶೆಯ ಅಥವಾ ಪಾಶ್ಚಾತ್ಯ ಕಾವ್ಯ ಮೀಮಾಂಸೆ ಸರಣಿಯಲ್ಲಿ ಪಾಶ್ಚಾತ್ಯಾ ವಿಮರ್ಶೆಯ ಆಧುನಿಕಯುಗ ಎನ್ನುವುದು ಕೊನೆಯ ಸಂಪುಟವೂ ಹೌದು ಮತ್ತು ಅತಿ ಮುಖ್ಯವೂ ಹೌದು. ಇದರಲ್ಲಿ ಎಂಟು ಭಾಗಗಳಿದ್ದು ಮ್ಯಾಥ್ಯೂ ಆರ್ನಾಲ್ಡ್, ಬೆನೆಡಿಟ್ಟೋ, ಐ.ಎ. ರಿಚರ್ಡ್ಸ್.ಟಿ.ಎಸ್ ಎಲಿಯಟ್ ಮೊದಲಾದವರ ವಿಮರ್ಶಾ ನಿಲುವುಗಳನ್ನು ಒಬ್ಬೊಬ್ಬರೂ ತಮ್ಮ ವಿಮರ್ಶೆಯಲ್ಲಿ ಒತ್ತು ಕೊಟ್ಟ ವಿಚಾರಗಳನ್ನು ಕುರಿತು ಚರ್ಚಿಸುತ್ತಾರೆ.

ರೊಮ್ಯಾಂಟಿಕ್ ಮನೋಧರ್ಮ ವ್ಯಕ್ತಿ ನಿಷ್ಠವಾಗಿದ್ದುದೇ ಅಲ್ಲದೆ ಭಾವೋತ್ಕರ್ಷಕ್ಕೇ ಹೆಚ್ಚಿನ ಮಾನ್ಯತೆಯಿದ್ದುದೇ ಅಲ್ಲದೆ ಅದನ್ನೇ ಅತ್ಯಂತ ಮಹತ್ವದ್ದೆಂದು ಭಾವಿಸಿದ್ದ ಹಿಂದಿನ ಶತಮಾನದ ಗಟ್ಟಿ ನಂಬಿಕೆಯಾಗಿದ್ದಂತಹ ಪರಿಸರದಲ್ಲಿ, ಕಾವ್ಯ ನಿರ್ಮಿತಿಯಲ್ಲಿ ವ್ಯಕ್ತಿಗತವಾದ ಭಾವೋತ್ಕರ್ಷ ಮತ್ತು ಕೃತಿನಿಷ್ಠನಾದ ವೈಯಕ್ತಿಕ ಪ್ರತಿಕ್ರಿಯೆಗಳೆರಡೂ ಮುಖಾಮುಖಿಯಾಗಿ ವಿಮರ್ಶೆಯ ಮುಂದಿನ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಮಹತ್ವದ ಸಂಗತಿಗಳಾದುದನ್ನು ಲೇಖಕರು ಪ್ರಸ್ತಾಪಿಸುತ್ತಾರೆ: ಲೇಖಕರು ರೊಮ್ಯಾಂಟಿಕ್ ನವಜಾಗೃತಿಯ ಪ್ರಭಾವಕ್ಕೆ ಒಳಗಾದ ಎಲ್ಲ ಕಡೆಯಲ್ಲಿಯೂ ವಿಮರ್ಶೆಯ ಮಾರ್ಗ ಸಂಪ್ರದಾಯದಿಂದ ದೂರ ಸರಿಯುತ್ತಿರುವ ಪ್ರವೃತ್ತಿಯನ್ನೂ ಹೊಸ ವಿಮರ್ಶಾ ನಿಲುವುಗಳ ಅಗತ್ಯವನ್ನು ಮುಂದಿನ ಕವಿ, ವಿಮರ್ಶಕರು ಗುರುತಿಸಿದ್ದನ್ನು ಗಮನಿಸುತ್ತಾರೆ.

ವಿಮರ್ಶೆಯ ಪ್ರಸ್ತಾಪವಾದಾಗಲೆಲ್ಲ ಅದರಲ್ಲಿಯೂ ಆಧುನಿಕಯುಗದ ಕಾಲಘಟ್ಟದಲ್ಲಿ ಮ್ಯಾಥ್ಯೂ ಆರ್ನಾಲ್ಡನನ್ನು ನೆನಪಿಸಿಕೊಳ್ಳದೆ ಇರುವುದು ಸಾಧ್ಯವೇ ಇಲ್ಲ ಎನ್ನುವ ಅಭಿಪ್ರಾಯದ ಹಿನ್ನೆಲೆಯಲ್ಲಿ ಅವನನ್ನು ವಿಮರ್ಶಾಕ್ಷೇತ್ರದ ನಕ್ಷತ್ರವೆಂದು ಲೇಖಕರು ಬಣ್ಣಿಸುತ್ತಾರೆ ಜೊತೆಗೆ ಅವನ ಪ್ರಭಾವದಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲವೆಂಬ ನಿಲುವನ್ನು ವ್ಯಕ್ತಿ ಪಡಿಸುತ್ತಾರೆ. ಆರ್ನಾಲ್ಡ್‌ನ ವಿಮರ್ಶಾ ಸಂಬಂಧವಾದ ವಿಚಾರಗಳನ್ನು ವಿಸ್ತೃತವಾಗಿ ಚರ್ಚಿಸುತ್ತಾರೆ. ಆರ್ನಾಲ್ಡ್ ವಿಮರ್ಶೆಯನ್ನು ಸಾಹಿತ್ಯ ಕ್ಷೇತ್ರಕ್ಕಷ್ಟೇ ಸೀಮಿತಗೊಳಿಸದೆ ಸಮಾಜದ ಕಡೆಗೂ ವಿಸ್ತರಿಸಿದ್ದನ್ನು ಅವನ 'ಕಲ್ಚರ್ ಅಂಡ್ ಅನಾರ್ಕಿ' ಎಂಬ ಕೃತಿಯಲ್ಲಿನ ವಿಷಯಗಳ ಮೂಲಕ ಓದುಗರ ಗಮನ ಹರಿಸುತ್ತಾರೆ ಆರ್ನಾಲ್ಡ್‌ನನ್ನು ಅವನ ಸಾಹಿತ್ಯ ಸಮಾಜಗಳ ನಡುವಿನ ಸಂಬಂಧಗಳ ಕುರಿತಾದ ಚಿಂತನೆಗಳನ್ನು ಗಮನಿಸುವ

ಲೇಖಕರು ಸಾಹಿತ್ಯದ ಅಭಿವೃದ್ಧಿಗೆ ಶ್ರೇಷ್ಠ ಕೃತಿಗಳ ನಿರ್ಮಾಣಕ್ಕೆ ಅಗತ್ಯವಾದ ಸುಸಂಸ್ಕೃತವಾದ ಸಾಮಾಜಿಕ ಜೀವನವನ್ನು ನಿರ್ಮಿಸುವ ಹೊಣೆಗಾರಿಕೆಯನ್ನು ಸಾಹಿತ್ಯ ವಿಮರ್ಶಕನಿಗೂ ವಿಸ್ತರಿಸಿರುವುದನ್ನು ಪ್ರಸ್ತಾಪಿಸುತ್ತಾರೆ. "ಜೀವನವನ್ನೇ ಅರ್ಥವಿಸಿ, ಮನಸ್ಸಮಾಧಾನವನ್ನು ತಂದು ಕೊಟ್ಟು ನಮ್ಮನ್ನು ನಿಲ್ಲಿಸಿ ನಡೆಸಬಲ್ಲ ಸಾಮರ್ಥ್ಯ ಕಾವ್ಯದ್ದಾಗಿರುವುದರಿಂದ ಅಷ್ಟಕ್ಕಾಗಿ ನಾವು ಕಾವ್ಯವನ್ನೇ ಮೊರೆಹೋಗ ಬೇಕಾಗುತ್ತದೆ ಎನ್ನುವುದನ್ನು ಮನುಷ್ಯಕುಲ ಅಧಿಕವಾಗಿ ಕಂಡುಕೊಳ್ಳುತ್ತದೆ, ಕಾವ್ಯವಿಲ್ಲದೆ ವಿಜ್ಞಾನ ಅಪೂರ್ಣ; ಇಂದು ನಾವು ಧರ್ಮ, ತತ್ವಜ್ಞಾನ ಎಂದುಕೊಳ್ಳುವುದರಲ್ಲಿಯ ಬಹುಭಾಗವನ್ನು ಕಾವ್ಯ ಆಕ್ರಮಿಸುತ್ತದೆ ಎನ್ನುವ ಭವಿಷ್ಯವಾಣಿಯನ್ನು ಮತ್ತು "ಕೃತಿಕಾರನಾದರೂ ಆಯಾಯಾ ಕಾಲದ ಸಮಾಜ ಜೀವಿಯೇ ಆಗಿರುವುದರಿಂದ ಅದರ ವಿಚಾರ ಧೋರಣೆಗಳು ಆತನ ನಿರ್ಮಾಣಕಾರ್ಯವನ್ನು ಪ್ರಭಾವಿಸುವ ಅಂಶಗಳಾಗಿರುತ್ತದೆ. ಸಮಕಾಲೀನ ಜೀವನ ಮೌಲ್ಯಗಳನ್ನು ಒಬ್ಬ ಲೇಖಕ ಪ್ರತಿಭಟಿಸಿದಾಗಲೂ ತನ್ನ ಪ್ರತಿಭಟದೆಯ ಮೂಲಕವೇ ಅಂದಿಂದಿನ ಸಾಂಸ್ಕೃತಿಕ ಸಂದರ್ಭಕ್ಕೆ ಸೇರಿದವನಾಗಿರುತ್ತಾನೆ, ಹೀಗೆ ಅನಿವಾರ್ಯವಾಗಿ ಒಂದು ಕೃತಿಗೂ ಮತ್ತು ಅದಕ್ಕೆ ಪ್ರೇರಕವಾದ ಸಾಂಸ್ಕೃತಿಕ ಸಂಧರ್ಭಕ್ಕೂ ನಿಕಟವಾದ ಸಂಬಂಧ ಏರ್ಪಟ್ಟಿರುತ್ತದೆ" ಎನ್ನುವ ಆರ್ನಾಲ್ಡನ ಮಾತುಗಳ ಮೂಲಕ ಅವನಿಗೆ ಸಾಹಿತ್ಯ ಸಮಾಜ ಸಂಸ್ಕೃತಿಗಳ ಅಂತಸ್ಸಂಬಂಧ ಗಳ ಬಗೆಗಿದ್ದ ಕಾಳಜಿಯ ಮೇಲೆ ಬೆಳಕು ಚೆಲ್ಲುತ್ತಾರೆ.

ಕಲೆ, ಪ್ರಚಾರ ಮತ್ತು ನೀತಿ ಸಂಬಂಧದ ನೆಲೆಯಲ್ಲಿ ಕಾವ್ಯದ ಚರ್ಚೆಯನ್ನು ಮಾಡುತ್ತಾರೆ. ಕಲೆ ಮತ್ತು ಕಾವ್ಯದಲ್ಲಿ ನೀತಿ ಬೋಧೆ ಮುಖ್ಯವೊ ಅಥವಾ ಅವು ನೀಡುವ ಆನಂದಾನುಭೂತಿ ಮುಖ್ಯವೊ ಎನ್ನುವ ವಿಚಾರದಲ್ಲಿ ನಡೆದ ಚಿಂತನೆ, ಸಂವಾದಗಳನ್ನು ವಿವರಿಸುತ್ತಾರೆ. ೧೯ ನೇ ಶ.ದ ಉತ್ತರಾರ್ಧದಲ್ಲಿ ಕಾದಂಬರಿ ಸಾಹಿತ್ಯವೇ ಮುಖ್ಯ ಪ್ರಕಾರವಾಗಿದ್ದುದರಿಂದ ಈ ಪ್ರಕಾರದ ಹಿನ್ನೆಲೆಯೊಂದಿಗೇ ನೀತಿಬೋಧೆ ಆನಂದಾನುಭೂತಿಗಳಲ್ಲಿ ಯಾವುದು ಮುಖ್ಯ ಎನ್ನುವ ಚರ್ಚೆ ನಡೆಯಬೇಕಾಯಿತು. ಬೊದೆಲೇರ್, ಪೇಟರ್, ವೈಲ್ಡ್‌ರಂಥವರು 'ಕಲೆಗಾಗಿ ಕಲೆ' ಎನ್ನುವ ವಾದಕ್ಕೆ ಬದ್ಧರಾಗಿದ್ದರೆ ಕಾರ್ಲೈಲ್, ರಸ್ಕಿನ್‌ರಂಥವರು ನೀತಿಬೋಧೆಗೆ ಬದ್ಧರಾಗಿದ್ದರು ಇಂಗ್ಲೇಡ್, ಫ್ರಾನ್ಸ್, ರಷ್ಯಾಗಳಲ್ಲಿ ಕಾದಂಬರಿ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವಾಗಿದ್ದುದನ್ನು ಪ್ರಸ್ತಾಪಿಸುವ ಲೇಖಕರು ಸಾಮಾಜಿಕ ವಾಸ್ತವತೆ, ನೈತಿಕತೆ, ನಿಲುವುಗಳ ಹಿನ್ನೆಲೆಯಲ್ಲಿ ರಚಿತವಾದ ಕೆಲವು ಕಾದಂಬರಿಕಾರರ ವಿಚಾರಗಳನ್ನು ವಿವರಿಸುತ್ತಾರೆ. ಆರ್ನಾಲ್ಡ್, ರಸ್ಕಿನ್, ಟಾಲ್‌ಸ್ಟಾಯ್ ಮೊದಲಾದವರ ಅಭಿಪ್ರಾಯಗಳನ್ನು ವಿಶ್ಲೇಷಿಸುತ್ತಾರೆ. "ಕಲೆ ಎನ್ನುವುದು ಒಂದು ಸ್ವಯಂಪೂರ್ಣವಾದ ಸ್ವಾಯತ್ತ ಕ್ರಿಯಾಮಂಡಲವಲ್ಲ;

ಸಾಮಾಜಿಕ ವಿಕಾಸದ ಪ್ರಕ್ರಿಯೆಯನ್ನು ರೂಪಿಸುವುದರಲ್ಲಿ ಎಚ್ಚರ ಹೇಳುವ ಕೆಲಸವನ್ನು ಕಲೆ ಮಾಡಬೇಕಾಗುತ್ತದೆ ಎನ್ನುವುದು ಟಾಲ್‌ಸ್ಟಾಯನ ಅಭಿಪ್ರಾಯ ವನ್ನು, ಕಲೆ ನೀತಿಬೋಧಕವಾಗಿರಬೇಕು ಎಂಬ ಆರ್ನಾಲ್ಡ್‌ನ ಅಭಿಪ್ರಾಯವನ್ನು, ಕಲ್ಪನಾಶಕ್ತಿ ಸಾಹಚರ್ಯದೊಂದಿಗೆ ಕಲಾಕ್ರಿಯೆ ನಡೆಯುತ್ತದೆಂಬ ರಸ್ಕಿನ್ನನ ವಾದವನ್ನು – ಕುರಿತು ವಿಶ್ಲೇಷಣೆ ವಿವರಣೆಗೆ ತೊಡಗಿದ ನಂತರ, ಕಲೆಗಾಗಿ ಕಲೆ ಎನ್ನುವ ಮನೋಧರ್ಮ ಹೀಗೆ ನಿರ್ಮಿತಿಯನ್ನು ಪ್ರಭಾವಿಸಿದಂತೆ ವಿಮರ್ಶೆಯ ಉದ್ದೇಶ ವಿಧಾನಗಳನ್ನೂ ಪ್ರಭಾವಿಸಿತು ಎನ್ನುವ ಅಭಿಪ್ರಾಯವನ್ನು ತಳೆಯುತ್ತಾರೆ.

ಕಲೆಯನ್ನು ವೈಯಕ್ತಿಕ ದೃಷ್ಟಿಯ ಅಭಿವ್ಯಕ್ತಿ ಎಂದು ನಂಬಿದವರು ಕಲೆಗಾಗಿ ಕಲೆ ಎಂಬ ವಾದ ಪಕ್ಷಪಾತಿಗಳಾಗಿದ್ದ ಸೌಂದರ್ಯಾನುಭೂತಿಯನ್ನೇ ಕೇಂದ್ರವಾಗಿರಿಸಿ ಕೊಂಡಿದ್ದರೂ ವಾಸ್ತವಿಕವೊ ಅಥವಾ ಕಾಲ್ಪನಿಕವೊ, ಯಾವುದೇ ಅನುಭವ ಗಳಾಗಿರಲಿ, ಅವುಗಳನ್ನು ಅಭಿವ್ಯಕ್ತಿಸುವುದು ಕಲೆಯ ಕೆಲಸ ಎನ್ನುವ ಮಾತನ್ನು ಒಪ್ಪಿಕೊಂಡಿದ್ದರು. ಈ ಸಂಬಂಧವಾಗಿ ವರ್ಡ್ಸ್‌ವರ್ತ್‌ನ ಅಭಿವ್ಯಕ್ತಿ ರೀತಿ ಒಂದು ಮಾದರಿಯಾಗಿದ್ದುದನ್ನೂ ಮತ್ತು ಕ್ರೋಚೆ ಎಂಬ ಇಟಾಲಿಯನ್ ದಾರ್ಶನಿಕ, ವಿಮರ್ಶಕ ಪ್ರತಿಪಾದಿಸಿದ ಅಭಿವ್ಯಕ್ತಿವಾದ ಎಂಬ ಸಿದ್ಧಾಂತವನ್ನು ಲೇಖಕರು ಪರಿಚಯಿಸುತ್ತಾರೆ. ಅಲ್ಲದೆ ಕ್ರೋಚೆಯ ವಿಷಯವಾಗಿ ಹೇಳುವಾಗ ಅವನ ಅಭಿವ್ಯಕ್ತಿವಾದದ ನಿಲುವನ್ನು ಹೀಗೆ ವಿವರಿಸುತ್ತಾರೆ. ಕ್ರೋಚೆಯ ದೃಷ್ಟಿಯಲ್ಲಿ ಕಲೆ ಎಂದರೆ ಮನುಷ್ಯನ ಅಂತಃಪ್ರಜ್ಞೆಯ ಮೂಲಕ ಇಂದ್ರಿಯ ಸಂವೇದನೆಗಳನ್ನು ಸ್ಪಷ್ಟವಾಗಿಸಿಕೊಳ್ಳುವ ಅಂದರೆ ಅರ್ಥವಾಗಿಸಿಕೊಳ್ಳುವ, ಅಭಿವ್ಯಕ್ತಿಯನ್ನು ಸಾಧಿಸಿಕೊಳ್ಳುವ ಮಾನಸಿಕ ಕ್ರಿಯಾವಿಧಾನ ಎಂದು ಹೇಳಿದನಾದರೂ ಇದರ ಬಗ್ಗೆ ಎದ್ದ ಅನೇಕ ಆಕ್ಷೇಪಗಳನ್ನೂ, ಪ್ರಶ್ನೆಗಳನ್ನೂ ವಿವರಿಸಿದ್ದಾರೆ. ಬಾಹ್ಯದಲ್ಲಿ ನೋಡುವ ಸೌಂದರ್ಯ ಕಲಾವಿದನ ಆಂತರ್ಯದಲ್ಲಿ ಕಂಡ ಸೌಂದರ್ಯವೆಂದೇ ಹೇಗೆ ಹೇಳುವುದು, ಸೌಂದರ್ಯ ಸೃಷ್ಟಿಸುವವನ ಅನುಭವಿಸುವವನ ಭಾವನೆಗಳು ಒಂದೇ ರೀತಿ ಇರಲು ಹೇಗೆ ಸಾಧ್ಯ ಎಂಬಂತಹ ಹಲವಾರು ಪ್ರಶ್ನೆಗಳನ್ನು ವಿವೇಚಿಸುತ್ತಾರೆ ಜೊತೆಗೆ ವಿಮರ್ಶಾ ಕ್ಷೇತ್ರಕ್ಕೆ ಕ್ರೋಚೆಯ ಕೊಡುಗೆಯ ಮಹತ್ವವನ್ನು ಗುರುತಿಸುತ್ತಾರೆ. ಅವನ ವಿಮರ್ಶೆಯ ದೃಷ್ಟಿಯಲ್ಲಿನ ವಿಶಿಷ್ಟತೆಯನ್ನು ಎತ್ತಿ ತೋರಿಸುತ್ತಾರೆ. ಅವನ ವಿಮರ್ಶೆಯ ಮೂಲಭೂತ ಧೋರಣೆಯನ್ನು ಕಾವ್ಯ ನಿರ್ಮಿತಿಯ ಹಿಂದಿನ ಪ್ರೇರಣೆ ಯಾವುದೇ ಇದ್ದರೂ ಅದು ಪೂರ್ಣವಾದ ಸಮರ್ಪಕವಾದ ಅಭಿವ್ಯಕ್ತಿಯನ್ನು ಪಡೆಯಬೇಕೆನ್ನುವುದೇ ಮೂಲೋದ್ದೇಶ ವಾಗಿರುವುದರಿಂದ ಅಭಿವ್ಯಕ್ತಿಗೆ ಪರಂಪರೆಯಾಗಿ ಬೆಳೆದು ನಿಂತಿದ್ದ ರೂಪ ರಚನೆ ರೀತಿಗಳ ವಿಶಿಷ್ಟವಾದ ಬಗೆಗಳು ನಿರ್ಬಂಧಕಾರಿಯಾಗಬೇಕಿಲ್ಲ, ಆಗಕೂಡದು ಎನ್ನುವುದು- ಎನ್ನುವ ಮಾತುಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಭಾವಗೀತೆಯನ್ನು

ಶುದ್ಧಕಾವ್ಯವೆಂದು ಪರಿಗಣಿಸಿದ್ದರಿಂದ ಕಾವ್ಯದ ಬಗ್ಗೆ ಅವನು ಹೇಳಿದ ವಿವರಣೆಯನ್ನು ಲೇಖಕರು ಹೀಗೆ ವಿವರಿಸಿದ್ದಾರೆ ಕಾವ್ಯದಲ್ಲಿ, "ಭಾವನೆ ಪ್ರತಿಮೆಗಳಾಗಿ, ಪ್ರತಿಮೆಗಳ ಸಂಕೀರ್ಣವಾಗಿ ರೂಪಾಂತರ ಹೊಂದುತ್ತದೆ, ಅದರ ಮೂಲಕ ಚಿಂತನಕ್ಕೆ ಒಳಪಡುವುದರಿಂದ ತನ್ನಿಂದ ತಾನು ಬಿಡುಗಡೆಯಾಗಿ ಅದನ್ನು ಮೀರಿ ನಿಲ್ಲುವಂತಾಗಬೇಕು, ಆದ್ದರಿಂದ ಕಾವ್ಯವೆಂದರೆ ಭಾವನೆ ಅಲ್ಲ, ಪ್ರತಿಮೆಯೂ ಅಲ್ಲ; ಅವೆರಡರ ಸಂಕಲನವೂ ಅಲ್ಲ, ಭಾವನೆಯನ್ನು ಕುರಿತ ಚಿಂತನೆ ಅದು, ಶುದ್ಧ ಭಾವಗೀತೆ ಪ್ರಚೋದಕವಾದ ಅಂತಃ ಪ್ರಜ್ಞೆ ಇದೇ" ಭಾವಗೀತೆ ಎಂದರೆ ಭಾವನೆಯನ್ನು ಸುರಿಸಿ ಬರಿದಾಗಿಸುವ ವಿಧಾನವಲ್ಲ; ಅದು ಆಕ್ರಂದನವಲ್ಲ, ಶೋಕಾಲಾಪವಲ್ಲ. ಅದು ವಸ್ತು ನಿಷ್ಠವಾಗಿ ತನ್ನನ್ನು ತಾನೇ ರಂಗ ಸ್ಥಳದ ಮೇಲಿನ ಒಂದು ಪಾತ್ರವಾಗಿಸಿ ತನ್ನ ವಿಷಯವಾಗಿ ಹೇಳಿಕೊಳ್ಳುತ್ತಿರುವಂತೆ, ಕಾಣುವ ಬಗ್ಗೆ ಈ ಭಾವ ಸತ್ವವೇ ಮಹಾಕಾವ್ಯ ಮತ್ತು ನಾಟಕದಲ್ಲಿಯ ಕಾವ್ಯವನ್ನು ರೂಪಿಸುತ್ತದೆ. ಅವೆರಡೂ ಬೇರೆಯಾಗಿ ಕಾಣುವುದು ಬಾಹ್ಯ ಲಕ್ಷಣಗಳ ಮೂಲಕವೇ (ಹೊರತು ಅಂತಃ ಸತ್ವದ ದೃಷ್ಟಿಯಿಂದಲ್ಲ)" ಎಂದು ಕಡೆಯಲ್ಲಿ ಲೇಖಕರು ಕ್ರೋಚೆಯಿಂದ ವಿಮರ್ಶಾ ಕ್ಷೇತ್ರಕ್ಕೆ ಸಂದ ವಿಭಿನ್ನ ದೃಷ್ಟಿ, ಆದ ಪ್ರಭಾವದ ಸ್ವರೂಪವನ್ನು, ತಮ್ಮ ಈ ಕೆಳಗಿನ ಮಾತುಗಳಿಂದ ಸ್ಪಷ್ಟಪಡಿಸುತ್ತಾರೆ. "ವಿಮರ್ಶೆಯ ಕ್ಷೇತ್ರದಲ್ಲಿ ಆತನ ವಿಚಾರಗಳನ್ನು ಪೂರ್ತಿಯಾಗಿ ಒಪ್ಪದಿದ್ದರೂ ಕೇವಲ ರಚನೆ ಎಂಬ ದೃಷ್ಟಿಯಿಂದ, ಕೇವಲ ಭಾವ ಪ್ರಚೋದನೆಯ ದೃಷ್ಟಿಯಿಂದ, ಕೃತಿಯೊಂದನ್ನು ವಿಮರ್ಶಿಸಲಾಗುವುದಿಲ್ಲ; ಕಾವ್ಯದಲ್ಲಿಯ ಬೇರೆ ಅಂಶಗಳ ದೃಷ್ಟಿಯಿಂದಲೂ ಕೃತಿಯನ್ನು ನೋಡಬೇಕಾಗುತ್ತದೆ ಎಂಬ ಮನವರಿಕೆ ಇಂದು ಸರ್ವೇಸಾಮಾನ್ಯವಾಗಿ ಬೆಳೆದದ್ದು ಆತನ ಪ್ರಭಾವದ ಪರಿಣಾಮ" ಎಂಬುದನ್ನು ಗುರುತಿಸುತ್ತಾರೆ.

ಕಾವ್ಯದ ಭಾಷೆ ಮತ್ತು ಸಾಂಕೇತಿಕತೆ ಎಂಬ ಅಧ್ಯಾಯದಲ್ಲಿ ಕಾವ್ಯ ಭಾಷೆಯ ಬಗ್ಗೆ ಆಗಲೇ ಚಿಂತನೆ, ಚರ್ಚೆ ನಡೆದದ್ದು ಮತ್ತು ಕ್ರೋಚೆಯ 'ಅಭಿವ್ಯಕ್ತಿ'ವಾದ ಅದಕ್ಕೆ ಪೂರಕವೂ ಪೋಷಕವೂ ಆದದ್ದನ್ನು ವಿವರಿಸಿ ೨೦ ನೇ ಶ.ದಲ್ಲಿ ಕಾವ್ಯ ಭಾಷೆಯ ಸುಪ್ತ ಸಾಮರ್ಥ್ಯಗಳ ಬಗ್ಗೆ ನಡೆದ ಹೊಸ ಅನ್ವೇಷಣಾತ್ಮಕ ಚಿಂತನೆಗಳತ್ತ ನಮ್ಮ ಗಮನ ಸೆಳೆಯುತ್ತಾರೆ.

ಕಾವ್ಯದ ಭಾಷೆಯ ಸುಪ್ತ ಸಾಮರ್ಥ್ಯಗಳ ಬಗೆಗೆ ಕೋಲ್ರಿಜ್ ಅಲ್ಲದೆ ಅಮೆರಿಕಾ ಮತ್ತು ಫ್ರಾನ್ಸ್ ದೇಶಗಳಲ್ಲಿನ ಲೇಖಕರಲ್ಲಿಯೂ ಮೂಡಿದ ಜಿಜ್ಞಾಸೆ, ಶಬ್ದಗಳ ಸಾಂಕೇತಿಕ ಸಾಮರ್ಥ್ಯವನ್ನು ಆಧರಿಸಿದ ಒಂದು ಕಾವ್ಯ ಪಂಥದ ಉಗಮಕ್ಕೆ ಕಾರಣವಾಯಿತು ಎಂಬುದು ಲೇಖಕರ ಅಭಿಪ್ರಾಯ. ಈ ಅಭಿಪ್ರಾಯದ

ಹಿನ್ನೆಲೆಯಲ್ಲಿ ಕೋಲ್ರಿಜ್, ಕ್ರೋಚೆ, ಕೊಲಿಂಗ್‌ವುಡ್, ರಿಚರ್ಡ್ಸ್ ಸುಸಾನ್ ಲ್ಯಾಂಗರ್‌ರಂಥ ದಾರ್ಶನಿಕರ, ವಿಮರ್ಶಕರ, ವಿಚಾರಗಳನ್ನು ವಿವರಿಸುತ್ತಾರೆ, ಈ ಹೊಸ ಕಾವ್ಯ ಪಂಥದ ದಿಕ್ಕು ಧೋರಣೆಗಳನ್ನು ಅದರ ಬೆಳವಣಿಗೆಯನ್ನು ವಿಶ್ಲೇಷಣಾತ್ಮಕವಾಗಿ ವಿವರಿಸುತ್ತಾರೆ. ಕಡೆಯದಾದ ಎರಡು ಅಧ್ಯಾಯಗಳಲ್ಲಿ (ಭಾಗಗಳಲ್ಲಿ) ಐ.ಎ. ರಿಚರ್ಡ್ಸ್ ಮತ್ತು ಟಿ.ಎಸ್ ಎಲಿಯಟ್‌ರ ವಿಮರ್ಶಾ ನಿಲುವುಗಳನ್ನು ವಿಸ್ತೃತವಾಗಿ ಚರ್ಚಿಸುತ್ತಾರೆ.

ಇಲ್ಲಿಯವರೆಗಿನ ಕಾವ್ಯ, ಕಲೆ ಕುರಿತಾಗಿ ಹುಟ್ಟಿಕೊಂಡ ನೀತಿಗಾಗಿ ಕಲೆ, ಕಲೆಗಾಗಿ ಕಲೆ, ಸಾಮಾಜಿಕ ಪ್ರಜ್ಞೆ ಪ್ರಚಾರಕ್ಕಾಗಿ ಕಲೆ, ಆಂತರಿಕ ಅಭಿವ್ಯಕ್ತಿಯೇ ಕಲೆ ಎಂಬ ಅನೇಕ ವಾದಗಳು ಹುಟ್ಟುಕೊಂಡಿದ್ದು ಜೊತೆಗೆ ಭಾಷೆಯ ಸಾಂಕೇತಿಕ ಬಳಕೆ ಎಂಬುದೂ ಸೇರಿಕೊಂಡು ಉಂಟಾಗಿದ್ದ ಒಂದು ಗೊಂದಲದ ಸನ್ನಿವೇಶದಲ್ಲಿ ವಿಮರ್ಶೆಯ ಕ್ಷೇತ್ರವನ್ನು ಸಮಗ್ರವಾಗಿ ಪರಿಶೀಲಿಸಬೇಕಾದ ಅಗತ್ಯವನ್ನು ವಿವರಿಸಿ, ಇಂಥ ಸಂದರ್ಭದಲ್ಲಿ ಶ್ರೇಷ್ಠ ವಿಮರ್ಶಕನೆನೆಸಿಕೊಂಡಿದ್ದ ರಿಚರ್ಡ್ಸ್ ಒಂದು ಸ್ಥಿರವಾದ ವಿಮರ್ಶಾನೆಲೆಯನ್ನು ಸ್ಥಾಪಿಸಿದ ಅಂಶವನ್ನು ಪ್ರಸ್ತಾಪಿಸುತ್ತಾ ಮುಖ್ಯವಾಗಿ ಆ ಕಾಲದಲ್ಲಿ ಎದ್ದ ಕಾವ್ಯ ಸತ್ಯವನ್ನು ಹೇಳುತ್ತದೆಯೇ? ಹೇಳುತ್ತಿದ್ದರೆ ಆ ಸತ್ಯದ ಸ್ವರೂಪ ಎಂಥದು? ಅದರ ಉಪಯುಕ್ತತೆ ಯಾವ ಬಗೆಯದು? ಎನ್ನುವ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನಗಳ ಬಗ್ಗೆ ಬರೆಯುತ್ತಾ, ಹಿಂದಿನವರಾದ ಆರ್ನಾಲ್ಡ್ ಷೆಲ್ಲಿಯವರು ಪರಿಶೀಲಿಸಿದ್ದನ್ನು ಪ್ರಸ್ತಾಪಿಸಿ, ರಿಚರ್ಡ್ಸ್ ವಿಮರ್ಶೆಯ ಬೆಳವಣಿಗೆಯಲ್ಲಿ ಹೊಸ ಪದ್ಧತಿಗಳನ್ನು ಸೇರ್ಪಡೆ ಮಾಡಿದ್ದನ್ನು ವಿವರಿಸುತ್ತಾರೆ "ಷೆಲ್ಲಿಯ ಕಾವ್ಯ ಸಮರ್ಥನೆಗೆ ಪ್ರೇರಕವಾದ ಪೀಕಾಕ್‌ನ ಮಾತುಗಳನ್ನಲ್ಲದೆ ಕಾವ್ಯದ ಬಗೆಯಲ್ಲಿ ಆರ್ನಾಲ್ಡ್ ನುಡಿದ ಭವಿಷ್ಯವಾಣಿಯನ್ನು ಉದ್ಧರಿಸಿ ಕಾವ್ಯವನ್ನು ಸಮರ್ಥಿಸಬೇಕಾದ ಅಗತ್ಯವನ್ನು ಕಂಡು ಕೊಳ್ಳುತ್ತಾನೆ ಎನ್ನುವುದು ಒಂದು ವಿಶೇಷವಾಗಿದ್ದಂತೆ, ಕಾವ್ಯಕ್ಕೆ ಇದಿರಾಗಿ ನಿಂತಿದ್ದ ವಿಜ್ಞಾನದ ಅಕ್ಷೇಪವನ್ನು ವಿಜ್ಞಾನದ ಸಾಧನದಿಂದಲೇ ಉತ್ತರಿಸುತ್ತಾನೆ ಎನ್ನುವುದು ಇನ್ನೊಂದು ವಿಶೇಷವಾಗಿದೆ, ಭಾಷೆಯನ್ನು ಬಳಸುವ ಇತರ ಪ್ರಕಾರಗಳಿಂದ ಬೇರೆಯಾದ ಯಾವುದನ್ನು ಕಾವ್ಯ ಸಾಧಿಸುತ್ತದೆ? ಹೇಗೆ ಸಾಧಿಸುತ್ತದೆ? ಹಾಗೆ ಸಾಧಿಸುವುದರ ಪ್ರಯೋಜನ, ಮಹತ್ವಗಳು ಎಂಥವು? ಎನ್ನುವ ಪ್ರಶ್ನೆಗಳೇ ರಿಚರ್ಡ್ಸ್‌ನ ಅನ್ವೇಷಣೆಯ ವಿಷಯಗಳಾಗುತ್ತವೆ" ಎಂದು ಹೇಳಿ ಅವನ ವಿಮರ್ಶಾ ವಿಷಯಗಳ ಚಿಂತನೆಯ ಸ್ವರೂಪ ಮತ್ತು ವ್ಯಾಪ್ತಿಯನ್ನು ಪರಿಚಯಿಸುತ್ತಾರೆ. ಅನುಭವ ಅನುಭವವೇ ಎಂಬ ದೃಷ್ಟಿಯಿಂದ ಕಾವ್ಯಾನುಭವವನ್ನೂ ಕಾಣಬೇಕಾಗುತ್ತದೆ; ಕಲೆಯಾದರೂ ಒಂದು ಮನುಷ್ಯ ವ್ಯಾಪಾರವೇ ಆಗಿರುವುದರಿಂದ ಅದರ ಅನುಭವವನ್ನು ಮನುಷ್ಯನ ಇತರ

ಅನುಭವಗಳಿಂದ ಬೇರೆಯಾಗಿ ಕಾಣಬೇಕಾದ್ದಿಲ್ಲ' 'ಕಲೆಯ' ಪರಿಣಾಮ ಒಂದು ಮನೋವ್ಯಾಪಾರವಾದ್ದರಿಂದ ಅದನ್ನು ಮನಃ ಶಾಸ್ತ್ರದ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ' ಎನ್ನುವ ಅವನ ವಿಚಾರಗಳ ಹಿನ್ನೆಲೆಯಲ್ಲಿ ರಿಚರ್ಡ್ಸ್ ವಿಮರ್ಶೆಗೆ ಮನಃ ಶಾಸ್ತ್ರದ ನೆಲೆಯನ್ನು ಒದಗಿಸಿದ್ದಾನೆ ಎಂಬ ಅಭಿಪ್ರಾಯಕ್ಕೆ ಬರುತ್ತಾರೆ. ಇಂತಹ ಹಿನ್ನೆಲೆಯಲ್ಲಿಯೇ ರಿಚರ್ಡ್ಸ್ ಕಾವ್ಯ ನಿರ್ಮಿತಿ, ಕಾವ್ಯ ಭಾಷೆ, ಭಾಷೆಯಲ್ಲಿನ ಸಾಂಕೇತಿಕತೆ, ಕಾವ್ಯ ಮತ್ತು ಕಾವ್ಯದ ಓದುಗ– ಇತ್ಯಾದಿ ವಿಚಾರಗಳ ಬಗ್ಗೆ ಚಿಂತಿಸುತ್ತಾನೆ ಎನ್ನುವ ನಿಲುವನ್ನು ತಲುಪುತ್ತಾರೆ, ಒಟ್ಟಾರೆಯಾಗಿ ರಿಚರ್ಡ್ಸ್ ಕಾವ್ಯಾನುಭದ ವಿಶ್ಲೇಷಣೆಯನ್ನು ಆಧುನಿಕ ಮನಃ ಶಾಸ್ತ್ರದ ದೃಷ್ಟಿಯಿಂದ ಮಾಡುವುದರಿಂದ, ಆಧುನಿಕ ಮನಃ ಶಾಸ್ತ್ರ ವಿಮರ್ಶೆಯ ಕ್ಷೇತ್ರವನ್ನು ಪ್ರವೇಶಿಸಿದ್ದನ್ನು ಮಹತ್ವದ ವಿಷಯವಾಗಿ ಲೇಖಕರು ಪರಿಗಣಿಸುತ್ತಾರೆ. ಅವನ ಕಾವ್ಯದ ವಿಶ್ಲೇಷಣೆ, ಕಾವ್ಯದ ಮುಖ್ಯಸಾಧನವಾದ ಭಾಷೆಯ ಬಳಕೆಯ ಮೇಲೆ ನಿಂತಿರುವುದನ್ನು, ಕಾವ್ಯ ಸತ್ಯ ಎರಡು ರೀತಿಯಲ್ಲಿ ಹೊಮ್ಮಿಸಬಹುದಾದ ಅವನ ವಿವರಣೆಯನ್ನು ವಿವೇಚಿಸುತ್ತಾರೆ. ಭಾಷೆಯನ್ನು ವೈಜ್ಞಾನಿಕವಾಗಿ ಬಳಸಿದಾಗ ಹೊರಹೊಮ್ಮುವ ಸತ್ಯ ಹೊರ ಜಗತ್ತಿನದು. ಅದು ವೈಜ್ಞಾನಿಕ ಸತ್ಯ, ಆದರೆ ಭಾಷೆ ಭಾವವ್ಯಂಜಕವಾಗಿ ಬಳಕೆಯಾದಾಗ ಹೊಮ್ಮುವ ಸತ್ಯ ವೈಜ್ಞಾನಿಕ ಸತ್ಯಕ್ಕಿಂತ ಬೇರೆಯಾಗಿರುತ್ತದೆ ಎನ್ನುವುದು ಸರ್ವವಿದಿತವಾಗಿರುವಾಗ ರಿಚರ್ಡ್ಸ್‌ನ ವಿಶೇಷತ ಎಲ್ಲಿ ಎಂಬ ಪ್ರಶ್ನೆ ಉದ್ಭವಿಸ ಬಹುದಾದುಕ್ಕೆ ಲೇಖಕರು ರಿಚರ್ಡ್ಸ್‌ನ ಮುಂದಿನ ವ್ಯಾಖ್ಯಾನವನ್ನು ಪ್ರಸ್ತಾಪಿಸುತ್ತಾರೆ. 'ಸಾಮಾನ್ಯ ದೃಷ್ಟಿಯಿಂದ ಸತ್ಯವಲ್ಲ ಎನ್ನಬಹುದಾದ್ದನ್ನು ಕವಿ ಓದುಗನನ್ನು ಒಲಿಸಿ ಅದು ಸತ್ಯ ಎಂದು ನಂಬುವಂತೆ ಮಾಡಬಲ್ಲನಾದಾಗ ಅಂಥದ್ದನ್ನು ಕಾವ್ಯ ಸತ್ಯ ಎಂದು ವ್ಯಾಖ್ಯಾನಿಸುವುದರ ಮೂಲಕ ಓದುಗನನ್ನು ಕಾವ್ಯಸತ್ಯದ ಅನಾವರಣ ಪ್ರಕ್ರಿಯೆಯಲ್ಲಿ ಮುಖ್ಯನಾಗಿಸುವುದೇ ಅವನ ವಿಶಿಷ್ಟತೆ ಎನ್ನುವುದನ್ನು ಗಮನಿಸುತ್ತಾರೆ. ಮನಃ ಶಾಸ್ತ್ರದ ಬಳಕೆಯನ್ನು ವಿಮರ್ಶೆಯಲ್ಲಿ ತರುವುದರ ಜೊತೆಗೆ, ಸಾಹಿತ್ಯಕ್ಕೆ ಮೂಲಾಧಾರವಾಗಿರುವ ಭಾಷೆಯಲ್ಲಿಯ ಪದಗಳೇ ಮುಖ್ಯವಾಗಿರುವುದರಿಂದ ಅವುಗಳ ಅರ್ಥ ಆ ಅರ್ಥದ ಸ್ಪಷ್ಟತೆ, ಅಥವ ಅಸ್ಪಷ್ಟತೆ ಅರ್ಥದ ಸಂದಿಗ್ಧತೆ ಅಥವಾ ಬಹುಮುಖತೆ ಉಂಟುಮಾಡುವ ಪರಿಣಾಮಗಳೆಲ್ಲವನ್ನೂ ವಿವರಿಸುವ ಶಬ್ದಾರ್ಥಶಾಸ್ತ್ರವನ್ನು ವಿಮರ್ಶೆಯಲ್ಲಿ ದುಡಿಸಿಕೊಳ್ಳುವುದರಲ್ಲಿಯೂ ಅವನೇ ಮೊದಲಿಗನೆಂದು ಭಾವಿಸುತ್ತಾರೆ. ಇದಕ್ಕೆ ಸಂಬಂಧಪಟ್ಟ ಅವನ ವಿಚಾರಗಳು "ಸಂದರ್ಭ ಸಿದ್ಧಾಂತ"ದಲ್ಲಿ ಅಡಕವಾಗಿರುವುದನ್ನು ಪ್ರಸ್ತಾಪಿಸುತ್ತಾರೆ. ಹೀಗಾಗಿ ರಿಚರ್ಡ್ಸ್ "ಕಾವ್ಯಾನುಭವವನ್ನು ಕುರಿತಂತೆ ಒಂದು ಹೊಸ ಸಿದ್ಧಾಂತವನ್ನು ಮಂಡಿಸುವುದೇ ಅಲ್ಲದೆ ಕಾವ್ಯ ನಿರ್ಮಿತಿ, ಕಾವ್ಯಾಸ್ವಾದಗಳು ಕವಿ ಮತ್ತು ಓದುಗರ ನಡುವಿನ ಕ್ರಿಯೆಗಳಾದ್ದರಿಂದ

ಮನಃಶಾಸ್ತ್ರದ ದೃಷ್ಟಿಯಿಂದ ಕಾವ್ಯ ಪ್ರಯೋಜನದ ಬಗ್ಗೆ ರಿಚರ್ಡ್ಸ್‌ನ ವ್ಯಾಖ್ಯಾನ ಏನಿತ್ತೆಂಬುದನ್ನು ಸ್ಪಷ್ಟವಾಗಿ ಓದುಗ ಪ್ರತಿ ಸ್ಪಂದನ (Readers response theory) ಸಿದ್ಧಾಂತದ ಮೇಲೆ ಗಮನ ಸೆಳೆಯುತ್ತಾರೆ.

ಇಷ್ಟೆಲ್ಲ ಮಾಡಿದ ಮತ್ತು ವಿಚಾರಗಳನ್ನು ಮಂಡಿಸಿದ ರಿಚರ್ಡ್ಸ್‌ನ ವಿಮರ್ಶೆಯ ವಿಚಾರಗಳಿಗೆ ಸಂಬಂಧವೇ ಇಲ್ಲದಂತೆ ಅವನ ಹಿರಿಯ ಸಮಕಾಲೀನ ಟಿ.ಎಸ್‌ಎಲಿಯಟ್ ಕಾವ್ಯ ಕ್ರಿಯೆ ಕುರಿತಂತೆ ಮಂಡಿಸಿದ ವಿಚಾರಗಳನ್ನು ವಿವೇಚಿಸುತ್ತಾರೆ. ಈ ಇಬ್ಬರ ವಿಚಾರಗಳ ನಡುವೆ ಇರುವ ಸಾಮ್ಯ-ವ್ಯಾತ್ಯಾಸಗಳನ್ನು ಕುರಿತೂ ಬರೆಯುತ್ತಾರೆ ಇವರು ಗಮನಿಸಿದಂತೆ, ಎಲಿಯಟ್ ಕಾವ್ಯಕ್ರಿಯೆಯನ್ನು ತನಗೇ ವಿಶಿಷ್ಟವಾದ ರೀತಿಯಲ್ಲಿ ವಿವರಿಸುತ್ತಾನೆ. ಆತನ ವಿವರಣೆ ಒಂದು ಹೊಸ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ: ಎಲಿಯಟ್ ೧೯೨೦ ರಲ್ಲಿ ಪ್ರಕಟಿಸಿದ ಪರಂಪರೆ ಮತ್ತು ವ್ಯಕ್ತಿ ವಿಶಿಷ್ಟ ಪ್ರತಿಭೆ ಎಂಬ ಪ್ರಬಂಧದಲ್ಲಿ ಕಾವ್ಯ ವಿಮರ್ಶೆ ಕುರಿತಾದ ತನ್ನ ಚಿಂತನೆಗಳನ್ನು ಧಾಳಾಗಿ ವಿವರಿಸಿದ್ದಾನೆ. ಹಿಂದಿನ ಶತಮಾನದಲ್ಲಿ ರೊಮ್ಯಾಂಟಿಕ್ ಕಾವ್ಯ ಕುರಿತಾದ ಎಲ್ಲ ವಿಚಾರಗಳು ಈಗ ಪ್ರಶ್ನಾರ್ಹವಾಗಿ ಕಾಣತೊಡಗಿದ್ದವು. ರೊಮ್ಯಾಂಟಿಕ್ ಪಂಥದ ಕವಿಗಳು ಕಾವ್ಯದಲ್ಲಿ ವ್ಯಕ್ತಿತ್ವದ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದಿದ್ದನ್ನು ಎಲಿಯಟ್ ಅಲ್ಲ ಗಳೆದ. ಆತ ಪ್ರಾಮಾಣಿಕ ವಿಮರ್ಶೆ ಹಾಗೂ ಸಂವೇದನಾಶೀಲ ಗುಣಗ್ರಹಣ ಕಾವ್ಯವನ್ನು ಕುರಿತು ಮಾತನಾಡುತ್ತಾನೆಯೇ ಹೊರತು ಕವಿಯನ್ನು ಕುರಿತು ಮಾತನಾಡುವುದಿಲ್ಲ ಎನ್ನುವುದು ಲೇಖಕರ ಗ್ರಹಿಕೆ. ಅಗಮೆಮ್ನಾನ್, ಒಥೆಲ್ಲೊ ನಾಟಕಗಳನ್ನು, ಉದಾಹರಿಸುತ್ತಾ, ಕಲಾಕೃತಿಗಳು ಒದಗಿಸಿಕೊಡುವ ಅನುಭವ ನಿಜ ಜೀವನದಲ್ಲಿಯ ಅನುಭವದಿಂದ ಬೇರೆಯಾಗಿರುತ್ತದೆ, ಅಲ್ಲಿನ (ಕಾವ್ಯದಲ್ಲಿನ) ಭಾವನೆಗಳ ಸಂಕೀರ್ಣತೆ ನಿಜ ಜೀವನದ ಅನುಭವದ ಸಂಕೀರ್ಣತೆಯಾಗಿರುವುದಿಲ್ಲ ಎನ್ನುವ ಮಾತುಗಳ ಹಿನ್ನೆಲೆಯಲ್ಲಿ ವಾಸ್ತವವಾಗಿ ಎಲಿಯಟ್ ಯಾವ ಯಾವ ವಿಚಾರಗಳ ಮೇಲೆ ಒತ್ತು ಕೊಡುತ್ತಾನೆಂಬುದನ್ನು ವಿವರಿಸುತ್ತಾರೆ. ಕಾವ್ಯದ ಸ್ವರೂಪ ನಿರ್ಮಿತಿಯ ಪ್ರಕ್ರಿಯೆ, ಅದರ ಸಾಮಗ್ರಿ, ಅದರ ಪರಿಣಾಮದ ಸ್ವರೂಪ ಇತ್ಯಾದಿ ಕುರಿತು ಸಾದ್ಯಂತವಾಗಿ ನೀಡಿದ ವಿವರಗಳನ್ನು ಕುರಿತು ವಿವೇಚಿಸುತ್ತಾರೆ ಲೇಖಕರು. ಆತನ ವಿಚಾರಗಳಲ್ಲಿನ ಮುಖ್ಯಾಂಶಗಳನ್ನು ಮೂರುವಿಧವಾಗಿ, ೧ ಕವಿ ಹಾಗೂ ಆತನ ಕಾರ್ಯಕ್ಕೂ ಮತ್ತು ಮೊದಲಿನ ಕೃತಿಗಳಿಗೂ ಅಂದರೆ ಸಾಹಿತ್ಯ ಪರಂಪರೆಗೂ ಇರುವ ಸಂಬಂಧಗಳು. ೨ ಕವಿಕಾರ್ಯಕ್ಕೂ ಮತ್ತು ಕವಿಗೂ ನಡುವಿನ ಸಂಬಂಧವನ್ನು ಕುರಿತ ವಿಚಾರಗಳು ೩. ಇವೆರಡೂ ಸೇರಿ ವಿಮರ್ಶೆಯನ್ನು ಪ್ರಭಾವಿಸುವ ವಿಚಾರಗಳು -ಎಂದು ವಿಂಗಡಿಸಿ, ಅವುಗಳ ವಿಸ್ತೃತ ವಿವರಣೆಯನ್ನು ನೀಡುತ್ತಾರೆ.

ಸಂಪ್ರದಾಯ, ಪರಂಪರೆ ಇತ್ಯಾದಿಗಳಿಗೆ ಹೊಸ ಆಯಾಮ ನೀಡಿದ್ದನ್ನು ವಿವರಿಸಿದ್ದಾರೆ. ಕಾವ್ಯ ಕಾಲಾತೀತವಾದದ್ದು. ಅದು ಯಾವ ಕಾಲದ್ದು ಆದರೂ ಹಿಂದಿನದು, ಇಂದಿನದು ಎಂದು ಪ್ರತ್ಯೇಕಿಸಿ ನೋಡಬೇಕಾದ್ದಿಲ್ಲ, ಆದ್ದರಿಂದ ಗತಕಾಲದ ಗತ ಸ್ವರೂಪವನ್ನಲ್ಲದೆ ಅದರ ವರ್ತಮಾನ ಸ್ವರೂಪವನ್ನು ಕವಿಗೆ ಗ್ರಹಿಸಬೇಕಾಗುತ್ತದೆ ಎನ್ನುವುದರಲ್ಲಿ ಎಲ್ಲ ಕಾವ್ಯವೂ ಸಮಕಾಲೀನವೇ ಎಂಬ ತತ್ವವನ್ನು ಎಲಿಯಟ್ ವಿಶದ ಪಡಿಸಿರುವ ಅಂಶವನ್ನು ಗುರುತಿಸುತ್ತಾರೆ. ಹಾಗೆಯೇ ಮಿಕ್ಕೆಲ್ಲ ವಿಚಾರಗಳ ಬಗ್ಗೆಯೂ ಲೇಖಕರು ವಿಶ್ಲೇಷಣಾಕತ್ಮ ವಿವರಣೆ ನೀಡುತ್ತಾರೆ. ಎಲಿಯಟ್ ಕಾವ್ಯ ನಿರ್ಮಿತಿ. ಕಾವ್ಯಾನುಭವ. ಕಾವ್ಯ ವಿಮರ್ಶೆ ಕುರಿತು ಹೇಳುವ ವಿಚಾರಗಳನ್ನು ಹಿಂದಿನವರು ಹೇಳುವ ವಿಚಾರಗಳಿಗಿಂತ ಎಷ್ಟರ ಮಟ್ಟಿಗೆ ಭಿನ್ನವಾಗಿದೆ, ಇವನ ಹೇಳಿಕೆಗಳಲ್ಲಿನ ವಿಶೇಷತೆ, ಪ್ರತ್ಯೇಕತೆಗಳೇನು ಎಂಬುದನ್ನು ತೌಲನಿಕವಾಗಿ ಚರ್ಚಿಸುತ್ತಾರೆ. ಹಾಗೆಯೇ ಅವನು ಪ್ರತಿಪಾದಿಸಿದ ವಿಚಾರಗಳ ಕಾರಣವಾಗಿ ನಡೆದ ವಿಚಾರಮಂಥನಗಳಿಂದ ಹೊಮ್ಮಿದ ನಿಲುವುಗಳನ್ನು ವಿವರಿಸುತ್ತಾರೆ, ಎಲಿಯಟ್‌ನ ವಿಮರ್ಶಾ ವಿಧಾನವನ್ನೇ ವಿಮರ್ಶಿಸಿದ ಕ್ರೌರಾನ್ಸಮ್ ಮತ್ತು ಐವರ್ ವಿಂಟರ್ಸ್ ಎಂಬ ಇಬ್ಬರು, ಎಲಿಯಟ್ ವಿಚಾರ ಕುರಿತಾದ ನಿಲುವುಗಳನ್ನು ಪ್ರಸ್ತಾಪಿಸುತ್ತಾರೆ, ಲೇಖಕರ ಮಾತಿನಲ್ಲಿಯೇ ಹೇಳುವುದಾದರೆ, ಕ್ರೌರ್ಯಾನ್ಸಮ್‌ಗೆ ಎಲಿಯಟ್‌ನ ಕೃತಿಯಲ್ಲಿನ ವಸ್ತುನಿಷ್ಠತೆ ಮತ್ತು ಅದರಲ್ಲಿನ ವಿಚಾರಾಂಶ ಗಮನಾರ್ಹವೆನಿಸುತ್ತದೆ, ಅಲ್ಲದೆ ಆತನಿಗೆ ಎಲಿಯಟ್ ಮಾರ್ಗ ಸಂಪ್ರದಾಯಿ ಎಂದೂ ಎನಿಸುತ್ತದೆ. ಅದೇ ಐವರ್ ವಿಂಟರ್ಸ್‌ನ ಅಭಿಪ್ರಾಯವೂ ಅದೇ ಆಗಿದ್ದೂ, ರೊಮ್ಯಾಂಟಿಕ್ ವಿಚಾರ ಧೋರಣೆಯನ್ನು ಅದರ ಅಸ್ಪಷ್ಟತೆಗಾಗಿ ಖಂಡಿಸುತ್ತಾನೆ. ನೈತಿಕ ದೃಷ್ಟಿಗೆ ಪ್ರಾಧಾನ್ಯ ನೀಡುತ್ತಾನೆ ಎಲಿಯಟ್ ಕುರಿತಾದ ಬೇರೆ ಬೇರೆ ವಿಮರ್ಶಕರ, ವಿದ್ವಾಂಸರ ನಿಲುವುಗಳನ್ನು ವಿವರಿಸುತ್ತಲೇ ಲೇಖಕರು ಎಲಿಯಟ್‌ನ ಒಟ್ಟು ಸಾಧನೆ ಮತ್ತು ವಿಮರ್ಶೆಯ ನಿಲುವುಗಳನ್ನು ಕುರಿತೂ ತಮ್ಮ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸುತ್ತಾರೆ "ಸ್ವತಃ ಒಬ್ಬ ಶ್ರೇಷ್ಠಕವಿಯಾಗಿದ್ದರೂ ಎಲಿಯಟ್ ವಿಮರ್ಶನ ಕಾರ್ಯವನ್ನು ಕಡಿಮೆಯೆಂದು ಭಾವಿಸುವುದಿಲ್ಲ ಮಾತ್ರವಲ್ಲ, ಕವಿಕಾರ್ಯಕ್ಕೆ ಸಮಾನವಾದ ಮಹತ್ವವನ್ನು ಅದಕ್ಕೆ ಕೊಡುತ್ತಾನೆ. ಕಾವ್ಯ ನಿರ್ಮಾಣ ಕಾರ್ಯ ವಿಮರ್ಶನವನ್ನು ಒಳಗೊಂಡೇ ನಡೆಯುತ್ತದೆ, ಕವಿಯಲ್ಲಿಯ ವಿಮರ್ಶಕ ಎಷ್ಟೆಷ್ಟು ಜಾಗೃತನಾಗಿರುತ್ತಾನೆಯೋ, ಎಷ್ಟೆಷ್ಟು ಕಾವ್ಯಾಂಶಗಳ ಸೂಕ್ಷ್ಮ ದೃಷ್ಟಿಯ ಪರಿವೀಕ್ಷಕನಾಗಿರುತ್ತಾನೆಯೋ, ಅಷ್ಟಷ್ಟರ ಮಟ್ಟಿಗೆ ಕವಿಯ ಕಾರ್ಯ ಹೆಚ್ಚಿನ ಗುಣವನ್ನು ಪಡೆಯುತ್ತದೆ ಎನ್ನುತ್ತಾನೆ. ಕವಿಯಾಗಿರಬಲ್ಲವನೇ ವಿಮರ್ಶಕನಾಗುತ್ತಾನೆ, ಇಬ್ಬರ ಸಂವೇದನಾ ಸಾಮರ್ಥ್ಯಗಳೂ ಒಂದೇ ಬಗೆಯುವಾಗಿರುತ್ತವೆ ಬೇರೆ ಬೇರೆ ದಾರಿಗಳಲ್ಲಿ ಅವರು ಕಾರ್ಯ

ಪ್ರವೃತ್ತರಾಗುತ್ತಾರೆನ್ನುವುದೇ ವ್ಯತ್ಯಾಸ ಎನ್ನುವುದು, ವಿಮರ್ಶೆಯನ್ನು ಕುರಿತಂತೆ ಎಲಿಯಟ್‌ನ ಮೂಲ ಧೋರಣೆಯಾಗಿದೆ” ಎಂದು ಲೇಖಕರು, ಟಿ.ಎಸ್ ಎಲಿಯಟ್ ಪ್ರತಿಪಾದಿಸಿದ ನವ್ಯ ವಿಮರ್ಶಾ ಪಂಥದ ಮೂಲ ವಿಚಾರ ಧೋರಣೆಯನ್ನು ನಾಲ್ಕು ವಿಧವಾಗಿ ಸಂಗ್ರಹಿಸುತ್ತಾರೆ. ೧ ಕೃತಿಯ ಸ್ವತಂತ್ರ ಅಸ್ತಿತ್ವವನ್ನು ಗುರುತಿಸಿ, ಅದನ್ನೇ ಪರಾಮರ್ಶಿಸಬೇಕಾದ್ದರಿಂದ, ಅದಕ್ಕೆ ಹೊರತಾದ ಯಾವ ಅಂಶವನ್ನೂ ಗಮನಿಸಬೇಕಾಗಿಲ್ಲ ೨ ಪರಾಮರ್ಶಿಸ ಬೇಕಾದದ್ದು ಕವಿಯಿಂದ ಬೇರೆಯಾದ, ಸ್ವತಂತ್ರವಾದ ಕೃತಿಯನ್ನಾದ್ದರಿಂದ ಅದನ್ನು ಬರೆಯುವು ದರಲ್ಲಿ ಕವಿಯ ಉದ್ದೇಶವೇನಿತ್ತು ಅದರ ಮೂಲಕ ಏನನ್ನು ಸಾಧಿಸಬೇಕೆಂದಿದ್ದ ಎನ್ನುವ ವಿಚಾರವೂ ಅಪ್ರಸ್ತುತವಾಗುತ್ತದೆ ೩ ಕವಿ ಇರಿಸಿಕೊಂಡಿರಬಹುದಾದ ಉದ್ದೇಶ ಅಪ್ರಸ್ತುತವಾದಂತೆ, ಕೃತಿ ಉಂಟುಮಾಡುವ ಪರಿಣಾಮವೂ ಗುಣ ನಿಷ್ಕರ್ಷೆಯಲ್ಲಿ ಅಪ್ರಸ್ತುತ. ಪರಿಣಾಮ ಯಾವಾಗಲೂ ಸಾಪೇಕ್ಷವಾದದ್ದು ೪ ಭಾವಾನುವಾದ ಸಾಧ್ಯವಾಗುವಂಥ ರಚನೆಯನ್ನು ಕೃತಿ ಪಡೆದಿರಬೇಕು ಎಂಬ (ವಿಂಟರ್ಸ್ ರಂಥವರ ವಾದಕ್ಕೆ ಇದಿರಾಗಿ) ಕಾವ್ಯದ ಭಾವವನ್ನು ಬೇರೆ ಮಾತುಗಳಿಂದ ಹೇಳಬಹುದಾದರೆ ಕವಿ ಬಳಸಿದ ಪ್ರತಿಮೆ, ರೂಪಕ ಪದಗತಿ ಎಂಬೆಲ್ಲ ಅಂಶಗಳು ಕೃತಿಯಲ್ಲಿ ಮಾಡುವ ಕಾರ್ಯಕ್ಕೆ ಬೆಲೆಯೇ ಉಳಿಯುವುದಿಲ್ಲ. ಕೃತಿಯೊಂದರ ರೂಪವನ್ನು ಅದರ ಭಾವದಿಂದ ಬೇರ್ಪಡಿಸಲಾಗುವುದಿಲ್ಲ. ಅದು ಒಳಗೊಂಡಿರುವ ಅನುಭವ ನಿಜಜೀವನದ ಅನುಭವದಿಂದ ಬೇರೆಯಾಗಿರುವುದರಿಂದ, ಅದನ್ನು ಆ ದೃಷ್ಟಿಯಿಂದಲೇ ನೋಡಬೇಕಾಗುತ್ತದೆ – ಇಂಥ ನಿಲುವುಗಳೊಂದಿಗೆ ಎಲಿಯಟ್ ನವ್ಯ ವಿಮರ್ಶಾ ಪಂಥದ ಹರಿಕಾರನಾದದ್ದನ್ನು ಸಮರ್ಥ ವಿಶ್ಲೇಷಣೆಯೊಂದಿಗೆ ವಿವರಿಸಿದ್ದಾರೆ.

ಪಾಶ್ಚಾತ್ಯ ಕಾವ್ಯ ಮೀಮಾಂಸೆ, ಅಥವಾ ಪಾಶ್ಚಾತ್ಯ ವಿಮರ್ಶೆ ಕೃತಿ ಗ್ರೀಕರಿಂದ ಪ್ರಾರಂಭಿಸಿ ಈ ಶತಮಾನದ ಮಧ್ಯಭಾಗದವರೆಗಿನ ಸುಮಾರು ಎರಡೂವರೆ ಸಾವಿರ ವರ್ಷಗಳ ಸುದೀರ್ಘವಾದ ವಿಮರ್ಶಾ ಚರಿತ್ರೆಯ ಮೂಲಕ ವಿಶ್ವದ ಮಹಾನ್ ಕವಿ ವಿಮಾರ್ಶಕರ ಅಮೂಲ್ಯವಾದ ಕಾವ್ಯ, ವಿಮರ್ಶೆ ಕುರಿತಾದ ಚಿಂತನೆಗಳನ್ನು ಕಾಲ ಕಾಲಕ್ಕೆ ಬದಲಾಗುತ್ತ ಬಂದ ಧೋರಣೆಗಳನ್ನು ಒಂದೊಂದು ಕಾಲಘಟ್ಟದಲ್ಲಿಯೂ ಇವುಗಳ ಕುರಿತು ಎದ್ದ ಪ್ರಶ್ನೆಗಳು, ಕಂಡು ಬಂದ ವಿರೋಧ ಗಳು, ಸಮರ್ಥನೆಗಳು ಎಲ್ಲವನ್ನೂ ಕ್ರಮಬದ್ಧವಾದ ರೀತಿಯಲ್ಲಿ ಕಾವ್ಯಾಸಕ್ತರಿಗೂ ಸಾಹಿತ್ಯ ವಿದ್ಯಾರ್ಥಿಗಳಿಗೂ ವಿಮರ್ಶಕರಿಗೂ ಒಂದು ಮಾರ್ಗದರ್ಶಿ ಮೌಲಿಕ ಗ್ರಂಥವಾಗಿದ್ದು, ಕನ್ನಡ ಸಾಹಿತ್ಯ ವಿಮರ್ಶಾಲೋಕಕ್ಕೆ ಇನಾಂದಾರರು ನೀಡಿದ ಮಹತ್ವದ ಕೊಡುಗೆಯಾಗಿದೆ ಈ ಗ್ರಂಥ.

■

# ಶರಚ್ಚಂದ್ರ – ವ್ಯಕ್ತಿ ಮತ್ತು ಕಲಾವಿದ

ಇನಾಂದಾರರು ಸ್ವತಃ ಸೃಜನಶೀಲ ಬರಹಗಾರರಾಗಿ ಅನನ್ಯವಾದ ಖ್ಯಾತಿಗಳಿಸಿದವರು, ಸ್ವಂತ ಬರವಣಿಗೆಯಲ್ಲಿ ಎಷ್ಟು ಸಮರ್ಥರೋ ಅಷ್ಟು ಸಾಮರ್ಥ್ಯವನ್ನು ಅವರ ಅನುವಾದ ಕೃತಿಗಳಲ್ಲಿಯೂ ಕಾಣಿಸಿದ್ದಾರೆ, ಇದಕ್ಕೆ ಸಾಕ್ಷಿಯಾಗಿ ಅವರ ೩೦ರ ದಶಕದಲ್ಲಿನ ಅನುವಾದ ಕೃತಿಯಾದ ಎರಡು ಧ್ರುವ (ಹಾಗೆಯೇ ೭೭ ಅಂದರೆ ೭೦ರ ದಶಕದ ಅನುವಾದ ಕೃತಿ ಯಾಯಾತಿ, ಜ್ಞಾನಪೀಠ ಪುರಸ್ಕೃತ) ಕಾದಂಬರಿಗಳ ಜೊತೆಗೆ ಜೀವನ ಚರಿತ್ರೆಯಾದ "ಶರಚ್ಚಂದ್ರ" ವ್ಯಕ್ತಿ ಮತ್ತು ಕಲಾವಿದ ಕೃತಿಯೂ ಓದುಗರ ಮುಂದಿವೆ. ಇದು ಶ್ರೀ ಸುಬೋಧಚಂದ್ರ ಸೇನ್‌ಗುಪ್ತ, ಇಂಗ್ಲಿಷಿನಲ್ಲಿ ರಚಿಸಿದ Saratchandra- Man and Artist ಎನ್ನುವುದರ ಕನ್ನಡ ಅನುವಾದವಾಗಿದೆ. ಇದು ಅನುವಾದವೆ ಆದರೂ ಅನುವಾದ ಎನಿಸದೆ, ಆ ಕೃತಿಯ ಪುನಃ ಸೃಷ್ಟಿ ಎಂಬಂತಿದೆ. ಈ [ಕೃತಿಯನ್ನು ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ] ಶರಚ್ಚಂದ್ರರ ಶತಮಾನೋತ್ಸವದ ನೆನಪಿಗಾಗಿ [೧೯೭೬ ರಲ್ಲಿ ಕನ್ನಡದಲ್ಲಿ ಅನುವಾದಿಸಿದ್ದು ೧೯೭೮ ರಲ್ಲಿ] ಕನ್ನಡಿಸಿದ ಈ ಕೃತಿ ಕೇಂದ್ರ ಸಾಹಿತ್ಯ ಅಕಾಡೆಮಿ ವತಿಯಿಂದ ಪ್ರಕಟವಾಯಿತು. ಬಂಗಾಲಿ ಸಾಹಿತ್ಯ ಲೋಕದ ಅತ್ಯಂತ ಮಹತ್ವದ ಲೇಖಕರೆಂದು ಗುರುತಿಸಿಕೊಂಡದ್ದೇ ಅಲ್ಲದೆ ತಮ್ಮ ಗುರುಗಳೆಂದು ಭಾವಿಸಿಕೊಂಡಿದ್ದ ರವೀಂದ್ರನಾಥ ಠಾಕೂರರಿಗೆ ಸರಿಸಾಟಿಯೆಂದೂ ಭಾವಿಸಲಾಗಿತ್ತು. ಇವರ ಕಾದಂಬರಿಗಳು ಅಪಾರ ಜನಪ್ರಿಯತೆ ಹೊಂದಿದ್ದುದೇ ಅಲ್ಲದೆ ಎಲ್ಲಾ ಭಾರತೀಯ ಪ್ರಮುಖ ಭಾಷೆಗಳಿಗೂ ಅನುವಾದಗೊಂಡಿವೆ: ಇಂತಹ ಒಬ್ಬ ಮಹಾನ್‌ಲೇಖಕರ ಬಗ್ಗೆ ಅತ್ಯಂತ ಅಭಿಮಾನವನ್ನು ಬೆಳೆಸಿಕೊಂಡಿದ್ದ ಇನಾಂದಾರರಿಗೆ, ಅನುವಾದದ ಅವಕಾಶ ದೊರೆತದ್ದು, ಸಂಪೂರ್ಣವಾಗಿ ಆ ಮಹಾನ್ ಚೇತನದ ಮಹಾನ್ ವ್ಯಕ್ತಿತ್ವದ ಜೊತೆಗೆ ತನ್ಮಯತ್ವ ಬೆಳೆಸಿಕೊಳ್ಳಲು ಅಪೂರ್ವ ಅವಕಾಶವನ್ನು ದಕ್ಕಿಸಿಕೊಂಡಂತಾಗಿತ್ತು.

ಉಪಸಂಹಾರವೂ ಸೇರಿದಂತೆ ಆರು ಅಧ್ಯಾಯಗಳಲ್ಲಿ ಶರಚ್ಚಂದ್ರರ ಬದುಕು–ಬರಹದ ಸಮಗ್ರ ವಿವರಣೆಯಿದೆ. ಮೊದಲ ಭಾಗದಲ್ಲಿ ರವೀಂದ್ರನಾಥ ಠಾಕೂರ ಮತ್ತು ಶರಚ್ಚಂದ್ರರ ನಡುವಿನ ಸಾಮ್ಯ ವ್ಯತ್ಯಾಸಗಳನ್ನು, ಎತ್ತರ, ಗಾತ್ರ ಸ್ವರೂಪ–ಚೆಲುವು–ಸ್ವಭಾವ, ಮನೋಧರ್ಮಗಳನ್ನು ಅವರ ಬದುಕಿನ ಪರಿಸರ, ಸನ್ನಿವೇಶಗಳ

ವ್ಯತ್ಯಾಸಗಳನ್ನು ವಿವರಿಸಲಾಗಿದೆ ಠಾಕೂರರದು ಅಪಾರ ಶ್ರೀಮಂತಿಕೆಯ ಮನೆತನವಾದರೆ ಶರಚ್ಚಂದ್ರರದು ತೀರಾ ಬಡತನದ್ದು, ಗ್ರಾಮೀಣ ಪರಿಸರದಲ್ಲಿದ್ದು ಗ್ರಾಮ ಜೀವನವನ್ನೇ ಪ್ರೀತಿಸುತ್ತಿದ್ದವರು ಶರಚ್ಚಂದ್ರರು.

ಸಾಹಿತ್ಯ ವಿಷಯಕ್ಕೆ ಬಂದಾಗ ಇಬ್ಬರೂ ಓದುಗ ಸಮುದಾಯಕ್ಕಾಗಿ ಕಾಯಬೇಕಾಗಿ ಬಂತು, ಠಾಕೂರರು ಸಾವರಿಯದ ಸತ್ಯದ ಗುಣಗ್ರಹಣ, ನಿತ್ಯವಾದ ಭಾವೋತ್ಕರ್ಷ, ನಿತ್ಯವಾದ ನೋವು, ಭೂತ ಹಾಗೂ ವರ್ತಮಾನಗಳ ನಡುವೆ, ಹಾಗೆಯೇ ವರ್ತಮಾನ ಮತ್ತು ಭವಿಷ್ಯತ್‌ಗಳ ನಡುವೆ ಇರುವ ನಿಕಟ ಸಂಬಂಧದ ಅರಿವಿನೊಂದಿಗಿದ್ದರೆ ಶರಚ್ಚಂದ್ರರಿಗೆ ಸ್ಥಿರ ಸತ್ಯಗಳಿಗಿಂತ ಗತಿಶೀಲವಾದ ಸಮಸ್ಯೆಗಳೇ ಮುಖ್ಯವಾಗಿದ್ದವು. ಬದುಕು ಅವರಿಗೆ ಕೊನೆಯಿಲ್ಲದ ಶೋಧವಾಗಿತ್ತು, ಹೀಗಾಗಿ ಇಬ್ಬರಲ್ಲಿಯೂ ನಂಬಿಕೆ ಆದರ್ಶಗಳು, ದೃಷ್ಟಿಕೋನಗಳು ಹೇಗೆ ಭಿನ್ನವಾಗಿತ್ತೆಂಬುದನ್ನು ವಿವರಿಸಲಾಗಿದೆ ಎರಡನೇ ಅಧ್ಯಾಯ ಶರಚ್ಚಂದ್ರರ ಜನನ, ಬಾಲ್ಯ, ವಿದ್ಯಾಭ್ಯಾಸ, ಗುಣ, ಸ್ವಭಾವಗಳನ್ನು. ಅವರು ಹುಟ್ಟಿಬೆಳೆದ ಊರು, ಕೇರಿ, ಕುಟುಂಬದ ಪರಿಸರ, ಪರಿಸ್ಥಿತಿಗಳನ್ನು ವಿವರಿಸುತ್ತದೆ. ೧೮೭೬ ರ ಸೆಪ್ಟೆಂಬರ್ ೧೫ ರಂದು ಹೂಗಳಿ ಜಿಲ್ಲೆಯಲ್ಲಿನ ದೇವಾನಂದಪುರವೆಂಬ ಚಿಕ್ಕ ಹಳ್ಳಿಯಲ್ಲಿ ಜನಿಸಿದ. ತಂದೆ ಮತಿಲಾಲ್ ಚಟರ್ಜಿ ಬಡವನಾದರೂ ಉದಾರಿಯಾಗಿದ್ದ. ಇಂತಹ ತಂದೆಯ ಗುಣ, ಸ್ವಭಾವಗಳಿಂದ ಪ್ರಭಾವಿತರಾಗಿದ್ದವರು, ವಿದ್ಯಾಭ್ಯಾಸವನ್ನು ದೇವಾನಂದಪುರದ ಒಂದು ಸಾಮಾನ್ಯ ಪಾಠಶಾಲೆಯಲ್ಲಿ ಮುಗಿಸಿದರು. ಈ ಶಾಲೆಯಲ್ಲಿನ ಶರಚ್ಚಂದ್ರರ ಬಾಲ್ಯದ ಗೆಳೆಯರಿಬ್ಬರು ಇವರಿಗೆ ಆತ್ಮೀಯರಾಗಿದ್ದುದೇ ಅಲ್ಲದೆ ಮುಂದೆ ಇವರ ಕಾದಂಬರಿಗಳಲ್ಲಿ ಈ ಗೆಳೆಯರು ಪಾತ್ರಗಳಾಗಿ ಕಾಣಿಸಿಕೊಳ್ಳುತ್ತಾರೆ. ಆರಂಭಿಕ ವಿದ್ಯಾಭ್ಯಾಸ ದೇವಾನಂದಪುರದಲ್ಲಿಯೇ ಆಗಿದ್ದರೂ ಮುಂದಿನ ತಮ್ಮ ಬದುಕಿನ ಹೆಚ್ಚಿನ ಭಾಗವನ್ನು ಬಾಗಲ್‌ಪುರದಲ್ಲಿ ಕಳೆದರು. ಇಲ್ಲಿನ ವಾತಾವರಣ, ದೊಡ್ಡ ಕುಟುಂಬದಲ್ಲಿನ ಸೌಹಾರ್ದತೆ, ವೈವಿಧ್ಯತೆಗಳು ಅವರ ವ್ಯಕ್ತಿತ್ವದ ಬೆಳವಣಿಗೆಯನ್ನು ಪ್ರಭಾವಿಸಿದೆಯಾದರೂ, ಸಂಪ್ರದಾಯ ನಿಷ್ಠ ಕುಟುಂಬದ ನಡುವೆಯಿದ್ದೂ ಸಂಪ್ರದಾಯವನ್ನು ಮೀರಿ ಬೆಳೆಯುವ ಸಾಹಸ ಪ್ರವೃತ್ತಿಯೂ ಅವರಲ್ಲಿತ್ತು. ಇಂತಹ ಪ್ರವೃತ್ತಿ ಮುಂದೆ ತಮ್ಮ ಬದುಕನ್ನು ಸ್ವತಃ ಕಂಡುಕೊಳ್ಳುವಂತೆ ಪ್ರಚೋದಿಸಿದಾಗ, ಮನೆಯಿಂದ ಹೊರಬೀಳುತ್ತಾರೆ. ಕಾದಂಬರಿಗಳ ರಚನೆಗೆ ತೊಡಗುತ್ತಾರೆ. 'ಶ್ರೀಕಾಂತ ಕಾದಂಬರಿಯಿಂದ ಬರವಣಿಗೆ ಆರಂಭಿಸುವುದರ ಜೊತೆಗೆ ವಿದ್ಯಾಭ್ಯಾಸವನ್ನೂ ಮುಂದುವರಿಸಿದ್ದುದನ್ನು ತಂದೆಯ ಮೇಲಿನ ಬೇಸರದಿಂದಾಗಿ ಸಂನ್ಯಾಸಿಯಂತೆ ಅಲೆದಾಡಿದ್ದನ್ನು, ಅಲೆದಾಟದಿಂದ ಗಳಿಸಿದ ಅನುಭವಗಳಿಂದ, ಶ್ರೀಶಾಂತ, ಪಥೇರ್‌ದಾಬಿ, ಇತ್ಯಾದಿ ಕಾದಂಬರಿಗಳನ್ನು, ದೇವದಾಸ, ಬರಾದೀದಿ ಕಥೆಗಳನ್ನು

ರಚಿಸಿದ್ದನ್ನು, ಕಥಾನಕಗಳ ಸಂಕ್ಷಿಪ್ತ ವಿವರಗಳೊಂದಿಗೆ ವರ್ಣಿಸುತ್ತಾರೆ. ಹಾಗೆಯೇ ಧಾರ್ಮಿಕ, ಸಾಂಸ್ಕೃತಿಕ ಪರಿಸರಗಳಿಂದಾಗಿ ಉದ್ಭವಿಸಿದ ಪ್ರಶ್ನೆಗಳ ಮೂಲಕ ಧರ್ಮನಿಷ್ಠತೆಯ ವಿರುದ್ಧ ಪ್ರತಿಭಟನೆಗೆ ನಿಂತದ್ದನ್ನು ವಿವರಿಸುತ್ತಾರೆ. ಬಾಗಲ್‌ಪುರ್, ರಂಗೂನ್, ಕಲ್ಕತ್ತಾಗಳಲ್ಲಿನ ಅವರ ಬದುಕು ಅಲೆದಾಟ, ರೂಪಿಸಿಕೊಂಡ ಕ್ರಾಂತಿಕಾರಕ ಧೋರಣೆಗಳು ಸೃಜನಾತ್ಮಕ ಬರವಣಿಗೆಗಳಲ್ಲಿನ ಪಾತ್ರಗಳು, ಅವರ ಬದುಕಿನ ಅನುಭವದಲ್ಲಿ ಕಾಣಿಸಿಕೊಂಡಿದ್ದ ನೈಜ ವ್ಯಕ್ತಿಗಳಾಗಿರುವುದನ್ನು ಪ್ರಸ್ತಾಪಿಸಿ ವಿವರಿಸುತ್ತಾರೆ.

ಅಧ್ಯಾಯ ಮೂರರಲ್ಲಿ ಶರಚ್ಚಂದ್ರರು ಬರೆದ ಸಣ್ಣ ಕಥೆಗಳು, ನೀಳ್ಗತೆಗಳ ವಿವರಣೆ, ವಿಶ್ಲೇಷಣೆಗಳಿವೆ. ಉದಾಹರಣೆಗೆ: ಅವರ ಸಣ್ಣಕಥೆಗಳು ಭಾವಗೀತೆಗಳಂತಿದ್ದು, ಸಂಘರ್ಷಗಳನ್ನು ಚಿತ್ರಿಸುವುದಿಲ್ಲ, ಒಂದೊಂದರಲ್ಲಿಯೂ ಮುಖ್ಯ ವಿಷಯಕ್ಕೆ ಸಂಬಂಧಿಸಿದಂತೆ ಒಂದೆರಡು ಅಂಶಗಳನ್ನು ಮಾತ್ರವೇ ಚಿತ್ರಿಸುತ್ತಾರೆ ಎನ್ನುವ ಅಭಿಪ್ರಾಯವನ್ನು ಸೂಚಿಸುತ್ತಾರೆ. ಈ ಅಭಿಪ್ರಾಯಕ್ಕೆ ಸಮರ್ಥನೀಯವಾಗಿ 'ರಾಮೇರ್‌ಸುಮತಿ' ಬೈಕುಂಟೇರ್‌ಬಲ್' 'ಅರಕ್ಷಣೀಯಾ' ನಿಷ್ಕೃತಿ ಮುಂತಾದ ಕಥೆಗಳನ್ನು ವಿಶ್ಲೇಷಣೆಗೆ ಒಳಪಡಿಸುತ್ತಾ ಆ ಕಥೆಗಳ ಮೂಲಕವಾಗಿ ಸಾಮಾಜಿಕ ಸ್ವರೂಪ, ಸಂಪ್ರದಾಯದೊಳಗಿನ ಕಟ್ಟುನಿಟ್ಟುಗಳು, ಪಾಪ ಪ್ರಾಯಶ್ಚಿತ್ತ ಇತ್ಯಾದಿಗಳ ಜೊತೆ ಜೊತೆಗೆ, ಆಯಾಯಾ ಸನ್ನಿವೇಶ, ಸಂದರ್ಭಗಳಲ್ಲಿ ಅನಾವರಣಗೊಳ್ಳುವ ಪಾತ್ರಸ್ವಭಾವ, ಮನೋಧರ್ಮ, ಅವರ ನಿಷ್ಠೆ ನೇಮಗಳು, ಕೆಲವೊಮ್ಮೆ ಅವುಗಳ ವಿರುದ್ಧ ಪ್ರತಿಭಟಿಸುವ ಧೋರಣೆಗಳು, ಸಾಮಾಜಿಕ ಬಹಿಷ್ಕಾರಗಳು, ಸ್ತ್ರೀ ಸಂಬಂಧ ನಿಲುವುಗಳು, ಹೆಣ್ಣು–ಗಂಡುಗಳ ಮನೋವಿಕಾರಗಳು ಇವೆಲ್ಲವೂ ಮೃಣಾಲಿನಿ, 'ಅನುಪಮಾರ್ ಪ್ರೇಮ್ ಸ್ವಾಮಿ' 'ಬಿಲಾಶಿ' 'ಅಂಧಾರೆ ಆಲೋ' ಕಥೆಗಳ ಮೂಲಕ ವಿವರಿಸಲಾಗಿದೆ ಎನ್ನುವುದನ್ನು ಗುರುತಿಸುತ್ತಾರೆ.

ನಾಲ್ಕನೆ ಅಧ್ಯಾಯವಾದ 'ಸ್ತ್ರೀ ಹೃದಯ'ದಲ್ಲಿ ಶರಚ್ಚಂದ್ರರು ಹೆಣ್ಣು ಹೃದಯದಲ್ಲಿನ ಸಂಕೀರ್ಣ ಭಾವನೆಗಳನ್ನು ಅದರಲ್ಲಿಯೂ ಪ್ರೀತಿಯ ಭಾವ, ಅದನ್ನು ಪೂರ್ತಿಯಾಗಿ ಆವರಿಸಿಕೊಂಡಾಗ ಅಲ್ಲಿ ನಡೆಯುವ ತುಮುಲಗಳನ್ನು ಚಿತ್ರಿಸಿರುವ ಬಗೆಯನ್ನು ವಿವರಿಸಿದ್ದಾರೆ. ಸ್ತ್ರೀ ಕೇಂದ್ರಿತ ಕತೆಗಳ ಮೂಲಕ ಅವರು ಪ್ರೀತಿಯ ಹೃದಯದ, ಒಲವಿನ ವಿಶ್ಲೇಷಕರು ಎಂಬುದನ್ನು ತೋರಿಸಿದ್ದಾರೆ. 'ಪರಿಣೀತಾ' 'ಭವಿ' ಕತೆಗಳನ್ನು ಈ ಸಂದರ್ಭದಲ್ಲಿ ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಮುಂದೆ 'ದತ್ತಾ' 'ದೇವದಾಸ' ಕಾದಂಬರಿಗಳ ಚರ್ಚೆಯ ನಂತರ ಒಂದೊಂದಾಗಿ 'ಬಿರಾಜ್ ಚೌ' 'ಬರಾದೀದಿ' ಕಾದಂಬರಿಗಳ ವಿಸ್ತೃತ

ವಿಶ್ಲೇಷಣೆ ಚರಿತ್ರಹೀನ ಕಾದಂಬರಿಯ ಮೌಲಿಕತೆಗಳನ್ನು ಎತ್ತಿ ತೋರುವ ಪ್ರಯತ್ನ ಕಾಣಿಸುತ್ತದೆ. ಈ ವಿಶ್ಲೇಷಣೆ ವಿವರಣೆಗಳ ಜೊತೆ ಜೊತೆಗೇ ತಮ್ಮ ಅಭಿಪ್ರಾಯಗಳನ್ನೂ ಸೇನ್‌ಗುಪ್ತಾರವರು ಮಂಡಿಸುತ್ತಾರೆ ಎಂದು "ಶರಚ್ಚಂದ್ರರು ಬರೆದ ಕಾದಂಬರಿಗಳಲ್ಲಿ 'ಶ್ರೀಕಾಂತ' ಅವರ ಶ್ರೇಷ್ಠ ಕಾದಂಬರಿ ಅಲ್ಲದಿದ್ದರೂ ಅವರ ಅತ್ಯಂತ ಹೆಸರುವಾಸಿಯಾದ ಕೃತಿ ಮತ್ತು ಅನೇಕ ದೃಷ್ಟಿಗಳಿಂದ ಗಮನಾರ್ಹ ಕೃತಿಯಾಗಿದೆ" ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಮುಂದುವರೆದು 'ಅಸಂಖ್ಯ ಪಾತ್ರಗಳು, ಅಸಂಖ್ಯ ಘಟನೆಗಳು ಇತ್ಯಾದಿಯಾಗಿದ್ದರೂ ಒಟ್ಟು ಕೃತಿ ಒಂದು ರೂಪರಹಿತವಾದ ಮಿಶ್ರ ಸಮುದಾಯವಾಗದೆ ಒಮ್ಮುಖವಾದ ಪರಿಣಾಮವನ್ನು ಬೀರುವ ಸಾವಯವ ಅಂತಸ್ಸಂಬಂಧಗಳಿಂದ ಕೂಡಿದ ಒಂದು ಕಲಾಕೃತಿಯಾಗಿದೆ. ಒಂದು ಮಹಾಕಾವ್ಯದ ಗಾತ್ರವನ್ನು ಪಡೆದ ಈ ಬೃಹತ್ ಕಾದಂಬರಿಯ ಸಂಕೀರ್ಣ ಸಾಮರಸ್ಯ ಸಾಹಿತ್ಯ ಕಲೆಯ ಒಂದು ಸಾಧನೆ. ಈ ಸಾಮರಸ್ಯವನ್ನು ಇಲ್ಲಿ ಸಾಧಿಸಲಾಗಿದೆ" ಎಂದು ತೀರ್ಮಾನಿಕ ನಿಲುವಿನೊಂದಿಗೆ ಮೂರು ಭಾಗಗಳಲ್ಲಿರುವ ಈ ಬೃಹತ್ ಕಾದಂಬರಿಯನ್ನು ಅತ್ಯಂತ ಸಂಕ್ಷಿಪ್ತವಾಗಿ ಆದರೆ ಸಮಗ್ರತೆಯೊಂದಿಗೆ ಪರಿಚಯಿಸುವುದರ ಜೊತೆಗೆ ಅದರ ಮೌಲಿಕತೆಯ ಸ್ವರೂಪವನ್ನೂ ವಿವರಿಸಿ ತಿಳಿಸಿದ್ದಾರೆ.

ಐದನೆಯ ಅಧ್ಯಾಯದಲ್ಲಿ ಶರಚ್ಚಂದ್ರರು ತಮ್ಮ 'ಪಥೇರ್‌ದಾಬಿ' 'ಶೇಷಪ್ರಶ್ನೆ' ಕಾದಂಬರಿಗಳಲ್ಲಿ ವಸ್ತು, ಶೈಲಿ ಎರಡರಲ್ಲಿಯೂ ಭಿನ್ನತೆ ಮತ್ತು ವಿನೂತನೆಯನ್ನು ತಂದುದರ ಪರಿಣಾಮವಾಗಿ ಬಂಗಾಲಿ ಸಾಹಿತ್ಯವಲಯದಲ್ಲಿ ಸಂಚಲನ ಉಂಟಾದ ಪರಿಯನ್ನು ವಿವರಿಸಿದ್ದಾರೆ. ಕಥೆ ಮತ್ತು ಪಾತ್ರ ನಿರೂಪಣೆಗಿಂತ ಹೆಚ್ಚಾಗಿ ಸಮಸ್ಯೆಗಳ ಚರ್ಚೆ, ವೈಚಾರಿಕ ನಿಲುವುಗಳ ಅನಾವರಣದತ್ತ ಆಸಕ್ತರಾಗಿದ್ದುದನ್ನು ವಿಮರ್ಶಕರು ಗಮನಿಸಿದ್ದನ್ನು ವಿವರಿಸಿದ್ದಾರೆ. ಕಥೆಗಳಿಗಿಂತ ಕಾದಂಬರಿಗಳಲ್ಲಿ ವೈಚಾರಿಕ ಚರ್ಚೆಗಳು ಬಂದ ಮಾತ್ರಕ್ಕೆ ಮನುಷ್ಯನ ಅಂತರಂಗದ ಸತ್ವದರ್ಶನಕ್ಕೆ ಯಾವುದೇ ಕೊರತೆಯುಂಟಾಗುವುದಿಲ್ಲ. ಅಲ್ಲದೆ ಆಲೋಚನೆಯ ಕ್ರಮದಿಂದ ಆತ್ಮಪ್ರಕಾಶ ಸಾಧ್ಯವಾಗುತ್ತದೆ ಎಂಬ ಶರಚ್ಚಂದ್ರರ ಮೌಲಿಕವಾದ ಅಭಿಪ್ರಾಯಗಳನ್ನು ತಮ್ಮ ಮತ್ತು ಇತರ ಕಾದಂಬರಿಕಾರರ ಕೃತಿಗಳ ಹಿನ್ನೆಲೆಯಲ್ಲಿ ಹೇಳಿರುವುದನ್ನೂ ಪ್ರಸ್ತಾಪಿಸಿದ್ದಾರೆ, ಉದಾಹರಣೆಗೆ 'ಕಲೆ ಸಮಸ್ಯೆಗಳನ್ನು ಕುರಿತದ್ದಾಗಿರಬಾರದು' ಎನ್ನುವ ಟೀಕೆಗೆ ಶರಚ್ಚಂದ್ರರು ಉತ್ತರವಾಗಿ 'ಪ್ರತಿಯೊಂದು ಕಾದಂಬರಿಯಲ್ಲಿ ಕಥಾರಚನೆಯ ಸಮಸ್ಯೆಯೊಂದಲ್ಲದೆ ಬೇರೆಯಾದ ಸಮಸ್ಯೆಗಳು, ಅಂದರೆ ಬುದ್ಧಿಗೆ, ಭಾವನೆಗಳಿಗೆ ಸಾಮಾಜಿಕ ವಿಚಾರಗಳಿಗೆ ಸಂಬಂಧಿಸಿದ ಸಮಸ್ಯೆಗಳು ಇರಬಹುದು' ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿ ಪ್ರತಿಕ್ರಿಯೆ ತೋರಿದ್ದನ್ನು ಪ್ರಸ್ತಾಪಿಸಿದ್ದಾರೆ. ಹೀಗಾಗಿ ಶರಚ್ಚಂದ್ರರು ಕಾದಂಬರಿ ರಚನೆಯಲ್ಲಿ ತಂದ

ಬದಲಾವಣೆ ಸಾಹಿತ್ಯ ಜಗತ್ತಿನಲ್ಲಿ ಸಾಕಷ್ಟು ಚರ್ಚೆ, ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡದ್ದನ್ನು ದೀರ್ಘವಾಗಿ ವಿವರಿಸಿದ್ದಾರೆ. ಇದಕ್ಕೆ ಪೂರಕವಾಗಿ 'ಪಥೇರ್‌ದಾಬಿ' ಕಾದಂಬರಿಯ ವಸ್ತು, ಪಾತ್ರ, ಸಂವಿಧಾನ, ನಿರೂಪಣೆಯ ಶೈಲಿ ಕುರಿತಂತೆ ದೀರ್ಘವಾದ ವಿಶ್ಲೇಷಣೆಯನ್ನೂ ಮಾಡಿದ್ದಾರೆ. ಈ ಕಾದಂಬರಿಯಲ್ಲಿ ಬರುವ ವಿಭಿನ್ನ ಸಮಸ್ಯೆಗಳ ಸ್ವರೂಪ ಅವುಗಳು ಕಾದಂಬರಿಯ ಚೌಕಟ್ಟಿನಲ್ಲಿ ಎಷ್ಟರಮಟ್ಟಿಗೆ ಸಾರ್ಥಕವಾಗಿ ಮೂಡಿ ಬಂದಿದೆ ಎನ್ನುವುದನ್ನೂ ಯಾವುದೇ ಪೂರ್ವಗ್ರಹಗಳಿಲ್ಲದೆ ಚರ್ಚಿಸಿದ್ದಾರೆ. ಜೊತೆಗೆ 'ಶೇಷಪ್ರಶ್ನೆ' ಕಾದಂಬರಿ ಬಗ್ಗೆಯೂ ಸಾಕಷ್ಟು ವಿಶದವಾದ ವಿಶ್ಲೇಷಣೆಯನ್ನು ಮಾಡಿದ್ದಾರೆ. ಈ ಎರಡೂ ಕಾದಂಬರಿಗಳ ವಿಶ್ಲೇಷಣೆಯ ಕೊನೆಯಲ್ಲಿ, ಅವೆರಡೂ ಹೊಸ ಬಗೆಯ ಕಥಾಸೃಷ್ಟಿಯಲ್ಲಿ ಗಮನಾರ್ಹವಾದ ಪ್ರಯತ್ನಗಳಾಗಿವೆ ಎನ್ನುವ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಕಡೆಯ ಭಾಗ ಅಥವಾ ಅಧ್ಯಾಯವಾದ 'ಉಪಸಂಹಾರ'ದಲ್ಲಿ ಶರಚ್ಚಂದ್ರರ ಕಲೆಯ ಗಮನಾರ್ಹವಾದ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ಆದರೆ ಸಮಗ್ರವಾಗಿ ಗುರುತಿಸುತ್ತಾರೆ. ಅವರ ಕೃತಿಗಳಲ್ಲಿ ಕಾಣುವ ಸ್ವಂತ ಅನುಭವದ ಮೂಲಕವೇ ದಕ್ಕಿಸಿಕೊಂಡ ಗ್ರಾಮಾಂತರ 'ಜೀವನ ವಿವರಣೆ, ಮನುಷ್ಯನ ಸುಖ ದುಃಖಗಳ ವಿವರಣೆ, ತಾವು ಕಂಡ ತಮ್ಮ ಪರಿಸರದ, ಪರಿಚಿತ ವ್ಯಕ್ತಿಗಳ ವಾಸ್ತವ ವ್ಯಕ್ತಿತ್ವಗಳನ್ನು ಬಿಂಬಿಸುವ ಪಾತ್ರಸೃಷ್ಟಿ, ಸಾಮಾನ್ಯತೆಯಲ್ಲಿ ಅಸಾಮಾನ್ಯತೆಯ ಸಾಧ್ಯತೆಗಳನ್ನು ಕಾಣಿಸುವ ಪರಿ, ಗಂಭೀರ ಸಮಸ್ಯೆಗಳ ಪರಿಣಾಮಕಾರಿ ಚಿತ್ರಣದಂತೆಯೇ ಹಾಸ್ಯ ಪಾತ್ರಗಳನ್ನೂ ತರುವ ಸಾಮರ್ಥ್ಯ, ಭಾವನೆಗಳ ನಯನಾಜೂಕಿನ ಪರಿಯಲ್ಲಿ ವಿಶೇಷತೆ – ವಾಸ್ತವವಾಗಿ ಜೀವನದೃಷ್ಟಿ, ನಿರೂಪಣೆಯಲ್ಲಿನ ತಾದಾತ್ಮ್ಯ ಹಾಗೂ ನಿರ್ಲಿಪ್ತತೆ – ಇತ್ಯಾದಿ ಅಂಶಗಳನ್ನು ಮತ್ತೊಮ್ಮೆ ಕ್ರೋಢೀಕರಿಸಿ ಶರಚ್ಚಂದ್ರರ ಕಲೆಯ ಸಮಗ್ರ ನೋಟವೊಂದನ್ನು ಅತ್ಯಂತ ಸಮರ್ಥವಾಗಿ ನೀಡುವ ಇಂತಹ ಒಂದು ಮೌಲಿಕ ಕೃತಿಯನ್ನು, ಶರಚ್ಚಂದ್ರರ ಬದುಕು ಬರಹದ ವಿಭಿನ್ನ ಆಯಾಮಗಳನ್ನು ದಾಖಲಿಸಿದ ಆಂಗ್ಲ ಕೃತಿಯನ್ನು, ಆಂಗ್ಲ ಪ್ರಾಧ್ಯಾಪಕರೇ ಆಗಿರುವ ಇನಾಂದಾರರು ಆಂಗ್ಲ, ಕನ್ನಡ ಭಾಷೆಗಳೆರಡರಲ್ಲಿಯೂ ಅದ್ವಿತೀಯ ಪಾಂಡಿತ್ಯ ಮತ್ತು ಭಾಷೆಗಳ ಮೇಲಿನ ಹಿಡಿತದಿಂದಾಗಿ ಎಲ್ಲಿಯೂ ಯಾವುದೇ ಬಗೆಯ ಕ್ಲೀಷೆಗಾಗಲೀ, ಕ್ಲಿಷ್ಟತೆಗಾಗಲೀ ಎಡೆಯಿಲ್ಲದಂತೆ ಅತ್ಯಂತ ಸುಲಲಿತವಾಗಿ ಓದಿಸಿಕೊಳ್ಳುವಂತೆ ಅನುವಾದಿಸಿ, ಕನ್ನಡ ಓದುಗರಿಗೆ ಉಪಕರಿಸಿದ್ದಾರೆ. ■

# ಶಿವರಾಮ ಕಾರಂತ – ಬದುಕು ಬರಹ

ಇನಾಂದಾರರು ಶಿವರಾಮ ಕಾರಂತರ ಸಮಗ್ರ ವ್ಯಕ್ತಿತ್ವವನ್ನು, ಅವರ ಬರಹಗಳ ವ್ಯಾಪ್ತಿ, ವೈಶಾಲ್ಯತೆಗಳನ್ನು ತಮ್ಮ ಸೂಕ್ಷ್ಮ ವಿಮರ್ಶನ ಪ್ರಜ್ಞೆಯ ಮೂಲಕ, ವಿಸ್ತೃತ ಅಧ್ಯಯನದ ಮೂಲಕ 'ಆನೆ ನಡೆದದ್ದೇ ದಾರಿ' ಎಂದು ತಮ್ಮ ಸ್ವತಂತ್ರ ನಿಲುವು ಧೋರಣೆಗಳಿಗೆ ಬದ್ಧವಾಗಿ ಬರೆಯುತ್ತಿದ್ದ ಕಾರಂತರಂತಹ ವ್ಯಕ್ತಿಯ ವ್ಯಕ್ತಿತ್ವವನ್ನು ಅವರ ಬರಹಗಳ ವೈಶಿಷ್ಟತೆಯನ್ನು ಸಮರ್ಥವಾಗಿ ಕಟ್ಟಿಕೊಡುವ  ಕಾರಂತರ ಬದುಕು ಬರಹ ಕೃತಿ ಕುರಿತು ಗೌರೀಶ್ ಕಾಯ್ಕಿಣಿ ಮುಕ್ತವಾಗಿ ಮೆಚ್ಚಿಕೊಂಡು ಇನಾಂದಾರರ ಬಗ್ಗೆ ಈ ರೀತಿ ಬರೆಯುತ್ತಾರೆ: ಮೊದಲಿಗೆ ಇದನ್ನು ಐತಿಹಾಸಿಕ ಮಹತ್ವದ ಕೃತಿ ಎಂದು ಕೊಂಡಾಡಿದ್ದೇ ಅಲ್ಲದೆ, ತಾವೇ ಸ್ವತಃ ಸಾಹಿತಿಯಾಗಿ, ಮತ್ತೊಬ್ಬ ಸಾಹಿತಿಯ ಬಗ್ಗೆ ಬರೆಯುವುದೇ ಕುತೂಹಲದ ಸಂಗತಿ. ಜೊತೆಗೆ ಬರೆಯುತ್ತಿರುವ ಲೇಖಕನ ಬಗ್ಗೆ ಅಪಾರ ಗೌರವವಿರಿಸಿಕೊಂಡೂ ನಿಷ್ಪಕ್ಷಪಾತವಾದ ವಿಮರ್ಶೆಯ ದೃಷ್ಟಿಯೊಂದಿಗೆ ಬರೆಯುವ ಪರಿಯನ್ನೂ ಮೆಚ್ಚಿಕೊಂಡು, ಕೃತಿಯಲ್ಲಿ ಇನಾಂದಾರರ ಬರವಣಿಗೆಯನ್ನು ಈ ರೀತಿ ಮೆಚ್ಚಿ ನುಡಿದಿದ್ದಾರೆ. 'ಈ ಬದುಕು–ಬರಹದಲ್ಲಿ ಲೇಖಕರ ಸ್ವಾಭಾವಿಕ ಧೀಮಂತಿಕೆಯೊಂದಿಗೆ ಸ್ವಾಯತ್ತ ಪ್ರಗಲ್ಭ ಶೈಲಿಯ ಶ್ರೀಮಂತಿಕೆಯೂ ಕೂಡಿದೆ. ಲೇಖನವು concise ಇದ್ದಷ್ಟು preicise ಆಗಿದೆ. ಅದಕ್ಕೆ ಬೊಜ್ಜಿಲ್ಲದ ಸ್ನಾಯು ಬಲವಿದೆ. ಯಾವ ವಾಕ್ಯವೃಂದವನ್ನೇ ತೆಗೆದುಕೊಳ್ಳಿ, ಅದು ಸುಸ್ಪಷ್ಟ, ಅಷ್ಟೇ ನಿರ್ದುಷ್ಟ. ಈ ಪುಟ್ಟ ಆದರೂ ಗಟ್ಟಿಮುಟ್ಟಾದ ಚರಿತ್ರೆಯನ್ನು ಓದುತ್ತಾ ಹೋದಂತೆ ಡಾ. ಶಿವರಾಮ ಕಾರಂತರ ಧೀರೋದಾತ್ತ ಕಾರ್ಯೋನ್ನತ ವ್ಯಕ್ತಿತ್ವದ ಭವ್ಯ ದರ್ಶನವಾಗುವುದರ ಜೊತೆಗೇ ಈ ರಚನೆಯನ್ನು ತನ್ನ ಅಂಗೈಯ ಕನ್ನಡಿಯಲ್ಲಿ ಸೆರೆ ಹಿಡಿದ ಪ್ರೊ. ಇನಾಂದಾರರ ಸೂಕ್ಷ್ಮದರ್ಶಿಯೂ ತಲಸ್ಪರ್ಶಿಯೂ ಆದ ಪ್ರಬಂಧದ ಪ್ರಾಜ್ಞತೆಯ ಮನವರಿಕೆಯೂ ನಮಗೆ ಅಷ್ಟೇ ಚೆನ್ನಾಗಿ ಅಗುತ್ತದೆ" ಎಂದು.

ಇಂತಹ ಮೆಚ್ಚುಗೆಗೆ ಪಾತ್ರವಾದ ಕೃತಿಯನ್ನು ರಚಿಸುವಾಗ, ಕಾರಂತರ ಅಪಾರ ಸಾಹಿತ್ಯ ರಾಶಿಯಲ್ಲಿ ಯಾವುದೂ ಕೈಬಿಟ್ಟು ಹೋಗಬಾರದೆಂದು ಮೊದಲಿಗೆ ಅವರ ಕೃತಿಗಳನ್ನು ಕೆಳಕಂಡಂತೆ ವರ್ಗೀಕರಿಸಿಕೊಂಡಿದ್ದಾರೆ.

೧. ಸಮಾಜ ಜೀವನ ವಿಮರ್ಶೆಯನ್ನೇ ಮುಖ್ಯವಾಗಿಸಿಕೊಂಡವು.

೨. ಬದುಕಿನ ಹೋರಾಟ ಸೋಲು – ಗೆಲುವು ಭೌತಿಕವೋ ಸಾಮಜಿಕವೋ ಆದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದರಲ್ಲಿ ಸಾಮಾನ್ಯನೆಂಬವನೂ ಮೆರೆಯಬಹುದಾದ ಉದಾತ್ತ ಸತ್ವದ ಚಿತ್ರಣವುಳ್ಳವುಗಳು.

೩. ಬದುಕನ್ನು ಆಳವಾಗಿ ಪರಿಶೋಧಿಸುತ್ತ ಹೋದ ಹಾಗೆ ಯಾವುದು ದೊಡ್ಡದು, ಯಾವುದನ್ನು ನೆಚ್ಚಿ ನಂಬಿ ನಡೆದುಕೊಂಡಾಗ ಬದುಕು ಸಫಲತೆಯ ಭಾವ ಪಡೆಯಬಹುದು, ಮನುಷ್ಯ ಮನುಷ್ಯನಾಗಿ ಬಾಳಲಿಕ್ಕೆ ಯಾವುದು ಆಧಾರ ಎಂಬುದರ ಅನ್ವೇಷಣೆಯವು.

೪. ಮನುಷ್ಯ ಜೀವನ ಸುಲಭ ಸಂಗತಿಯಲ್ಲ. ಅದರ ಅರ್ಥ ಸಮಾಜಗ್ರಾಹಿ ಅಲ್ಲ. ಅದರ ಜಟಿಲತೆಯೇ ಅದರ ರಹಸ್ಯದ ಮೂಲ – ಎಂಬುದನ್ನು ಬಿಂಬಿಸುವಂತಹವು.

೫. ಬದುಕಿನಲ್ಲಿ ಒಳ್ಳೆಯದಿದ್ದಷ್ಟೂ ಕೆಡುಕೂ ಇದೆ. ತಾಳ್ಮೆ ತಿಳಿವಳಿಕೆಗಳಿಂದ ಎರಡನ್ನೂ ಅಂಗೀಕರಿಸಬೇಕು. ಯಾವುದನ್ನೂ ಲಘುವಾಗಿ ಕಾಣಲಾಗುವುದಿಲ್ಲ ಎಂಬ ದೃಷ್ಟಿವೈಶಾಲ್ಯದವು.

ಹೀಗೆ ವಿಂಗಡಿಸಿಕೊಂಡಿದ್ದರೂ, ಈ ವರ್ಗೀಕರಣಕ್ಕೇ ಕಟ್ಟುಬೀಳದೆ ಇರುವಂತಹ ಕಾದಂಬರಿಗಳೂ ಇರಬಹುದು. ಕೆಲವು ಕಾದಂಬರಿಗಳು ಮೇಲೆ ಸೂಚಿಸಿದ ವರ್ಗೀಕರಣದ ಒಂದೆರಡು ಅಂಶಗಳನ್ನೋ ಅದಕ್ಕಿಂತ ಹೆಚ್ಚಿನವುಗಳನ್ನೊ ಹೊಂದಿರಲೂಬಹುದು. ಆದರೂ ಇನಾಂದಾರರು ಮರಳಿ ಮಣ್ಣಿಗೆ, ಕರುಳಿನ ಕರೆ, ಬೆಟ್ಟದ ಜೀವ, ನಂಬಿದವರ ನಾಕ–ನರಕ ಇತ್ಯಾದಿ ಕೃತಿಗಳನ್ನು ಅತ್ಯಂತ ಹೃದ್ಯವಾದ ರೀತಿಯಲ್ಲಿ ಸಮೀಕ್ಷೆಗೆ ಒಳಪಡಿಸಿದ್ದಾರೆ. ಮೂರು ತಲೆಮಾರುಗಳ ಜೀವನಾವಲೋಕನವನ್ನು ಒಳಗೊಂಡ ಮರಳಿ ಮಣ್ಣಿಗೆ ಧರ್ಮರಾಯನ ಸಂಸಾರ – ಇವೆರಡನ್ನೂ ಅತ್ಯಂತ ಮಹತ್ವದ ಮತ್ತು ಶಿಖರ ಪ್ರಾಯ ಕೃತಿಗಳೆಂಬ ನಿಲುವನ್ನು ತಲುಪುತ್ತಾರೆ.

ಮೂವತ್ತರ ದಶಕದಿಂದ ರಚನೆಗೊಂಡ ಕಾದಂಬರಿಗಳೆಲ್ಲದರ ಸಮೀಕ್ಷೆ ಮಾಡುತ್ತಾ ಕೆಲವನ್ನು ಕುರಿತು ತೀರ್ಮಾನಿಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಮೊದಲ ಕಾದಂಬರಿಗಳಲ್ಲಿ ಜೀವನ ದರ್ಶನದ ಕೊರತೆ ಇರುವುದನ್ನು ಗುರುತಿಸುತ್ತಾರೆ ಹಾಗೆಯೇ ಕೆಲವು ಕಾದಂಬರಿಗಳಲ್ಲಿ ಕಾಣಸಿಗುವ ಮೌಲಿಕ ಅಂಶಗಳನ್ನು ಎತ್ತಿ ತೋರಿಸುತ್ತಾರೆ. 'ಚೋಮನದುಡಿ' ಕಾದಂಬರಿಯಲ್ಲಿ ದುಡಿಯ ದನಿ ದಲಿತರ ನಿರಾಶೆಯ ದನಿಯಂತೆ ಎಲ್ಲೆಲ್ಲೂ ಮೊಳಗುತ್ತದೆ ಎನ್ನುವುದನ್ನು

ಮತ್ತು 'ಗೊಂಡಾರಣ್ಯ'ದಲ್ಲಿ ಸತ್ಯದ ವೈಚಿತ್ರ್ಯವನ್ನು ಎತ್ತಿ ತೋರಿಸುತ್ತಾರೆ. ಅದೇ ರೀತಿ ಮರಳಿ ಮಣ್ಣಿಗೆ, ಬೆಟ್ಟದ ಜೀವ, ಮುಗಿಯದ ಯುದ್ಧ, ಔದಾರ್ಯದ ಉರುಳಲ್ಲಿಗಳಲ್ಲಿ ಬದುಕಿನ ಕ್ರೂರ ಹೋರಾಟ ಪ್ರಧಾನವಾಗಿ ಚಿತ್ರಿತವಾಗಿರುವುದನ್ನು ಗುರುತಿಸುತ್ತಾರೆ.

ಮುಂದಿನ ಕೆಲವು ಕಾದಂಬರಿಗಳಲ್ಲಿ ಪ್ರೀತಿಯ ಮುಖಗಳನ್ನು ತೋರಿಸುತ್ತಲೇ ಪ್ರೀತಿ ತಂದೊಡ್ಡುವ ಕಷ್ಟಗಳನ್ನು ಅದೂ ಪ್ರೀತಿಯನ್ನು ಪಡೆದೂ ಪ್ರೀತಿಯನ್ನು ತಿಳಿಯದವರು ತಂದೊಡ್ಡುವ ಕಷ್ಟಗಳ ಕಥೆಗಳನ್ನು ಚಿತ್ರಿಸುವುದನ್ನು ವಿವರಿಸುತ್ತಾರೆ. ಇದಕ್ಕೆ ಉದಾಹರಣೆಯಾಗಿ ಕರುಳಿನ ಕರೆ, ಬತ್ತದ ತೊರೆ ಕಾದಂಬರಿಗಳನ್ನು ವಿಶ್ಲೇಷಿಸುತ್ತಾರೆ. ತಾಯ್ತನ ದೊಡ್ಡದೆಂಬುದನ್ನು ಗುರುತಿಸಿ, ಹೆಣ್ಣು ಜೀವಗಳ ಹೃದಯದಲ್ಲಿಯ ಇಂಥ ಅಗಾಧ ಸಾಮರ್ಥ್ಯ ತನ್ನನ್ನು ಮರೆತು ಇತರರಿಗಾಗಿಯೇ ಬದುಕುವಂತೆ ಮಾಡುವ ಅನಿರ್ವಚನೀಯವಾದ ಸೆಳೆತವೇ ಮನುಷ್ಯನ ಬಾಳನ್ನು ಸೌಹರ್ದಯುತವಾಗಿ ಬೆಸೆದು ನಿಲ್ಲಿಸುವ ಶಕ್ತಿ. ಕೊಡಕೊಳ್ಳುವ ಇಬ್ಬರನ್ನೂ ಧನ್ಯವಾಗಿಸುವ ಹೃದಯ ವಾತ್ಸಲ್ಯವೇ ಜೀವನಾಧಾರವೆಂಬ ಸತ್ಯ ಈ ಕಾದಂಬರಿಗಳಲ್ಲಿ ಸಾಕ್ಷಾತ್ಕರಿಸುತ್ತದೆ' ಎಂಬ ಅಭಿಪ್ರಾಯಕ್ಕೆ ಬರುತ್ತಾರೆ.

ಮನುಷ್ಯನ ಆಕಾಂಕ್ಷೆ, ಆದರ್ಶಗಳ, ಕಂಡ ಕನಸುಗಳ, ಅವು ಪ್ರೇರಿಸುವ ಪ್ರಯತ್ನಗಳ ಕುರಿತಾದ ಚಿತ್ರಣವುಳ್ಳ ಮೊಗ ಪಡೆದ ಮನ, ಚಿಗುರಿದ ಕನಸು, ಸ್ವಪ್ನದ ಹೊಳೆ, ಕಾದಂಬರಿಗಳ ಸಮೀಕ್ಷೆಯಲ್ಲಿ, ಕಾರಂತರಿಗೆ ಇರಬಹುದಾದ ಮುಂಗಾಣಬಲ್ಲ ಕಲ್ಪನಾ ಸಾಮರ್ಥ್ಯವನ್ನು ಇನಾಂದಾರರು ಗುರುತಿಸುತ್ತಾರೆ. ನಂಬಿದವರ ನಾಕ–ನರಕ, 'ಶನೀಶ್ವರನ ನೆರಳಲ್ಲಿ ಮೊದಲಾದವುಗಳಲ್ಲಿ ಕಾಣುವ, ಬಾಳಿನಲ್ಲಿ ಬೇರು ಬಿಟ್ಟು ನಿಂತ ನಂಬಿಕೆಗಳು, ಮನುಷ್ಯನ ನಡತೆಯನ್ನು ನಿಯಂತ್ರಿಸುವ ಶಕ್ತಿಗಳು, ಮಾನಸಿಕ ರಕ್ಷಣೆಯನ್ನೂ ನೀಡುವ ಮತ್ತು ಬದುಕಿನ ದುಡಿಮೆಗೆ ಚಾಲನೆಯನ್ನು ನೀಡುವ ಸಾಮರ್ಥ್ಯ ಹೊಂದಿರುವುದನ್ನು ಗಮನಿಸುತ್ತಾರೆ ಹಾಗೆಯೇ 'ಮೂಕಜ್ಜಿಯ ಕನಸುಗಳು' ಕಾದಂಬರಿಯನ್ನು ಸಮೀಕ್ಷೆಗೆ ಒಳಪಡಿಸಿ, ಕಾರಂತರು ಆಕೆಯನ್ನು ಪ್ರವಾದಿ ಎಂದು ಕರೆದದ್ದರ ಔಚಿತ್ಯವನ್ನು ಕುರಿತು ಆಲೋಚಿಸುತ್ತಾರೆ. ಇನಾಂದಾರರ ದೃಷ್ಟಿಯಲ್ಲಿ ಆಕೆ ಬರಿಯ ಭೂತಕಾಲವನ್ನಷ್ಟೆ ಅಂತಃಚಕ್ಷುವಿನಿಂದ ಬಣ್ಣಿಸುತ್ತಾಳೆಯೇ ಹೊರತು ಭವಿಷ್ಯದ ಬಗ್ಗೆ ಏನನ್ನೂ ಹೇಳುವುದಿಲ್ಲವಾಗಿ 'ಪ್ರವಾದಿ' ಎನ್ನುವುದು ಸಮಂಜಸವಲ್ಲ ಎಂದು ಟೀಕಿಸುತ್ತಾರೆ. ಮೂಕಜ್ಜಿಯ ಕನಸು ಕನಸಲ್ಲ. ಅದು ಹಗಲುಗನಸೂ ಅಲ್ಲ, ನಿದ್ದೆ ಮಂಪರುಗಳ ಭಾಸವಲ್ಲ, ಅದೊಂದು ಕನಸು; (vision) ಪೂರ್ತಿ ಜಾಗೃತಿಯಲ್ಲಿ ಹೇಗೋ, ಅವಳಿಗೆ ಪ್ರಾಚೀನವೂ ಕಣ್ಣು ಕಟ್ಟಿ ನಿಲ್ಲುತ್ತದೆ –

ಎನ್ನುವುದು ಇವರ ಅಭಿಪ್ರಾಯ. ಅಲ್ಲದೆ ಇದಕ್ಕೆ ಮತ್ತೂ ಒಂದು ಅಭಿಪ್ರಾಯ ನೀಡುತ್ತಾರೆ. "ಪಾತ್ರ ಕಲ್ಪನೆ ಸಂಭಾವ್ಯವೇ ಆಗಲಿ, ಸಾಂಕೇತಿಕವೇ ಆಗಲಿ ಅದು ಜೀವನವನ್ನು ಕಾಣುವ ಒಂದು ದೃಷ್ಟಿಯನ್ನು ಪ್ರತಿನಿಧಿಸುತ್ತದೆ. ಇಂದಿನ ಒಂದು ಕ್ಷಣದ ಅನುಭವದಲ್ಲಿ ಮನುಷ್ಯ ಜೀವನದ ಒಂದು ಶತಮಾನದ ಚರಿತ್ರೆ ಅಡಗಿಕೊಂಡಿರುತ್ತದೆ – ಎಂಬ ಸತ್ಯವನ್ನು ಗುರುತಿಸದೆ ಸೃಷ್ಟಿ, ಸ್ಥಿತಿ, ಲಯಗಳ ಕುರಿತು ನಾವು ರೂಪಿಸಿಕೊಳ್ಳಬಹುದಾದ ಯಾವ ತೀರ್ಮಾನವೂ ಕೊನೆಯದಾಗದು" ಎಂದು ತಮ್ಮ ಸ್ಪಷ್ಟ ನಿಲುವನ್ನು ಬಿಂಬಿಸುತ್ತಾರೆ.

ಒಟ್ಟಾರೆಯಾಗಿ ಅತ್ಯಂತ ಕಿರು ಕೃತಿಯಲ್ಲಿ ಕಾರಂತರ ವಿರಾಟ್ ದರ್ಶನವನ್ನು ಮಾಡಿಸುವ ಸವಾಲಿಗೆ ಎದೆಯೊಡ್ಡಿ ನಿಂತು ಸಮರ್ಥವಾಗಿ ನಿರ್ವಹಿಸಿದ್ದಾರೆ.

ಕಾರಂತರಿಗೆ ಕಾದಂಬರಿಗಳು ಜೀವನ ಸ್ವರೂಪದ ಶೋಧಕ್ಕೆ ದಕ್ಕಿದ ಸಾಧನಗಳೆಂದೂ, ಪಾತ್ರಗಳ ಸ್ವಭಾವದ ಅನಾವರಣಕ್ಕೆ ಅವು ವ್ಯವಹರಿಸುವ ಹಿನ್ನೆಲೆಯ ನಿಚ್ಚಳ ಚಿತ್ರಣವನ್ನು ನೀಡುತ್ತಾರೆಂದೂ, ಜೊತೆಗೆ ಬುದ್ಧಿನಿಷ್ಠವಾದ ದೃಷ್ಟಿ, ತೀಕ್ಷ್ಣವಾದ ಭಾವ ಸಂವೇದನೆಯ ಶಕ್ತಿ, ಅನುಭವ ಜನ್ಯವಾದ ಮಾನವೀಯ ಸಹಾನುಭೂತಿಗಳಿಂದ ಮುಪ್ಪರಿಗೊಂಡ ಬರವಣಿಗೆಯಾದ್ದರಿಂದ ಪರಿಣಾಮಕಾರಿಯಾದ ಕಲಾಸೃಷ್ಟಿಯ ರೂಪದಲ್ಲಿ ಕಾದಂಬರಿಗಳು ಯಶಸ್ವಿಯಾಗಿ ಜನ್ಮ ಪಡೆಯುತ್ತವೆಂಬುದನ್ನು ಗುರುತಿಸುತ್ತಾರೆ.

ಕಾರಂತರ ಕಾದಂಬರಿಗಳ ಬಗ್ಗೆ ಇಷ್ಟೆಲ್ಲವನ್ನೂ ಹೇಳಿದ ಮಾತ್ರಕ್ಕೆ ಅವರ ಸಮಾಗ್ರ ಬರಹದ ವಿವರ ಕೊಟ್ಟಂತಾಗುವುದಿಲ್ಲ. ಸೃಜನಶೀಲ – ಸೃಜನೇತರ ಸಾಹಿತ್ಯ ಅಪಾರವಾಗಿದೆ. ಕೇವಲ ೧೨೮ ಪುಟಗಳಲ್ಲಿ ಕಾರಂತರ ಬದುಕು ಬರಹವನ್ನು ಅಡಕಗೊಳಿಸಿ ಒಂದು ಪವಾಡವೆನ್ನುವಂತೆ ಮಾಡಿದ್ದಾರೆ. ಇಷ್ಟನ್ನೂ ಹದಿನೈದು ದಿನಗಳಲ್ಲಿ ಪೂರೈಸಿ ಮತ್ತೊಂದು ಸಾಹಸವನ್ನು ಮಾಡಿದ್ದಾರೆ. ಬರಹವೇ ಆನೆಯಷ್ಟು ಇರುವಾಗಅವರ ವ್ಯಕ್ತಿತ್ವದ ಬಹುಮುಖಗಳನ್ನು ಪರಿಚಯಿಸುವುದಕ್ಕೆ ನೂರಾರು ಪುಟಗಳೇ ಬೇಕಾಗಿರುವಾಗ ಇನಾಂದಾರರು ಕೇವಲ ಒಂದು ಪರಿಚ್ಛೇದದ ಅಡಿಯಲ್ಲಿ ಎರಡು ಮೂರು ಪುಟಗಳಿಗಷ್ಟೇ ಅವರ ವ್ಯಕ್ತಿತ್ವವನ್ನು ಸೀಮಿತಗೊಳಿಸಿದ್ದಾರೆ. ಕಾರಂತರ ಅಂತರಂಗ–ಬಹಿರಂಗಗಳ ಅನಾವರಣ–ಆತ್ಮೀಯವಾದ ಮನೋಧರ್ಮ, ಸರಳ–ಸಹೃದಯತೆಗಳ ಪರಿಚಯ ಅವರ ಗ್ರಂಥಾಭಿರುಚಿ, ಜ್ಞಾನ ಜಿಜ್ಞಾಸೆ, ಸಾಮಾಜಿಕ ಪ್ರಜ್ಞೆ ಇತ್ಯಾದಿಗಳ ಸೂಕ್ಷ್ಮ ವಿವರವಿದೆ. ಸಾಹಿತ್ಯ ಕೃತಿಗಳ ಚರ್ಚೆಗೆ ಎಂಟು ಪರಿಚ್ಛೇದಗಳನ್ನು (ಸುಮಾರು ೭೫ ಪುಟಗಳಷ್ಟು) ಮೀಸಲಿರಿಸಿದ್ದಾರೆ. ಇಲ್ಲಿಯೂ ಅಧ್ಯಯನದ ಮತ್ತು ಬರವಣಿಗೆಯ ಅನೂಕೂಲಕ್ಕೆಂದು ಸಾಹಿತ್ಯ ಮತ್ತು ಸಾಹಿತ್ಯೇತರ ಕೃತಿಗಳೆಂದು

ವಿಂಗಡಿಸಿಕೊಂಡಿದ್ದಾರೆ. ಸೃಜನ ಪ್ರಕಾರಕ್ಕೆ ಸೇರಿದ ಕಾದಂಬರಿಗಳ ನಂತರ ರಂಗಭೂಮಿಗೆ ಸಂಬಂಧಿಸಿದಂತೆ 'ಗೀತನಾಟಕಗಳ' ಅವರ ರಂಗ ಪ್ರಯೋಗಗಳ, ರಂಗಸಂಬಂಧಿ ನಿಲುವುಗಳ ಬಗ್ಗೆ ಸಂಕ್ಷೇಪವಾಗಿ ವಿವರಿಸಿದ್ದಾರೆ. ವೃತ್ತಿ ರಂಗದ ಪರಿಚಯವಿರಿಸಿಕೊಂಡಿದ್ದ ಕಾರಂತರು, ವೃತ್ತಿರಂಗ ಪ್ರಯೋಗಗಳ ಇತಿಮಿತಿಗಳನ್ನು ಅರಿತಿದ್ದುದೇ ಅಲ್ಲದೆ ಆಗ ಪ್ರವೇಶವಾಗುತ್ತಿದ್ದ ಸಿನಿಮಾ ಹೊಸ ಬಗೆಯ ರಂಗ ಚಿಂತನೆಗಳ ಬಗ್ಗೆ ಅರಿವಿದ್ದು ಅವರು ರಂಗಭೂಮಿಯಲ್ಲಿ ತಂದ ಸುಧಾರಣೆಗಳ ಪ್ರಸ್ತಾಪವನ್ನು ಮಾಡುತ್ತಾರೆ, ರಚನೆ ಪ್ರಯೋಗಗಳೆರಡಕ್ಕೂ ಒಡ್ಡಿದ ಗದ್ಯನಾಟಕ, ಪದ್ಯ ನಾಟಕ, ಗೀತನಾಟಕ, ಹಾಸ್ಯನಾಟಕ, ಮಕ್ಕಳ ನಾಟಕ– ಹೀಗೆ ಹಲವಾರು ಬಗೆಯ ನಾಟಕಗಳನ್ನು ಉಊಹರಿಸುತ್ತಾರೆ. ಗೀತನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು, ಆ ಪ್ರಕಾರಕ್ಕೆ ಅವರದು ಮಹತ್ವದ ಕೊಡುಗೆ ಎಂದು ತಿಳಿಸುತ್ತಾರೆ. ಸೋಮಿಯ ಸೌಭಾಗ್ಯ, ಮುಕ್ತದ್ವಾರಗಳನ್ನು ಕುರಿತು ಮೆಚ್ಚುಗೆ ವ್ಯಕ್ತಪಡಿಸಿ, ಮುಕ್ತದ್ವಾರ 'ಭವ್ಯೋನ್ನತ ಕಾಸ್ಮಿಕ್ ದೃಶ್ಯಾವಳಿ' ಎಂದು ಉದ್ಗರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಲೇಖಕರು ಕಾರಂತರ ಪ್ರಯೋಗಶೀಲ ಮನಸ್ಸಿಗೆ ಬಗ್ಗೆ ಮೆಚ್ಚಿ ಮಾತನಾಡುತ್ತಾರೆ.

೫ನೇ ಪರಿಚ್ಛೇದದಲ್ಲಿ ಕಾರಂತರ ಪ್ರವಾಸ ಸಾಹಿತ್ಯದ ಬಗ್ಗೆ ಪರಿಚಯಿಸುತ್ತ. ಅವರ ವ್ಯಕ್ತಿತ್ವದ ಬಹು ಮುಖ ಬೆಳವಣಿಗೆಗೆ ಪ್ರವಾಸದ ಅನುಭವಗಳೇ ಕಾರಣವೆಂದೂ ಹೇಳುತ್ತಾರೆ. 'ಅಬೂವಿನಿಂದ ಬರಾಮಕ್ಕೆ' ಪಾತಾಳಕ್ಕೆ ಪಯಣ ಮುಂತಾದ ಪ್ರವಾಸ ಕೃತಿಗಳನ್ನು ಹೆಸರಿಸಿ, ನೋಡಿದ್ದನ್ನು ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತೆ ಮಾತಿನಲ್ಲಿ ಕಂಡಿರಿಸುವ ಸಾಮರ್ಥ್ಯವನ್ನು ಕಾರಂತರು ಹೊಂದಿದ್ದರೆಂಬುದನ್ನು ಗುರುತಿಸುತ್ತಾರೆ.

೬ನೇ ಪರಿಚ್ಛೇದದಲ್ಲಿ ಕರ್ನಾಟಕದ ವಾಸ್ತುಶಿಲ್ಪ, ಚಿತ್ರಕಲೆ ಕುರಿತು ಕಾರಂತರು ನಡೆಸಿದ ವೈಚಾರಿಕ ಅನುಸಂಧಾನದ ಬಗ್ಗೆ ಬರೆಯುತ್ತಾರೆ. ಕಲಾದರ್ಶನ ಕೃತಿಯಲ್ಲಿ ಕಾರಂತರು ನಮ್ಮ ನಾಡಿನ ಕಲೆಗಳ ಕುರಿತಾಗಿ, ಕಲೆಗಳ ಚರಿತ್ರೆಯನ್ನೇ ಅತ್ಯಂತ ಸರಳವಾಗಿ ಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ ವಿವೇಚಿಸಿದ್ದಾರೆ ಎಂಬುದನ್ನು ಎತ್ತಿ ತೋರುತ್ತಾರೆ. ಕಾರಂತರ ಕಲಾದೃಷ್ಟಿ ಅದರ ಬಗ್ಗೆ ಅವರಿಗಿರುವ ಸಂವೇದನಾತ್ಮಕ ಅರಿವು, ಆಳವಾಗಿ ಇರುವ ಜ್ಞಾನ– ಇವುಗಳನ್ನು ಗಮನಿಸಿದ ಇನಾಂದಾರರು ವಾಸ್ತುಶಿಲ್ಪದ ಸೌಂದರ್ಯಾನು ಭೂತಿಯಲ್ಲಿ ಕಾರಂತರ ದೃಷ್ಟಿಯಾವಾಗಲೂ ಭವ್ಯವಾದುದನ್ನು ಮೆಚ್ಚಿದೆ. ಭವ್ಯದ ಕಲ್ಪನೆಯ ಕಾವು ಇಳಿಮುಖವಾದಾಗ ಕಲಾವಿದ ಕುಸುರಿನ ಕೆಲಸಗಳಲ್ಲಿ ತೊಡಗುತ್ತಾನೆ ಎಂದು ಹೇಳಿ ಕಾರಂತರು ಮೊದಲಿಗೆ ಶಿಲ್ಪ, ವಾಸ್ತು ಶಿಲ್ಪಗಳ ಸೌಂದರ್ಯಾನುಭೂತಿಗೆ ತೆತ್ತುಕೊಂಡು ನಿರಂತರ ಅದರ ವಿವರಗಳಿಗೆ ಹೋಗುತ್ತಾರೆ ಎಂಬ ನಿಲುವನ್ನು

ವ್ಯಕ್ತಪಡಿಸುತ್ತಾರೆ. ಕಾರಂತರು ಭೇಟಿಕೊಟ್ಟ ವಾಸ್ತು ಶಿಲ್ಪದ ಮಹತ್ವದ ತಾಣಗಳಾದ ಬಾದಾಮಿ, ಐಹೊಳೆ, ಪಟ್ಟದ ಕಲ್ಲು ಕುರಿತಾದ ಲಕ್ಷಣ ವಿವರಗಳನ್ನು ಒಳಗೊಂಡ ಗ್ರಂಥರಚನೆ ಮಾಡುವುದನ್ನು ಗಮನಿಸಿ, ಅದರಲ್ಲಿ ಕಾರಂತರ ವಿಚಾರಗಳೇನೆಂಬುದನ್ನು ದಾಖಲಿಸುತ್ತಾರೆ. ಇಂತಹ ಕಲಾಸಂಬಂಧಿ ಗ್ರಂಥಗಳ ರಚನೆಯ ಉದ್ದೇಶವನ್ನೂ ಹೀಗೆ ಕ್ರೋಢೀಕರಿಸುತ್ತಾರೆ: ೧. ಈ ಶತಮಾನಗಳ ಅವಧಿಯ ಭಾರತೀಯ ಶಿಲ್ಪಕ್ಕೆ ಕರ್ನಾಟಕದಿಂದ ಸಂದ ಕೊಡುಗೆಯ ಶಾಸ್ತ್ರಿಯ ವಿಶ್ಲೇಷಣೆ ೨. ಈ ಕೊಡುಗೆಯ ಶಾಸ್ತ್ರೀಯ ವಿಶೇಷವನ್ನು ಭಾರತೀಯ ವಾಸ್ತು ಶಿಲ್ಪದ ಹಿನ್ನೆಲೆಯಲ್ಲಿ ಮಾತ್ರವಲ್ಲದೆ ಮೊದಲಿನಿಂದ ಇಡಿಯ ವಾಸ್ತುಶಿಲ್ಪ ವಿಧಾನಗಳು ಬೆಳೆದು ರೂಪುಗೊಂಡ ಬಗೆಯ ಹಿನ್ನೆಲೆಯಲ್ಲಿ ವಿವರಿಸುತ್ತದೆ. ೩. ಅನಾಸ್ಥೆಯ ಮೂಲಕವೇ ನೋಡುವ ಕಣ್ಣು ಇಲ್ಲದ್ದಕ್ಕೋ ಇದುವರೆಗೆ ನಮ್ಮ ಪಾಲಿಗೆ ಇದ್ದೂ ಇಲ್ಲದ ಹಾಗಿದ್ದ ನಮ್ಮಲ್ಲಿಯ ಕಲಾಸಂಪತ್ತಿಯ ಬಗೆಯಲ್ಲಿ ನಮ್ಮ ಕಣ್ಣು ತೆರೆಯುತ್ತದೆ.

ವಾಸ್ತುಶಿಲ್ಪ ವಿಶ್ಲೇಷಣೆಗಷ್ಟೇ ಸೀಮಿತವಾಗದ ಅವರೊಳಗಿನ ಚಿತ್ರಕಲಾ ಪ್ರಜ್ಞೆಯೂ ಜಾಗೃತವಾಗಿ ಅವರು ಅದನ್ನು ಕುರಿತು ಬರೆದ ಚಿತ್ರಕಲಾಸಂಬಂಧವಾದ ಕೃತಿಯನ್ನು ಕಾರಂತರ ಅನನ್ಯ ಸಾಧನೆಯ ಪ್ರತೀಕವಾಗಿ ಕಾಣುತ್ತಾರೆ; ಅಲ್ಲದೆ ಅದರ ಬಗ್ಗೆ ಹೀಗೆ ವಿವರಿಸುತ್ತಾರೆ "ಈ ವಿಷಯಕ್ಕೆ ಬೇರೊಂದು ಗ್ರಂಥವಿಲ್ಲ ಇತಿಹಾಸ ಪೂರ್ವಯುಗದ ಆನೆಗೊಂದಿ ಹಿರೇ ಬೆಣಚುಕಲ್ಲುಗಳಲ್ಲಿ ಕಲ್ಲಮೇಲೆ ಕೊರೆದ ಚಿತ್ರಗಳಿಂದ ಆರಂಭಿಸಿ ಕ್ರಿ.ಪೂ. ೨೦೦೦ ವರ್ಷ ಹಿಂದಿನ ಬಿಜಾಪುರದ ಸತ್ತಿ ಎಂಬಲ್ಲಿಯ ತಾಮ್ರಯುಗದ ಮಡಿಕೆಯೊಂದರ ಮೇಲಿನ ನೀಳಕೊಕ್ಕನ್ನು ಕೊಕ್ಕರೆಯ ಆಲಂಕಾರಿಕ ಚಿತ್ರದವರೆಗೂ ನಮ್ಮ ಚಿತ್ರಕಲೆಯ ಆನುಪೂರ್ವಿಯನ್ನು ಗುರುತಿಸಿ, ಅಲ್ಲಿಂದ ಬಾದಾಮಿಯ ಎರಡನೆ ಗುಹೆ, ಮೂಡಬಿದಿರೆಯ ಧವಳಾ ಹಸ್ತಪಟ, ವಿಜಯನಗರ ಕಾಲದ ಗೋಡೆಯ ಮೇಲಿನ ಚಿತ್ರ, ಬಿಜಾಪುರದ ಬಹಮನಿ ಪ್ರಭಾವದ ಸಾರಾಸೆನಿಕ್ ಶೈಲಿಯ ಚಿತ್ರಗಳು, ಇತ್ಯಾದಿಯಾಗಿ ೧೯ ನೇ ಶ. ದ ಚಿತ್ರ ಕಲಾವಿಕಾಸದ ವಿವರಣೆಯ ಕೃತಿ ಇದು" ಎಂದು ಬಣ್ಣಿಸಿ ಇವುಗಳ ಕುರಿತು ಕಾರಂತರ ಅಭಿಪ್ರಾಯಗಳು ಏನೆಂಬುದನ್ನೂ ದಾಖಲಿಸುತ್ತಾರೆ. "ವಾಸ್ತವ ಚಿತ್ರಣ ಒಂದೇ ಚಿತ್ರ ಕಲೆಯ ದಾರಿ ಎಂಬ ಕಲ್ಪನೆಯನ್ನು ಕಡೆಗಣಿಸದ ಹೊರತು ಚಿತ್ರ ಪ್ರಪಂಚದಲ್ಲಿ ಅರ್ಥಪೂರ್ಣ ಸಾಧನೆ ಅಸಾಧ್ಯ" ಎಂಬುದಾದರೆ, ಇನಾಂದಾರರು "ಇಲ್ಲಿಯ ಪಾಂಡಿತ್ಯ ಪರಿಶ್ರಮಗಳು ಅದೇ ಕ್ಷೇತ್ರದಲ್ಲಿ ಕೆಲಸ ಮಾಡುವ ವಿದ್ವತ್ ಪ್ರತಿಷ್ಠಿತರಿಗೆ ಆಹ್ವಾನದಂತಿದೆ" ಎಂದು ಹೇಳುವುದರ ಮೂಲಕ ಕೃತಿಯ ಮೌಲಿಕತೆಯನ್ನು ಎತ್ತಿ ತೋರಿಸುತ್ತಾರೆ.

ಕಾರಂತರ ಪ್ರತಿಭೆಯ ಮತ್ತೊಂದು ಮಗ್ಗುಲೆಂದರೆ ನೃತ್ಯ ಸಂಗೀತ. ಇದರ ವಿವರಗಳನ್ನು, ಅಂದರೆ ಕಾರಂತರ ಈ ಕಲೆಗಳ ಕುರಿತಾದ ಚಿಂತನೆಗಳು ಅವುಗಳ ಸ್ವರೂಪ ಪ್ರಯೋಗದ ಆಯಾಮಗಳು, ತರಬೇಕಾದ ಸುಧಾರಣೆಗಳು, ಇತ್ಯಾದಿ ವಿವರಗಳನ್ನು ನೀಡುವುದರ ಜೊತೆಗೆ ಯಕ್ಷಗಾನ ಪ್ರಯೋಗದಲ್ಲಿ ಯಾವ ಭಾವಕ್ಕೆ ಯಾವ ರೀತಿಯ ಹೆಜ್ಜೆಯ ಗತ್ತುಗಳು, ಮುಖಚರ್ಯೆಗಳು, ಯಾವ ರಾಗಗಳು ಇರಬೇಕೆಂಬುದನ್ನು ಸೂಚಿಸಿರುವುದರತ್ತ (ಮೇಲೆ) ಓದುಗರ ಗಮನ ಸೆಳೆಯುತ್ತಾರೆ. ಇದರ ಕುರಿತಾದ ಕಾರಂತರ ವಿಚಾರಗಳ ಬಗ್ಗೆ ಲೇಖಕರ ಅಭಿಪ್ರಾಯವನ್ನು ಈ ರೀತಿ ಉದ್ಧರಿಸುತ್ತಾರೆ: "ಸನ್ನಿವೇಶದಲ್ಲಿ ಭಾವವನ್ನು ವ್ಯಕ್ತ ಪಡಿಸುವುದಕ್ಕೆ ಬಳಸ ಬೇಕಾದ ನೃತ್ಯಗತಿ ಪೂರ್ವನಿರ್ಧಾರಿತ ಒಂದು ಕ್ರಮದಲ್ಲಿ ಸಾಗುವುದಕ್ಕಿಂತ ಭಾವಕ್ಕೆ ತಕ್ಕಂತೆ ಸಾಗಬೇಕಾದದ್ದು ಅತ್ಯಗತ್ಯ... ಒಂದು ಪಾತ್ರ ಒಂದು ನೃತ್ಯದಲ್ಲಿ ತೊಡಗಿದಾಗ ಅದು ಕುಣಿಯುವ ಭಾವವನ್ನು ಸಮುದಾಯ ನೃತ್ಯರೂಪಿಸಿ ನಿರ್ದೇಶಿಸುವವನ ಭಾವವನ್ನು ವ್ಯಕ್ತಪಡಿಸಬೇಕು. ಇದಕ್ಕೆ ಕಾರಂತರು ಸಾಂಪ್ರದಾಯಿಕ ಪದ್ಧತಿಯಿಂದ ಬಿಡಿಸಿ ಸ್ವತಂತ್ರ ಸೃಜನಶೀಲ ಅಭಿವ್ಯಕ್ತಿಗೆ ನೃತ್ಯ ಮಾಧ್ಯಮವಾಗಿ ಒಂದು ವಿಧಾನ ರೂಪಿಸಿಕೊಂಡರು" ಎನ್ನುತ್ತಾರೆ ಭರತನಾಟ್ಯ ಕಥಕ್ಕಳಿ ಮುಂತಾದವುಗಳ ಓಟಗತಿ, ಮುದ್ರೆ, ಪದವಿನ್ಯಾಸಗಳ ಯಾಂತ್ರಿಕತೆ, ಭಾಷೆಯನ್ನು ಅನುಕರಿಸುವ ಚಲನೆ, ಇತ್ಯಾದಿ ಸಾಂಕೇತಿಕ ಭಾಷೆಯಿಂದ ಭಾವಗತಿಗಳ ಸಂಬಂಧ ಉಳಿಯುವುದಿಲ್ಲವೆಂದು ಮನಗಂಡು ಕಾರಂತರು "ಭಾವ ತರಂಗಿತತೆ'ಗೆ ಪ್ರಾಶಸ್ತ್ಯ ಕೊಟ್ಟಿರುವುದನ್ನು ಕೀಚಕ ವಧೆ, ಇಂದ್ರಕೀಲ, ಪಂಚವಟಿ ಮುಂತಾದ ಯಕ್ಷಗಾನ ಪ್ರಸಂಗಗಳ ಪ್ರಯೋಗಗಳನ್ನು ಉದಾಹರಿಸುತ್ತಾರೆ. ಇವೆಲ್ಲವನ್ನೂ ಸಂಗೀತ ರೂಪಕದಲ್ಲಿ ನೃತ್ಯನಾಟಕವಾಗಿ ರಚಿಸಿ ರಂಗದಲ್ಲಿ ಆಡಿಸಿದರೆನ್ನುತ್ತಾರೆ ಕಾರಂತರು ಪ್ರಯೋಗಗಳಲ್ಲಿ ತಂದ ಹೊಸತನವನ್ನು ಮೆಚ್ಚಿ ನುಡಿಯುತ್ತಾರೆ.

ಮುಂದೆ ಕಾರಂತರು ಯಕ್ಷಗಾನ ಪ್ರಯೋಗಗಳಲ್ಲಿ ಮತ್ತು ಗೀತನಾಟಕ ಪ್ರಯೋಗಗಳಲ್ಲಿಯೂ ಶುದ್ಧಶಾಸ್ತ್ರೀಯ ಸಂಗೀತವನ್ನು ಸ್ವರ ಪ್ರಸ್ತಾರಗಳಿಂದ ಬಂಧಿಸದೆ ಕೇವಲ ರಾಗಗಳನ್ನು ಧಾಟಿಗಳಿಂದ ಹಿಡಿಯುತ್ತಾರೆ, ಏಕೆಂದರೆ ನೃತ್ಯಕ್ಕೆ ತಾಳ-ಲಯವೇ ಮುಖ್ಯವಾದ್ದರಿಂದ ಅದಕ್ಕೆ ಹೊಂದಿಕೊಳ್ಳುವಲ್ಲಿ ಧಾಟಿಯೇ ಮುಖ್ಯವಾಗುತ್ತದೆ ಎನ್ನುವುದನ್ನು ಲೇಖಕರು ವಿವರಿಸಿ, ಅವರ ದೃಷ್ಟಿ, ಆಲೋಚನೆಗಳನ್ನು ಪುರಸ್ಕರಿಸುತ್ತಾರೆ.

ನಂತರದ ಪರಿಚ್ಛೇದಗಳಲ್ಲಿ ಕಾರಂತರು ಕನ್ನಡಕ್ಕೆ ಕೊಟ್ಟ ಕೋಶ ಕೃತಿಗಳು, ಅವುಗಳ ಪ್ರಸ್ತುತತೆ, ಮೌಲಿಕತೆಗಳನ್ನು ಬಣ್ಣಿಸುತ್ತಾರೆ. ೧೯೩೬ ರಲ್ಲಿಯೇ ಬಂದ

'ಬಾಲಪ್ರಪಂಚ', ೩೦ ವರ್ಷಗಳ ನಂತರ ನಾಲ್ಕು ಸಂಪುಟಗಳಲ್ಲಿ ಬಂದ 'ವಿಜ್ಞಾನ ಪ್ರಪಂಚ(ಗಳು) ಕಾರಂತರ ದೈತ್ಯ ಪ್ರತಿಭೆಯ ದ್ಯೋತಕಗಳಾಗಿರುವುದನ್ನು ಗಮನಿಸಿ, ಅವುಗಳೊಳಗಿನ ವಿಷಯಜಗತ್ತಿನ ಬಗ್ಗೆ ಬರೆಯುತ್ತಾರೆ. ಸಾವಿರಾರು ಪುಟಗಳಿಗೆ ವಿಸ್ತರಿಸಿರುವ ಈ ಕೋಶ ಸಂಪುಟಗಳು ಜೀವಮಾನವಿಡೀ ಶ್ರಮಿಸಿದರೂ ಸಾಧ್ಯವಾಗದ್ದನ್ನು ಪವಾಡದಂತೆ ಏಕಾಂಗಿಯಾಗಿ ಸಾಧಿಸಿರುವುದು ಯಾರಿಗಾದರೂ ದಿಗ್ಭ್ರಮೆ ಹುಟ್ಟಿಸುವುದರಲ್ಲಿ ಅಚ್ಚರಿಯಿಲ್ಲ. ವಿಜ್ಞಾನ ಪ್ರಪಂಚದ ಸಂಪುಟಗಳನ್ನು, 'ಬಾಲ ಪ್ರಪಂಚ' ಕೋಶವನ್ನು ಬರೆದ ಕಾರಂತರ ಬಗ್ಗೆ ಲೇಖಕರು ಇದು ಬರೇ ಆಸಕ್ತಿಯ ಪ್ರಶ್ನೆಯಾಗಿಲ್ಲ. ಆಧುನಿಕ ಸಾಮಾನ್ಯ ಮಕ್ಕಳಿಗೆ ಜ್ಞಾನ-ವಿಜ್ಞಾನ ತಿಳಿಸಬಹುದಾದದೆಲ್ಲವನ್ನೂ ಅವರು ತಿಳಿಯಬೇಕೆಂದು ಅವರು ಜೀವನದುದ್ದಕ್ಕೂ ಇರಿಸಿಕೊಂಡ ಆಕಾಂಕ್ಷೆಯಾಗಿತ್ತು ಎಂದು ಅವರ ಮಹಾನ್ ಉದ್ದೇಶದ ಮೇಲೆ ಬೆಳಕು ಚೆಲ್ಲುತ್ತಾರೆ.

ಇಷ್ಟೇ ಅಲ್ಲದೆ ಕಾರಂತರು ಜಗತ್ತಿನ ಪ್ರತಿಯೊಂದು ವಿಷಯದಲ್ಲೂ ಕುತೂಹಲ, ಜಿಜ್ಞಾಸೆ ಮೂಡಿಸಿಕೊಂಡಿದ್ದ ಕಾರಣ, ಜೀವ ಜಗತ್ತಿನ ಬಗ್ಗೆಯೂ – ಅಂದರೆ ಹಕ್ಕಿಗಳ ಬಗ್ಗೆ, ನದಿಗಳ ಬಗ್ಗೆಯೂ– ಬರೆದಿದ್ದಾರೆ. ಅವರ ಬಿಡಿ ಬರಹಗಳಂತೂ ಬದುಕಿನ ಅನುಭವಕ್ಕೆ ದಕ್ಕುವ ಎಲ್ಲ ವಿಚಾರಗಳ ಬಗ್ಗೆಯೂ ಬರೆದಂಥವು ಎನ್ನುವುದನ್ನು ಗಮನಿಸಿದ್ದಾರೆ, ಸಮಾಜ, ಧಾರ್ಮಿಕ ನಂಬಿಕೆಗಳು, ದೇವರ ಕಲ್ಪನೆ, ಭಕ್ತಿ, ಗಾಂಧಿ ಚಿಂತನೆ ಹೀಗೆ ಏನೆಲ್ಲವನ್ನು ಕಾರಂತರು ಬರೆದಿದ್ದಾರೆ ಎನ್ನುವುದನ್ನೂ ಇನಾಂದಾರರು ತಾವು ಬರೆದ ಪುಸ್ತಕದಲ್ಲಿ ದಾಖಲಿಸಿದ್ದಾರೆ.

■

# ಕುವೆಂಪು ಕಾದಂಬರಿಗಳು

ಆಂಗ್ಲ ಸಾಹಿತ್ಯದಲ್ಲಿ ಪರಿಣಿತರೂ ಪ್ರಬುದ್ಧರೂ ಆಗಿರುವ ಇನಾಂದಾರರು ಅಲ್ಲಿನ ತಮ್ಮ ಗ್ರಹಿಕೆಯ ವಿಧಾನಗಳನ್ನು ವಿಮರ್ಶನ ಪ್ರಜ್ಞೆಯನ್ನು ಕನ್ನಡ ಸಾಹಿತ್ಯ ಕೃತಿಗಳ ವಿಮರ್ಶೆಗೆ, ವಿಶ್ಲೇಷಣೆಗೆ ಬಳಸಿಕೊಂಡು ಕನ್ನಡದ ಹಿರಿಯ ಹೆಸರಾಂತ ಲೇಖಕರ ಕೃತಿಗಳ ಸಮಗ್ರ ವಿಮರ್ಶೆ ವಿಶ್ಲೇಷಣೆಗಳನ್ನು ಒಳಗೊಂಡ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಶಿವರಾಮ ಕಾರಂತರ ಬದುಕು– ಬರಹ ಪ್ರಕಟವಾದ ವರ್ಷವೇ (೧೯೭೭), ಅಂತಹ ಪ್ರಯತ್ನದ ಮುಂದುವರಿಕೆಯಾಗಿ ಕುವೆಂಪುರವರ ಕಾದಂಬರಿಗಳ ಕುರಿತ ಕೃತಿ ಪ್ರಕಟವಾಗಿದೆ, ಉಪನ್ಯಾಸ ಮಾಲಿಕೆಗೆಂದು ಸಿದ್ಧವಾದ ಲೇಖನ ಮುಂದೆ ಮಹತ್ವದ ಮೌಲಿಕ ವಿಮರ್ಶಾ ಕೃತಿಯಾಗಿ ಮೈ ಪಡೆಯಿತು. ಇಲ್ಲಿ ಕುವೆಂಪು ಅವರ ಬದುಕಿನ ವಿವರಗಳಿಲ್ಲ; ನೇರವಾಗಿ ಕುವೆಂಪುರವರ ಕಾದಂಬರಿಗಳ ಸಮೀಕ್ಷೆಗೆ ಹೊರಡುತ್ತಾರೆ. ಕುವೆಂಪು ಅವರ [ಮಹತ್ ಬೃಹತ್ ಆದ] 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' 'ಮಲೆಗಳಲ್ಲಿ ಮದುಮಗಳು'–ಎಂಬ ಎರಡು ಕಾದಂಬರಿಗಳಲ್ಲಿ ಮೊದಲಿಗೆ ಕಾನೂರು ಸುಬ್ಬಮ್ಮ ಹೆಗ್ಗಡತಿ ಕಾದಂಬರಿಯನ್ನು ವಿಮರ್ಶೆಗೆ ಒಳಪಡಿಸುತ್ತಾರೆ ನಂತರ ಪ್ರತ್ಯೇಕವಾಗಿ ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ವಿಮರ್ಶಿಸಿ ನಂತರ ಮುಂದೆ ಈ ಎರಡೂ ಕಾದಂಬರಿಗಳ ವಿಮರ್ಶೆಯ ಹಿನ್ನೆಲೆಯಲ್ಲಿ, ಅವುಗಳ ವಿಮರ್ಶೆಯನ್ನು ತಾವು ಮಾಡಿದ್ದೇಕೆಂಬುದಕ್ಕೆ ಸಮರ್ಥನೆಯನ್ನು ಮತ್ತು ಅವುಗಳ ಉದ್ದೇಶದ ಸಾರ್ಥಕತೆಯನ್ನು ಸಾಧಿಸಲು ಸಾಧ್ಯವಾಯಿತೇ ಇಲ್ಲವೇ ಎಂಬುದನ್ನು ವಿವರಿಸಿದ್ದಾರೆ.

ಎರಡೂ ಕಾದಂಬರಿಗಳಲ್ಲಿ ಮಲೆನಾಡಿನ ಚಿತ್ರಗಳಿರುವುದನ್ನು ಪ್ರಸ್ತಾಪಿಸಿ ಅವುಗಳ ಪರಿಣಾಮಗಳ ಬಗ್ಗೆ ಚರ್ಚಿಸುತ್ತಾರೆ. ಕಾನೂರು ಹೆಗ್ಗಡಿತಿಯಲ್ಲಿ ಪ್ರಾಕೃತಿಕ ಪರಿಸರ ಗಾಢವಾಗಿದ್ದು ಪ್ರಭಾವಕಾರಿ ಶಕ್ತಿಯಾಗಿ ಬಳಕೆಯಾಗಿದೆ. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿಯೂ ಪ್ರಕೃತಿಯ ದಟ್ಟ ಚಿತ್ರಣವಿದ್ದರೂ ಅಲ್ಲಿ ಮನುಷ್ಯ ವ್ಯಾಪಾರಗಳಿಗೆ ಒತ್ತು ಇದ್ದು ಪ್ರಕೃತಿ ಚಿತ್ರಣ ಹಿನ್ನೆಲೆಯಾಗಷ್ಟೇ ಬಂದಿದೆ ಎಂದು ಅಭಿಪ್ರಾಯಪಡುತ್ತಾರೆ. ಪಾತ್ರ ವಿಷಯವಾಗಿ ಜೀವಂತ ಪಾತ್ರ ಸೃಷ್ಟಿ, ಕ್ರಿಯೆಯಾಗಿ, ಕಥಾನಕವಾಗಿ ಅದು ಹೊಮ್ಮಿನಿಲ್ಲುವಂತೆ ಮಾಡುವ ಕಲೆಗಾರಿಕೆಯೇ ಕಾದಂಬರಿಯ ಮೂಲ ಆಕರ್ಷಣೆ ಎನ್ನುತ್ತಾರೆ.

'ಕಾನೂರು ಹೆಗ್ಗಡತಿ'ಯ ವಿಸ್ತೃತ ವಿಶ್ಲೇಷಣೆಯ ನಂತರ ತಮ್ಮ ಕೆಲವು ಮೌಲಿಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ವ್ಯಾಪಕ ಜೀವನ ದರ್ಶನ, ಬದುಕಿನ ವಿವಿಧಬಗೆಯ ಅಂತಃ ಸಂಬಂಧಗಳು– ಅವುಗಳ ಜಟಿಲತೆ ಮುಂತಾದ ಅಂಶಗಳನ್ನು ಗುರುತಿಸುವುದರ ಜೊತೆಗೆ, ಕಥೆಯ ರಚನೆಗಿಂತ ಜೀವನ ಕ್ರಮವೊಂದರ ಚಿತ್ರಣಕ್ಕೆ ಸಾಧನವಾಗಿ ಬರುವ ಅನುಭವರಾಶಿಯ ವಿವರಗಳೇ ಇಲ್ಲಿ ಮುಖ್ಯವಾಗಿರುವುದರಿಂದ ಇದನ್ನು ವಿಶ್ಲೇಷಿಸುವುದು ತೊಡಕಿನ ಕೆಲಸವೆನ್ನುತ್ತಾರೆ.

ಈ ಕಾದಂಬರಿಯಲ್ಲಿ ಪ್ರಕೃತಿಪರಿಸರದ ಮಹತ್ವದ ಪಾತ್ರವನ್ನು ಗುರುತಿಸುತ್ತಾ, ಅವರಿಗೆ ಅದು ಲೇಖಕರು ಕೊಡಬೇಕೆಂದ ಜೀವನ ದರ್ಶನದ ಒಂದು ಅವಿಭಾಜ್ಯ ಅಂಗವಾಗಿ, ಅದರಲ್ಲಿ ಬರುವ ಮನುಷ್ಯ ಪಾತ್ರಗಳ ವ್ಯಾಪಾರ ವ್ಯವಹಾರಗಳಿಂದ ಪ್ರತ್ಯೇಕಿಸಲಾಗದ ಒಂದು ಅಂಶವಾಗಿ ಕೆಲಸ ಮಾಡಿದೆ, ಎನ್ನುವ ಅಭಿಪ್ರಾಯಕ್ಕೆ ದಾರಿ ಮಾಡಿದೆ.

ಹಾಗೆಯೇ ಹೂವಯ್ಯನ ಪಾತ್ರದ ಬಗ್ಗೆ ಇರುವ ಭಿನ್ನ ಅಭಿಪ್ರಾಯಗಳ ಹಿನ್ನೆಲೆಯಲ್ಲಿ, ಅವುಗಳನ್ನು ನಿರಾಕರಿಸುತ್ತಾ ಹೂವಯ್ಯನ ಪಾತ್ರವನ್ನು ಕೃತ್ರಿಮ ಎನ್ನುವವರಿಗೆ ಶೈಕ್ಷಣಿಕ ಹಾಗೂ ಅಧ್ಯಾತ್ಮಿಕ ಶಕ್ತಿಗಳಲ್ಲಿ ವಿಶ್ವಾಸವಿಲ್ಲ ಎನ್ನಬೇಕಾಗುತ್ತದೆ" – ಎಂದು ಸ್ವಲ್ಪ ನಿಷ್ಠುರವಾಗಿಯೇ ನುಡಿಯುತ್ತಾರೆ.

ಪ್ರತ್ಯೇಕ ಪ್ರತ್ಯೇಕವಾಗಿ ಎರಡೂ ಕಾದಂಬರಿಗಳನ್ನು ಅವಲೋಕಿಸಿ ವಿಶ್ಲೇಷಿಸಿದ ನಂತರ ಪ್ರಮುಖ ಅಂಶಗಳನ್ನು ಗುರುತಿಸಿದ ನಂತರ ಎರಡನ್ನೂ ಒಟ್ಟಿಗೆ ತೌಲನಿಕವಾಗಿ ನೋಡಿ ಅವುಗಳ ನಡುವಿನ ಸಾದೃಶ್ಯ ವೈದೃಶ್ಯಗಳನ್ನು ಗಮನಿಸಿ ಕೆಲವು ಮುಖ್ಯವಾದ ನಿಲುವುಗಳನ್ನು ತಳೆಯುತ್ತಾರೆ. ಎರಡೂ ಕಾದಂಬರಿಗಳನ್ನು ಒಟ್ಟಿಗೆ ಇರಿಸಿ ನೋಡುವುದರ ಅಗತ್ಯ ಮತ್ತು ಉದ್ದೇಶಗಳನ್ನು ಹೀಗೆ ವಿವರಿಸುತ್ತಾರೆ. " ಈ ಎರಡೂ ಕಾದಂಬರಿಗಳಲ್ಲಿ ಸಾದೃಶ್ಯ ವೈದೃಶ್ಯಗಳಿವೆ. ಪರಿಸರ ಚಿತ್ರಣದಲ್ಲಿ ಪಾತ್ರಗಳ ಪೋಷಣೆಯ ಯೋಜನೆಗಳಲ್ಲಿ, ಕಥಾನಕದ ರಚನೆಯ ರೀತಿ ವಿಧಾನಗಳಲ್ಲಿ, ಉದ್ದೇಶ ಪರಿಣಾಮಗಳಲ್ಲಿ ಈ ಸಾದೃಶ್ಯ–ವೈದೃಶ್ಯಗಳು ಕಾಣಿಸಿ ಕೊಳ್ಳುತ್ತವೆ. ಇವನ್ನು ಗುರುತಿಸಿ ವಿಶ್ಲೇಷಿಸಿದಾಗ ಎರಡೂ ಕಾದಂಬರಿಗಳ ಒಟ್ಟು ಸಾಧನೆಯ ಸ್ವರೂಪ ವಿಶದವಾಗುತ್ತದೆ. ಅಲ್ಲದೆ ಆ ಸಾಧನೆಗೆ ಪೋಷಕಾಂಶಗಳಾಗಿ ಕೆಲಸಮಾಡಿದ ವಿವಿಧ ವಿಧಾನಗಳ ಇತಿಮಿತಿಗಳೂ ಹಾಗೂ ಅವುಗಳಿಂದುಂಟಾದ ಪರಿಣಾಮಗಳ ಪರಿಚಯವೂ ಆಗುತ್ತದೆ" ಎನ್ನುವುದು ಅವರ ವಿವರಣೆಯ ಅರ್ಥವಾಗಿದೆ.

ಅವರು ಗುರುತಿಸುವ ಸಮಾನ ಅಂಶ ಪರಿಸರ (ಕಾಡಿನ ಪರಿಸರ) ಕಾನೂರು ಹೆಗ್ಗಡಿತಿಯಲ್ಲಿ ಕಾಡು ಮೇಡುಗಳು ಹೆಚ್ಚು ರುದ್ರಭೀಷಣವಾಗಿ ತೋರುತ್ತದೆ. ಅದೇ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕಾಣಿಸುವ ಹುಲಿಕಲ್ಲುನೆತ್ತಿ ಮತ್ತು ಕೆಲ ಮಟ್ಟಿಗೆ ದಾರಿಯಲ್ಲಿಯ ಬೆತ್ತದಸರ ವನ್ನು ಬಿಟ್ಟರೆ ಕಾಡಿನ ನಿಬಿಡತೆ ಅಷ್ಟೊಂದು ಅಚ್ಚೊತ್ತಿ ಮನಸ್ಸಿನಲ್ಲಿ ನಿಲ್ಲುವುದಿಲ್ಲ–ಎನ್ನುತ್ತಾರೆ. ಪರಿಸರ ಒಂದೇ ಆದರೂ ಬೇರೆ ಬೇರೆ ರೀತಿಯಲ್ಲಿ ಕಾದಂಬರಿಯಲ್ಲಿ ದುಡಿಸಿಕೊಳ್ಳಲಾಗಿದೆ. ಕಾನೂರಿನ ಕಾಡುಗಳು ಅದರಲ್ಲಿಯ ಪಾತ್ರಗಳಿಗೆ ಕ್ರಿಯಾರಂಗವಾಗಿರುವುದರ ಜೊತೆಗೆ ಒಂದು ಪ್ರಭಾವಕಾರಿ ಶಕ್ತಿಯಾಗಿಯೂ ಜೀವಂತ ಪಾತ್ರವಾಗಿಯೂ ಕೆಲಸಮಾಡುತ್ತದೆ! ಎಂದು ಅಭಿಪ್ರಾಯ ಪಟ್ಟರೆ, ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿನ ಪರಿಸರ ಅಲ್ಲಿನ ಜನರ ಜೀವನ ಕ್ರಮ ಮತ್ತು ಸ್ವಭಾವ ಸತ್ವಗಳನ್ನೂ ರೂಪಿಸುವ ಒಂದು ಗಾಢ ಪ್ರಭಾವ ಬೀರುವ ಶಕ್ತಿಯಾಗಿ ಕಾಣಿಸಿಕೊಳ್ಳುತ್ತದೆ ಎನ್ನುತ್ತಾರೆ. ಇಷ್ಟೇ ಅಲ್ಲದೆ ಕಾಡಿನ ಮಧ್ಯೆ ಬದುಕುತ್ತಿರುವ ಜನರ ಬದುಕಿನ ರೀತಿ ನೀತಿ ನಿತ್ಯವೂ ಅವುಗಳೊಡನೆ ನಡೆಸಬೇಕಾದ ಹೋರಾಟದ ಚಿತ್ರವನ್ನೂ ನೀಡುವ ಉದ್ದೇಶ ಕಾನೂರು ಕಾದಂಬರಿಗೆ ಇದ್ದರೆ 'ಮಲೆಗಳಲ್ಲಿ' ಕಾದಂಬರಿಯಲ್ಲಿ ಕಾಡು ಮನುಷ್ಯ ವ್ಯಾಪಾರಗಳಿಗೆ ಹಿನ್ನೆಲೆಯ ಸ್ಥಾನದಲ್ಲಿ ಉಳಿಯುತ್ತದೆ ಎನ್ನುತ್ತಾರೆ.

ಎರಡೂ ಕಾದಂಬರಿಗಳಲ್ಲಿನ ಪಾತ್ರ ಸೃಷ್ಟಿ ವೈವಿಧ್ಯಮಯವೂ, ಜೀವಂತವೂ ಅಚ್ಚರಿ ಮೂಡಿಸುವಂಥವೂ ಆಗಿದೆ ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ತಿಮ್ಮಿಗುತ್ತಿ ವೆಂಕಟಪ್ಪ ನಾಯಕ, ಚಂದ್ರಯ್ಯ ಗೌಡ, ಚಿನ್ನಮ್ಮ ಮೊದಲಾದ ಪಾತ್ರಗಳನ್ನು ಭಿನ್ನ ಭಿನ್ನ ಸನ್ನಿವೇಶಗಳಲ್ಲಿ ನಡೆದುಕೊಳ್ಳುವ ರೀತಿಯ ಮೂಲಕ ವಿವರಿಸುತ್ತಾರೆ.

ಎರಡೂ ಕಾದಂಬರಿಗಳಲ್ಲಿನ ವಾಸ್ತವಿಕ ನೆಲೆ, ಕಾನೂರು ಕಾದಂಬರಿಯಲ್ಲಿ ಕಥಾ ಪೋಷಣೆಗೆ ಬರುವ ಪಾತ್ರಗಳ ಚಿತ್ರಣ ಕುರಿತು ಮಾತನಾಡುತ್ತ, ಅಗತ್ಯದ ಪ್ರಮಾಣ ಮೀರಿಲ್ಲವಾದ್ದರಿಂದ ಏಕಾಗ್ರವಾದ ಪರಿಣಾಮ ಸಿದ್ಧಿ ಲಭಿಸಿದೆ ಎನ್ನುತ್ತಾರೆ. ಮುಂದೆ ಕಾದಂಬರಿ ತಂತ್ರದ ವಿಶ್ಲೇಷಣೆಗೆ ತೊಡಗುತ್ತಾರೆ. ಇದಕ್ಕೆ ಮೊದಲು, ಕಾದಂಬರಿಯಲ್ಲಿ ಕಾದಂಬರಿಕಾರನ ಸ್ಥಾನ ಯಾವುದು? ಅದರ ಸ್ವರೂಪ ಎಂಥದು? ಎಷ್ಟರ ಮಟ್ಟಿಗೆ ಆತ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ತನ್ನ ಕೆಲಸವನ್ನು ಮಾಡಬಲ್ಲ? –ಎಂಬೆಲ್ಲ ಪ್ರಶ್ನೆಗಳನ್ನು ಮೂಡಿಸಿಕೊಂಡು, ತಂತ್ರ ವಿನ್ಯಾಸದ ಬಗ್ಗೆ ಚರ್ಚಿಸುತ್ತಾರೆ. ಎಳೆಎಳೆಯಾಗಿ ಬಿಡಿಸಿಕೊಂಡು ತಮ್ಮ ಆಲೋಚನೆ, ಅಭಿಪ್ರಾಯಗಳ ನಿಲುವನ್ನು ತಲುಪುತ್ತಾರೆ. ಅವರು ಕಾದಂಬರಿ ಎಂದರೆ ಜೀವನಾನುಭವದ ಸಂಶೋಧನೆ ಎಂದು ಭಾವಿಸುತ್ತಾರೆ. ಅದರ

ಅರ್ಥವಂತಿಕೆಯ ಅನ್ವೇಷಣೆ ಇವೆರಡಕ್ಕೂ ಸಾಧನವಾಗಿ ಜೀವನದ ವಾಸ್ತವ ಚಿತ್ರಣದ ತಂತ್ರ ವಿಧಾನ ಕೆಲಸ ಮಾಡುತ್ತದೆ. ಈ ತಂತ್ರ ವಿಧಾನಗಳು ಇಂಥ ಸಂಶೋಧನವನ್ನು, ಅನ್ವೇಷಣೆಯನ್ನು ಒಂದೊಂದು ರೀತಿಯಲ್ಲಿ ನಡೆಸುತ್ತದೆ. ಕಾನೂರು ಕಾದಂಬರಿಯಲ್ಲಿನದಕ್ಕಿಂತ ಮಲೆಗಳಲ್ಲಿಯ ಜೀವನದ ಹರವು ವಿಸ್ತಾರವಾದದ್ದು, ಅದರ ಅರ್ಥವಂತಿಕೆಯ ಆಳವೂ ಹೆಚ್ಚಿನದು. ಕಥಾಬಂಧದ ದೃಷ್ಟಿಯಿಂದ ಒಂದರ ಅಚ್ಚುಕಟ್ಟು ಇನ್ನೊಂದಕ್ಕಿಲ್ಲ. ಒಂದರ ಭಾವೋದ್ವೇಗದ ಬಿಗಿತ, ಸೆಳೆತಗಳು ಇನ್ನೊಂದರಲ್ಲಿ ಇಲ್ಲ. ಆದರೂ ಅಂಥವುಗಳ ಅಭಾವವೇ ಕಥಾಬಂಧದ ಅನಿವಾರ್ಯ ಕೃತ್ರಿಮತೆಯಿಂದ ದೂರವಾಗಿಸಿ ವಾಸ್ತವಿಕತೆಗೆ ಪೋಷಕವಾಗುತ್ತದೆ. ಸಂಕೀರ್ಣವೆನ್ನಬಹುದಾದ್ದನ್ನು ಸಹಜವಾಗಿ ಬಿಡಿಸಿ ಹೇಳಬಹುದಾದಾಗ ಸಂಕೀರ್ಣವೆಂಬ ಮಾತಿಗೆ ಹೆಚ್ಚಿನ ಅರ್ಥವೇ ಉಳಿಯ ಲಾರದು" ಎಂದು ಹೇಳಿ, ಅನುಭವ ವೈವಿಧ್ಯವನ್ನು ವಿಸ್ತಾರವಾಗಿ ಚಿತ್ರಿಸುವ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಹಿರಿಮೆ ಅನ್ಯ ಸಾಮಾನ್ಯ ಕಾದಂಬರಿಗಳ ಜಾತಿಗೆ ಸೇರಿದ್ದಲ್ಲ, ಎಂದು ಅತ್ಯಂತ ಆಳವಾದ, ವಿಸ್ತೃತವಾದ ಅಧ್ಯಯನ ಅನುಸಂಧಾನಗಳ ಮೂಲಕ ಎಲ್ಲ ಸೂಕ್ಷ್ಮತೆಗಳನ್ನು ವಿಮರ್ಶೆಯಲ್ಲಿ ಹಿಡಿದಿಡುತ್ತಾರೆ. ಕಾದಂಬರಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿಮರ್ಶಿಸುವಾಗಲೂ ಮೊದಲು ಕೆಲವು ಪ್ರಶ್ನೆಗಳನ್ನು ಎತ್ತಿಕೊಳ್ಳುತ್ತಾರೆ. ಅವುಗಳಿಗೆ ಸಮರ್ಥನೆ, ಸಮಾಧಾನವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ವಿಮರ್ಶೆಗೆ ತೊಡಗುತ್ತಾರೆ. ಹೀಗಾಗಿ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಶೀರ್ಷಿಕೆ ಬಗ್ಗೆ ಚರ್ಚಿಸುತ್ತಾ, ಅವಳಿಗಿಂತ ಮುಖ್ಯರಾಗಿ ಚಂದ್ರಯ್ಯ ಗೌಡ, ಸೇರೆಗಾರ ರಂಗಪ್ಪ ಸೆಟ್ಟಿ, ಗಂಗೆ, ಸೀತೆ, ಸಿಂಗಪ್ಪ ಗೌಡ ಮತ್ತೆ ಇನ್ನಷ್ಟು ಪಾತ್ರಗಳಿದ್ದರೂ ಮುಖ್ಯ ಕಥಾನಕದ ಜೊತೆ ನೇರ ಸಂಬಂಧವಿದ್ದರೂ, ಸುಬ್ಬಮ್ಮನನ್ನೇ ಏಕೆ ಕೇಂದ್ರ ಪಾತ್ರವಾಗಿಸಿದರು? ಎಂದು ಹಾಕಿಕೊಂಡ ಪ್ರಶ್ನೆಗೆ ತಾವೇ ಕಥೆಯ ವಿಶ್ಲೇಷಣೆಗೆ ತೊಡಗುತ್ತಾರೆ. ಮನುಷ್ಯ ಪಾತ್ರಗಳಷ್ಟೇ ಪ್ರಮುಖವಾಗಿರುವುದು ನಿಸರ್ಗದ ಪರಿಸರವೆಂಬುದನ್ನು ಒತ್ತಿ ಹೇಳುತ್ತಾರೆ. ತಮ್ಮ ಅರಿಕೆ ಭಾಗದಲ್ಲಿ ಕಾದಂಬರಿಕಾರರು ಹೇಳಿರುವ ಮಾತುಗಳನ್ನು ನೆನಪಿಸುತ್ತಾ, 'ಕೋಲಾಹಲಕೆ' ಕಥೆಯನ್ನು ಓದದೆ, ಸಮಾಧಾನವಾಗಿ, ಸಚಿತ್ರವಾಗಿ ಸಜೀವವಾಗಿ ಓದಿ, ಇಲ್ಲಿ ಚಿತ್ರಿತವಾಗಿರುವುದು ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ. ಅನೇಕರಿಗೆ ಅದು ಸಂಪೂರ್ಣವಾಗಿ ಹೊಸ ಪ್ರಪಂಚವಾಗುತ್ತದೆ. ಹೊಸ ಊರಿಗೆ ಹೋಗುವವರು ಅಲ್ಲಿಯ ಜನ ಮತ್ತು ಜೀವನದ ವಿಚಾರವಾಗಿ ತಟಕ್ಕನೆ ಯಾವಾ ನಿರ್ಣಯವನ್ನೂ ಮಾಡಿಕೊಳ್ಳದೆ ಸ್ವಲ್ಪ ಕಾಲ ತಾಳ್ಮೆಯಿಂದಿದ್ದು ಕ್ರಮೇಣ ಬಳಕೆಯಿಂದ ಜನರನ್ನೂ ಜೀವನವನ್ನೂ ಪರಿಚಯ ಮಾಡಿಕೊಳ್ಳುವಂತೆ ಈ ಅರಣ್ಯ ಜಗತ್ತನ್ನು ಪ್ರವೇಶಿಸುವ

ವಾಚಕರು ವರ್ತಿಸಬೇಕಾಗುತ್ತದೆ' ಎನ್ನುವ ಮಾತುಗಳಿಗೆ ಅನುಗುಣವಾಗಿ ಲೇಖಕರು ಅದನ್ನು ಆದೇಶದಂತೆ ಪಾಲಿಸಿ ವಿಮರ್ಶಿಸಲು ಹೊರಡುತ್ತಾರೆ. ಕಾದಂಬರಿಯ ಮಾರ್ಫಾಲಜಿ ಮತ್ತು ಅನಾಟಮಿ ಎರಡೂ ನೆಲೆಗಳಲ್ಲಿ ವಿಮರ್ಶಿಸುತ್ತಾ, ಕಥಾವಸ್ತು, ಪಾತ್ರ, ಪ್ರಕೃತಿ ಪರಿಸರ ತಂತ್ರ, ಸ್ವರೂಪ ಇತ್ಯಾದಿಗಳನ್ನು ಅತ್ಯಂತ ಸೂಕ್ಷ್ಮವಾಗಿ ಅವಲೋಕಿಸಿ ಮೌಲಿಕವಾದ ಅಭಿಪ್ರಾಯಗಳ ನೆಲೆ ತಲುಪುತ್ತಾರೆ. ಈ ಕಾದಂಬರಿಯಲ್ಲಿನ ಜೀವನಾನುಭವದ ಅಸಾಧಾರಣ ವೈವಿಧ್ಯ ಏಕಮುಖ ಪರಿಣಾಮಕಾರಿತೆ, ಜನರ ನೀತಿ, ನಡತೆಗಳನ್ನು ಪ್ರಭಾವಿಸುವ ಅತಿ ಮಾನುಷ, ಅಮಾನುಷ, ಅವ್ಯಕ್ತ ಶಕ್ತಿಗಳ ಪಾತ್ರ, ಮನುಷ್ಯರ ಸ್ವಭಾವ ಜನ್ಯವಾದ ಕ್ರೌರ್ಯ, ಹಿಂಸೆ, ಈರ್ಷೆ, ಅಸೂಯಾ ಪ್ರವೃತ್ತಿಗಳು ಮನುಷ್ಯರ ನಡುವೆ ನೆಲೆಗೊಳಿಸುವ ಸಂಬಂಧಗಳ ಸ್ವರೂಪ, ಅವುಗಳ ಪರಿಣಾಮ, ಇವುಗಳ ಜೊತೆಗೆ ಹಾಗೆಯೇ ಇದ್ದಿರಬಹುದಾದ ಮಾನವೀಯ ಮನೋವೃತ್ತಿಗಳು, ಪ್ರಮುಖ ಪಾತ್ರವಾದ ಹೂವಯ್ಯನ ಆದರ್ಶೀಕೃತ ನಿಲುವುಗಳು, ವಿಚಾರಗಳು– ಹೀಗೆ ಎಷ್ಟೋ ವಿಚಾರಗಳನ್ನು, ಕಾದಂಬರಿಯ ತಂತ್ರಭಾಗವಾಗಿ ಬರುವ ಸನ್ನಿವೇಶ, ಸಂದರ್ಭ, ಘಟನೆಗಳು, ವಿಭಿನ್ನ ಮನೋಧರ್ಮ ಸ್ವಭಾವವುಳ್ಳ ಪಾತ್ರಗಳ ಮೂಲಕವಾಗಿ ವಿಸ್ತೃತವಾದ ವಿವರಣೆಯೊಂದಿಗೆ ಕಾದಂಬರಿಯ ಮೌಲಿಕತೆಯನ್ನು ಅವುಗಳ ಸಂಯೋಜನೆಯಲ್ಲಿ ಕಾದಂಬರಿಕಾರನ ದೃಷ್ಟಿ ಧೋರಣೆಗಳನ್ನು ವಿವರಿಸುತ್ತಾ, ಸಮರ್ಥಿಸುತ್ತಾ ಕೆಲವು ತೀರ್ಮಾನಿಕ ಅಭಿಪ್ರಾಯಗಳನ್ನು ತಮ್ಮ ವಿಮರ್ಶೆಯ ಭಾಗವಾಗಿ ವ್ಯಕ್ತಪಡಿಸುತ್ತಾರೆ. ಜೊತೆಗೆ ಬೇರೆ ಬೇರೆ ವಿಮರ್ಶಕರ ಅಭಿಪ್ರಾಯಗಳನ್ನು ಗಮನಿಸುತ್ತಾರೆ. ಮುಗಳಿಯವರು ಹೂವಯ್ಯನ ಸ್ವಭಾವಸತ್ವದ ಬಗ್ಗೆ ಎತ್ತಿದ ಆಕ್ಷೇಪ, ಹೂವಯ್ಯನ ಆಧ್ಯಾತ್ಮಿಕತೆಗಳ ಸ್ಪಷ್ಟ ಅರಿವು ಉಂಟಾಗುವುದಿಲ್ಲ; ಹೂವಯ್ಯ ಸೀತೆಯರ ಅನುರಾಗದ ಅಲೌಕಿಕತೆ ಈ ಕಾದಂಬರಿಯ ಉಳಿದ ಜೀವನದೊಂದಿಗೆ ಹಾಸು ಹೊಕ್ಕಿಲ್ಲ, – ಇತ್ಯಾದಿ ಇತ್ಯಾದಿ ಆಕ್ಷೇಪಗಳಿಗೆಲ್ಲ ಸಮರ್ಥವಾದ ರೀತಿಯಲ್ಲಿ ಉತ್ತರಿಸುತ್ತಾರೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ವಿಮರ್ಶೆಯನ್ನು ಕಾದಂಬರಿಕಾರರು ರಚನೆಯ ಹಿನ್ನೆಲೆಯನ್ನು ವಿವರಿಸುವ ಮಾತುಗಳನ್ನು ಗಂಭೀರವಾಗಿ ಪರಿಶೀಲಿಸಿ ವಿಶ್ಲೇಷಿಸುತ್ತಾರೆ. ಕಾದಂಬರಿಕಾರರು, ರಸಾಸ್ವಾದವನ್ನು ಕೃತಿ ರಚನೆಯನ್ನು ಸೃಜನಶೀಲವಾದ್ದು, ಇದಿಲ್ಲದೆ ಸರ್ವ ಕರ್ಮಗಳೂ ನೀರಸವಾಗುತ್ತವೆ ಎಂಬುದನ್ನು ವಿಮರ್ಶಕರು ಸಾಹಿತ್ಯ ವಿಮರ್ಶೆಗೆ ತಳಹದಿಯಾಗಬೇಕಾದ ರಸಗ್ರಹಣ ಪ್ರಕ್ರಿಯೆಯ ನಿರ್ದೇಶವಿದೆ ಎಂದು ಅರ್ಥೈಸಿಕೊಂಡು ಬಹುಶಃ ಅದೇ ನೆಲೆಯಿಂದ ಮುಂದಾಗಿದ್ದಾರೆ ಎನಿಸುತ್ತದೆ.

ಈ ಕಾದಂಬರಿಯಲ್ಲಿನ ವಿಸ್ತಾರ, ವೈವಿಧ್ಯತೆ ಮತ್ತು ಇವೆರಡೂ ಸಂಯುಕ್ತವಾಗಿ ಕಟ್ಟಿಕೊಡುವ ಜೀವನಾನುಭವ ಜೀವನ ಸಮೃದ್ಧಿಗಳನ್ನು ನಿದರ್ಶನಾತ್ಮಕವಾಗಿ ವಿವರಿಸಿದ್ದಾರೆ. ಜೊತೆಗೆ ಪ್ರಧಾನ ಕಥೆಯೊಂದಿಗೆ ಬೆಸೆದುಕೊಂಡ ಭರಮ್ಮೈ ಸಿಂಬಾವಿ, ಹೊಲೆಯರ ಗುತ್ತಿ, ಹೂವಳ್ಳಿ ವೆಂಕಟಪ್ಪನಾಯಕ, ಕಾವೇರಿ, ಚೀಂಕ್ರ, ದೇಯಿ, ಪೀಂಚಲು – ಇತ್ಯಾದಿ ಮುಖ್ಯ ಅಮುಖ್ಯ ಪಾಪುಗಳೆಲ್ಲದರ ಕತೆಗಳನ್ನು ಪ್ರಸ್ತಾಪಿಸಿ ಅವೆಲ್ಲ ಹೇಗೆ ಸರಿಸಮನಾಗಿ ಹೆಣೆದುಕೊಂಡಿವೆ ಎಂಬುದನ್ನು ತೋರಿಸುತ್ತಾರೆ.

ನಂತರ ಕಾದಂಬರಿಯ ಒಟ್ಟು ಆಶಯ, ಲೇಖಕರು, ನಿರೂಪಿತವಾದ ವಿಸ್ತೃತ ಅನುಭವದ ಮೂಲಕ ಹೇಳಬಯಸುವ ಅರ್ಥವಂತಿಕೆಯ ಸ್ವರೂಪವನ್ನು ಶೋಧಿಸುವ ನಿಟ್ಟಿನಲ್ಲಿ ಮುಂದುವರೆಯುತ್ತಾರೆ, ಹೆಣ್ಣು ಗಂಡುಗಳ ಸಂಬಂಧದ ಸ್ವರೂಪದ ಬಗ್ಗೆ ವಿಚಾರ ಮಾಡ ಹೊರಟ ವಿಮರ್ಶಕರಿಗೆ ಅನೈತಿಕ ಸಂಬಂಧಗಳೂ ಮದುವೆ ಎಂಬ ಸಾಮಾಜಿಕ ವ್ಯವಸ್ಥೆಗೆ ಒಳಪಟ್ಟಾಗ, ಹೆಣ್ಣು ಗಂಡುಗಳ ನಡುವೆ ಅನ್ಯೋನ್ಯತೆಗಳು ನಿಷ್ಠೆಯಾಗಿ ಪರಿವರ್ತಿತವಾಗುತ್ತವೆ ಎಂಬುದನ್ನುಕಾದಂಬರಿಯಲ್ಲಿ ಕಾಣಬರುವ ಪಾತ್ರಗಳನ್ನು ಉದಾಹರಿಸಿ ಹೇಳುತ್ತಾರೆ. ಹೀಗೆ ಪಾತ್ರಸಂಬಂಧವಾದ ಯಾವೊಂದು ಅಂಶವನ್ನೂ ಬಿಡದೆ, ಪ್ರತಿಪಾತ್ರದ ಪ್ರತಿ ಸನ್ನಿವೇಶದ, ಪ್ರಕೃತಿಯ ಪ್ರತಿಯೊಂದು ಕ್ರಿಯೆಯ ಹಿನ್ನೆಲೆಯನ್ನು ಗಂಭೀರವಾಗಿ ಗ್ರಹಿಸಿ, ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನೂ ಗಾಢ ಚಿಂತನೆಗೆ ಒಳಪಡಿಸಿ ಕಾದಂಬರಿಯ ಅರ್ಥವನ್ನು ಮಹತ್ವವನ್ನು ಮುಕ್ತ ಮನಸ್ಸಿನಿಂದ ಮೆಚ್ಚಿ ನುಡಿಯುತ್ತಾರೆ. ಕಾದಂಬರಿಕಾರರ ನಿರ್ಮಾಣ ಪ್ರತಿಭೆಗೆ ನಿರಂತರ ಸಾಕ್ಷಿಯಾಗಿ ನಿಲ್ಲಬಲ್ಲ ಇಲ್ಲಿಯ ಪಾತ್ರಗಳ ಜೀವಂತಿಕೆ, ವೈವಿಧ್ಯ, ವೈಶಿಷ್ಟ್ಯಗಳು ಇದೆಲ್ಲ ನಡೆದ ಕಥೆ ಎಂಬ ಭ್ರಮೆಯನ್ನುಂಟು ಮಾಡುತ್ತವೆ. ಒಬ್ಬರಂತೆ ಇನ್ನೊಬ್ಬರಿಲ್ಲ. ಹೆಂಗಸಾಯಿತು, ಗಂಡಸಾಯಿತು ಮಕ್ಕಳಾಯಿತು. ಹೆಸರು ಹೇಳಿದರೆ ಸಾಕು, ಅವರವರ ಚಿತ್ರ ಕಣ್ಮುಂದೆ ನಿಲ್ಲುತ್ತದೆ. ಕೇವಲ ಬಾಹ್ಯ ಲಕ್ಷಣಗಳಿಂದಲ್ಲ, ಅವರವರ ಸ್ವಭಾವ ಸತ್ವ ಅವರವರನ್ನು ನುಡಿಸುವ ನಡೆಸುವ ಬಗೆಗಳಿಂದಲೂ ಯಾವ ಕಾದಂಬರಿಗಾದರೂ ಜೀವಕಳೆ ತುಂಬಿ ಬರುವುದು." ಎಂದು ಕಾದಂಬರಿಕಾರರ ಸತ್ವ ಸಾಮರ್ಥ್ಯಗಳನ್ನು ಮೆಚ್ಚಿ ನುಡಿಯುತ್ತಾರೆ.



# ಬಿ.ಎಂ.ಶ್ರೀ ಬದುಕು ಬರಹ

ಕನ್ನಡದ ಕಣ್ವರೆಂದೇ ಗುರುತಿಸಿಕೊಂಡು ಕನ್ನಡದ ಪ್ರಸ್ತಾಪ ಬಂದಾಗಲೆಲ್ಲ ಅವರ ಹೆಸರಿನ ಪ್ರಸ್ತಾಪವಿಲ್ಲದೆ ಚರ್ಚೆ, ಚಿಂತೆನಗಳು ಮುಂದುವರೆಯುವುದೇ ಇಲ್ಲ, ಇಂಥ ಮಹಾನ್ ಕನ್ನಡ ಪ್ರೇಮಿಯ ಕುರಿತು ನೂರಾರು ಕೃತಿಗಳು ಹೊರಬಂದಿವೆಯಾದರೂ, ಬರೆಯುವುದು ನಿಂತೇ ಇಲ್ಲ. ಈ ರೀತಿಯ ಕೃತಿಗಳ ಸಾಲಿಗೆ ಸೇರುವ ಇನಾಂದಾರರ ಕೃತಿ ಬಿ.ಎಂ.ಶ್ರೀ - ಬದುಕು ಬರಹ ಪ್ರಕಟವಾದದ್ದು ೧೯೮೩ರಲ್ಲಿ. ಇನಾಂದಾರರು ಬರೆದ ಕೃತಿಗಳಲ್ಲಿ ಇದೊಂದು ಪುಟ್ಟ ಪುಸ್ತಕ ೬೧ ಪುಟಗಳಲ್ಲಿ ೧೪ ಭಾಗಗಳಲ್ಲಿ ಬಿ.ಎಂ.ಶ್ರೀ ಅವರ ಜೀವನ ಸಾಧನೆ ಸಾಹಿತ್ಯ ರಚನೆ ಇತ್ಯಾದಿ ಎಲ್ಲ ವಿವರಗಳನ್ನು ಅಡಕಗೊಳಿಸಿದ್ದಾರೆ. ಮೊದಲ ಭಾಗದಲ್ಲಿ ಬಿ.ಎಂ.ಶ್ರೀ ಅವರು ಕನ್ನಡದ ಕೆಲಸಕ್ಕೆ ಮುಂದಾಗುವ ಸಂದರ್ಭದಲ್ಲಿ ಕನ್ನಡನಾಡು ನುಡಿಯ ಸ್ಥಿತಿಗತಿಗಳನ್ನು ಮತ್ತು ಕನ್ನಡದ ಅಧ್ಯಯನ, ಕವಿ, ಲೇಖಕರಾದ ಪಂಜೆ, ಗೋವಿಂದ ಪೈ, ಶಾಂತಕವಿ, ಗುಳವಾಡಿ, ಕೆರೂರ ಮೊದಲಾದವರು ಕನ್ನಡ ಸಾಹಿತ್ಯದಲ್ಲಿ ನಡೆಸುತ್ತಿದ್ದ ಪ್ರಯೋಗಗಳನ್ನು, ಕನ್ನಡ ಭಾಷೆ, ಸಾಹಿತ್ಯದ ಬಗ್ಗೆ ಕಾಣಿಸಿಕೊಳ್ಳುತ್ತಿದ್ದ ನಿರ್ಲಕ್ಷ್ಯ, ತಿರಸ್ಕಾರಗಳ ಸ್ವರೂಪವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಎರಡನೇ ಭಾಗದಲ್ಲಿ ಶ್ರೀಯವರ ಜನನ, ಬಾಲ್ಯ, ವಿದ್ಯಾಭ್ಯಾಸದ ವಿವರಗಳನ್ನು ನೀಡಿದ್ದಾರೆ. ಬೆಳ್ಳೂರಿನ ಮೈಲಾರಯ್ಯನವರಿಗೆ ಹಿರಿಯ ಮಗನಾಗಿ ಜನಿಸಿ ಸಂಪಿಗೆ, ಶ್ರೀರಂಗಪಟ್ಟಣ, ಮೈಸೂರು ಮುಂತಾದ ಊರುಗಳಲ್ಲಿ ಹಂತಹಂತವಾಗಿ ವಿದ್ಯಾಭ್ಯಾಸ ಮುಗಿಸಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್, ಕನ್ನಡ ಅಧ್ಯಾಪಕ ಪದವಿ ಸಿಕ್ಕಿ ನಂತರ ಪದೋನ್ನತಿಗಳನ್ನು ಪಡೆಯುತ್ತಿದ್ದರಾದರೂ ಅವರ ಬದುಕಿನಲ್ಲಿ ಮಾತ್ರ ಒಂದಾದ ಮೇಲೊಂದು ದುರಂತಗಳು ಸಂಭವಿಸಿದವು. ಆದರೂ ಧೃತಿಗೆಡದೆ ಮುಂದುವರೆದು ಕನ್ನಡಕ್ಕೆ ಪುಷ್ಟಿ ಪಡೆಯಲು, ಕಾವ್ಯಕ್ಕೆ ಹೊಸ ದಾರಿಯೊಂದನ್ನು ಕಂಡುಕೊಳ್ಳಲು ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯದ ಕಾಲಘಟ್ಟದಲ್ಲಿನ ಪ್ರಮುಖ, ಪ್ರಾತಿನಿಧಿಕ ಕವಿಗಳ ಕವಿತೆಗಳನ್ನು ಕನ್ನಡಕ್ಕೆ ಭಾಷಾಂತರಿಸಿ ೧೯೨೬ರಲ್ಲಿ ಇಂಗ್ಲಿಷ್ ಗೀತಗಳು ಹೆಸರಿನಲ್ಲಿ ಪ್ರಕಟಿಸಿದರು. ಇದೇ ಸಮಯದಲ್ಲಿ ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್

ಆಗಿ ಕನ್ನಡಕ್ಕೆ ಪುನರುಜ್ಜೀವನ ನೀಡುವ ಪ್ರಯತ್ನದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ನಂತರ ಸೆಂಟ್ರಲ್ ಕಾಲೇಜಿಗೆ ಬಂದಮೇಲೆ ಅನೇಕ ಶೈಕ್ಷಣಿಕ ಸುಧಾರಣೆಗಳನ್ನು ಮಾಡಿದರು. ಹೊಸ ಕೋರ್ಸ್‌ಗಳು (ಕನ್ನಡ, ಇಂಗ್ಲಿಷ್‌ನಲ್ಲಿ) ವಿಚಾರ ಸಂಕಿರಣಗಳು, ವಿಶೇಷ ಉಪನ್ಯಾಸಗಳು ಇತ್ಯಾದಿಯಾಗಿ ಆರಂಭಿಸಿ ಕನ್ನಡ ಸಾಹಿತ್ಯಕ್ಕೆ ಗತಿಶೀಲತೆಯನ್ನು ನೀಡಿದರು – ಹೀಗೆ ಈ ಭಾಗದಲ್ಲಿ ಇನಾಂದಾರರು ಬಿ.ಎಂ.ಶ್ರೀ ಕನ್ನಡ ಕೆಲಸದ ಆರಂಭವನ್ನು ಶೈಕ್ಷಣಿಕ ವಲಯದಲ್ಲಿ ಪ್ರಾರಂಭಿಸಿ ಸಾರ್ವಜನಿಕ ನೆಲೆಗೆ ವಿಸ್ತರಿಸಿದ್ದನ್ನು ವಿವರಿಸಿದ್ದಾರೆ. ಕನ್ನಡಪರ ಭಾಷಣಗಳ ಮೂಲಕ ಕನ್ನಡಿಗರಲ್ಲಿ ಕನ್ನಡ ಭಾಷಾ ಪ್ರೇಮವನ್ನು ಜಾಗೃತಗೊಳಿಸುವ ಕೆಲಸದಲ್ಲಿ ತೊಡಗಿಸಿಕೊಂಡಿರುತ್ತಲೇ ಕನ್ನಡ ಪುಸ್ತಕಗಳ ಪ್ರಕಟಣೆಗೆ ಮೀಸಲಾದ ಪ್ರಸಾರಾಂಗದ ಯೋಜನೆಯನ್ನು ರೂಪಿಸಿದ್ದನ್ನೂ ಪ್ರಸ್ತಾಪಿಸಿದ್ದಾರೆ. ಇದರ ಜೊತೆಗೆ ಅವರು ಕೈಗೊಂಡ ಸಾಹಿತ್ಯ ಗ್ರಂಥಗಳ ರಚನೆ, ಗ್ರಂಥ ಸಂಗ್ರಹ, ಸಂಸ್ಕೃತ ಇಂಗ್ಲಿಷ್ ಮೂಲದ ಕೃತಿಗಳ ಅನುವಾದ ಕೆಲಸ, ಶಬ್ದಕೋಶಗಳಿಗೆ ಪೀಠಿಕೆಗಳನ್ನು ಬರೆಯುತ್ತಾ ಭಾಷಾ ಶ್ರೀಮಂತಿಕೆಯ ಬಗ್ಗೆ ಜನಸಾಮಾನ್ಯರಿಗೆ ತಿಳಿಸಿಕೊಡುವ ಕೆಲಸ–ಹೀಗೆ ಹತ್ತು ಹಲವಾರು ರೀತಿಯ ಸಾಹಿತ್ಯಿಕ, ಸಾಂಸ್ಕೃತಿಕ, ಭಾಷಿಕ ನೆಲೆಯಲ್ಲಿ ರಚನಾತ್ಮಕವಾಗಿ ತೊಡಗಿಸಿ ಕೊಂಡಿದ್ದನ್ನು ಮತ್ತು ಶ್ರೀಯವರು ಬರೆದ ಕೃತಿಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಇನಾಂದಾರರು ದಾಖಲಿಸಿದ್ದಾರೆ. ಬರಿ ಮಾಹಿತಿ ಕೊಡುವುದಕ್ಕಷ್ಟೇ ನಿಲ್ಲದೆ ಕೃತಿಗಳ ಕುರಿತಾದ ಚರ್ಚೆಯೂ ಇದ್ದು ಪುಟ್ಟ ಪುಸ್ತಕದ ಮಹತ್ವವನ್ನು ಹೆಚ್ಚಿಸಿದ್ದಾರೆ.

ಕೊನೆಯ ಭಾಗದಲ್ಲಿ ಲೇಖಕರು ಶ್ರೀಯವರ ಜೀವನದ ಧ್ಯೇಯೋದ್ದೇಶಗಳನ್ನು ಮತ್ತು ಅವರು ನಿರ್ವಹಿಸಿದ ಕಾರ್ಯ ವಿಸ್ತಾರವನ್ನೂ ಸಂಗ್ರಹವಾಗಿ ಉಲ್ಲೇಖಿಸಿದ್ದಾರೆ. ಶ್ರೀಯವರ ಜೀವನದ ಬಹು ಮುಖ್ಯ ಉದ್ದೇಶಗಳೆಂದರೆ ಅನ್ಯದೇಶ ಭಾಷೆಗಳಿಂದ ಬರುವ ಅರಿವು, ಜ್ಞಾನವನ್ನು ಬರಮಾಡಿಕೊಳ್ಳುವುದು ಮತ್ತು ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸುವುದು ಜೊತೆಗೆ ನಾಡನ್ನೂ ಒಗ್ಗೂಡಿಸುವುದು. ಇದಕ್ಕಾಗಿಯೇ ಅವರು ತಮ್ಮ ತನುಮನಧನವನ್ನು ಮೀಸಲಾಗಿರಿಸಿದರೆಂಬುದನ್ನು ಗುರುತಿಸಿದ್ದಾರೆ. ಸಂಸ್ಕೃತ, ಗ್ರೀಕ್ ಮೂಲಗಳಿಂದ ಕನ್ನಡ ಸಾಹಿತ್ಯ ಜಗತ್ತಿಗೆ ಮಹತ್ವದ ಕೊಡುಗೆಯಾಗಿ ಕೊಡುವುದರ ಜೊತೆಗೆ ಅಶ್ವತ್ಥಾಮ ಎಂಬ ನಾಟಕದ ಮೂಲಕ ಪ್ರಪ್ರಥಮವಾಗಿ ಗ್ರೀಕರ ರುದ್ರನಾಟಕದ ಪರಿಕಲ್ಪನೆಯನ್ನು ಕನ್ನಡ ನಾಟಕ ಸಾಹಿತ್ಯ ಜಗತ್ತಿಗೆ ಪರಿಚಯಸಿದ್ದನ್ನು ಸ್ಮರಿಸಿದ್ದಾರೆ. ಶ್ರೀಯವರ ಬಗ್ಗೆ ಅಭಿಮಾನದಿಂದ, ತಾವು ಗುರುತಿಸಿದಂತೆ, ಕೆಲವು ಮೌಲಿಕವಾದ ಅಭಿಪ್ರಾಯಗಳನ್ನು ಹೀಗೆ ವ್ಯಕ್ತಪಡಿಸಿದ್ದಾರೆ– "ನಮ್ಮ ಕನ್ನಡ ಸಾಹಿತ್ಯಕ್ಕೆ ಅವರು ನೀಡಿರುವ ಕಾಣಿಕೆಯ ಮೊತ್ತ ಅಲ್ಪವೇನಲ್ಲ. ಕನ್ನಡದ ನುಡಿಗಟ್ಟಿನಲ್ಲಿ ಸಂಸ್ಕೃತದ

ಬಳಕೆ ನಿರ್ದೇಶಿಸಿದರು. ಹೊಸಗನ್ನಡದಲ್ಲಿ ಛಂದಸ್ಸಿನ ಹೆದ್ದಾರಿಯನ್ನು ತೆರೆದರು. ಕನ್ನಡಕ್ಕೆ ತಮಿಳಿನಿಂದ ಆಗಬಹುದಾದ ನೆರವನ್ನು ನೆನೆದರು. ತಮ್ಮ ಧ್ಯೇಯ ಸಾಧನೆಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟರು. ತಮ್ಮ ವಾಗ್ವಿಲಾಸದಿಂದ, ಪಾಂಡಿತ್ಯದಿಂದ ಜನರನ್ನು ಎಚ್ಚರಿಸಿದರು; ಅವರಲ್ಲಿ ಕನ್ನಡದ ಅಭಿಮಾನವನ್ನು ಉಕ್ಕಿಸಿದರು. ಸಂಘ, ಸಂಸ್ಥೆಗಳನ್ನು ಕಟ್ಟಿದರು. ಕನ್ನಡ ಅವರ ಪಾಲಿಗೆ ದಿವ್ಯ ಮಂತ್ರವಾಗಿತ್ತು" ಎಂದೆಲ್ಲ ಹೇಳುತ್ತಾ ಇನಾಂದಾರರು ಬಿ.ಎಂ.ಶ್ರೀ ಅವರ ಸಮಗ್ರ ವ್ಯಕ್ತಿತ್ವವನ್ನೂ, ಸಾಹಿತ್ಯವನ್ನು ಅತ್ಯಂತ ಸಂಕ್ಷಿಪ್ತ ರೂಪದಲ್ಲಿ ಪರಿಚಯಿಸಲು ಪ್ರಯತ್ನಿಸುತ್ತಲೇ ಸಾಂದರ್ಭಿಕವಾಗಿ ಅವರ ಕೃತಿಗಳ ಕುರಿತು ಅಲ್ಲಲ್ಲಿ ಅಭಿಪ್ರಾಯ ಗಳನ್ನೂ ವ್ಯಕ್ತಪಡಿಸಿದ್ದಾರೆ.

■

# ಗೋವಿಂದ ಪೈಗಳ ಕಾವ್ಯ

ಇನಾಂದಾರ್ ವಿಮರ್ಶಾ ಕೃತಿಗಳ ವರ್ಗದಲ್ಲಿ ಮೊಟ್ಟಮೊದಲು ಬಂದ ಪುಟ್ಟ ಕೃತಿ ಇದಾಗಿದೆ. ಈ ಕೃತಿಯ ಬರಹದ ಹಿನ್ನೆಲೆಯನ್ನು ಇದರ ಇತಿಮಿತಿಗಳನ್ನು ಶ್ರೀನಿವಾಸ ಹಾವನೂರರು ಸಕಾರಣದೊಂದಿಗೆ ಹೀಗೆ ವಿವರಿಸಿದ್ದಾರೆ: "ಉಡುಪಿಯಲ್ಲಿ ಗೋವಿಂದ ಪೈ ಸಂಶೋಧನ ಕೇಂದ್ರವು ಆರಂಭವಾದ ಹೊಸತರಲ್ಲಿ ಮಾಡಿದ ಒಂದು ಉಪನ್ಯಾಸವು ಹೀಗೆ ಪ್ರಬಂಧದ ಸ್ವರೂಪವನ್ನು ಪಡೆಯಿತು. ಆಗ ಪೈಗಳ ಅರ್ಧದಷ್ಟು ಕವನಗಳು ಮಾತ್ರ ಸುಲಭವಾಗಿ ಲಭ್ಯವಿದ್ದುವು. ಜೊತೆಗೆ ವಿಸ್ತಾರ ಭಯವೂ ಇನಾಂದಾರರ ಲೆಕ್ಕಣಿಕೆಯನ್ನು ತಡೆದದ್ದರಿಂಧ ಪೈಗಳ ಕಾವ್ಯಮಾರ್ಗದ ಪಾರ್ಶ್ವವಷ್ಟೇ ಈ ಪುಟ್ಟ ಕೃತಿಯಲ್ಲಿ ಕಾಣಿಸಿಕೊಂಡಿದೆ ಅಷ್ಟನ್ನು ಮಾಡುವಾಗಲೂ ನಮ್ಮ ಇನಾಂದಾರರಿಗೆ ಒಂದಿಷ್ಟು ಅಳುಕು. ಏಕೆಂದರೆ ಯಾವುದೇ ವಿಮರ್ಶಕ ಒಬ್ಬ ಕವಿಯನ್ನು ಸಂಪೂರ್ಣವಾಗಿ ಅರ್ಥ ಆಡಿಕೊಳ್ಳಲಾರ. ಅದರಲ್ಲಿಯೂ ಪೈಗಳ 'ಸತ್ವಯುತವಾದ ಕಲ್ಪನಾವಿಲಾಸ' ತಲಸ್ಪರ್ಶಿಯಾದ ವಿದ್ವತ್ತು' ಆಳವಾದ ಸಾಹಿತ್ಯ ವ್ಯಾಸಂಗ ಮತ್ತು ಸಮತೂಕದ 'ಜೀವನದೃಷ್ಟಿ' ಇವುಗಳಿಂದ ಧೀರ ಧೀಮಂತವಾದ ಕಾವ್ಯಚೇತನವನ್ನು ಕುರಿತು ಬರೆಯುವುದು ಕಷ್ಟಕರ ಎಂಬುದೇ ಅವರ ಅಳುಕು" ಎಂದು ಇನಾಂದಾರರ ಹಿಂಜರಿಕೆಗೆ ಕಾರಣ ವಿವರಿಸಿದ್ದಾರೆ.

ಇನಾಂದಾರರು ಈ ಕೃತಿಯಲ್ಲಿ ಕಾವ್ಯದ ಸಮಗ್ರ ವಿಮರ್ಶೆಗೆ ತೊಡಗದೆ ತಮ್ಮ ಅನುಭವಕ್ಕೆ ಬಂದ ಕವಿತೆಗಳಲ್ಲಿನ ಚೆಲುವು, ರಸ ಸ್ನಿಗ್ಧತೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಗಿಳಿವಿಂಡು ಸಂಕಲನದಲ್ಲಿನ 'ನಂದಾದೀಪ'ದ ಮಾಲಿಕೆಯ ಕವಿತೆಗಳಲ್ಲಿ ಮೂಡಿಬಂದ ದೇಶಾಭಿಮಾನ, ದೈವಭಕ್ತಿ, ಪತ್ನಿಯ ಮೇಲಿನ ದೈವೀಪ್ರೇಮ ಮೊದಲಾದವುಗಳನ್ನು ಗುರುತಿಸಿ ವಿವರಿಸಿದ್ದಾರೆ.

ಗೊಲ್ಗೊಥಾ, ವೈಶಾಖಿ, ಹೆಬ್ಬೆರಳು – ಕೃತಿಗಳ ಬಗ್ಗೆ ವಿಮರ್ಶೆ ಮಾಡುತ್ತಾ – ಈ ಮೂರೂ ಕೃತಿಗಳ ಹೋಲಿಕೆಯಲ್ಲಿ ಗೊಲ್ಗೊಥಾವನ್ನು ಮುಕ್ತವಾಗಿ ಮೆಚ್ಚಿಕೊಂಡಿದ್ದಾರೆ. ಅಲ್ಲದೆ ವಸ್ತು ಸನ್ನಿವೇಶಗಳನ್ನು ಒಳಗೊಂಡ ಇಂಥ ಬೇರೊಂದು ಕಾವ್ಯ ಕನ್ನಡದಲ್ಲಿಲ್ಲ ಎಂದು ಹೇಳುತ್ತಾ ಅಲ್ಲಿನ ಉಪಮಾನಗಳ ಔಚಿತ್ಯ, ಅನ್ಯಾದೃಶತೆಯನ್ನು ಎತ್ತಿತೋರಿಸಿದ್ದಾರೆ. ವಿಮರ್ಶೆಯನ್ನು ಮಾಡುತ್ತಲೇ ಅಲ್ಲಲ್ಲಿ

ಗೋವಿಂದ ಪೈಗಳ ಕಾವ್ಯ ಸಂಬಂಧವಾದ ಕೆಲವು ತಾತ್ವಿಕ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತಾರೆ. ಅವರ ಗ್ರಹಿಕೆಗೆ ಬಂದ ಗೋವಿಂದ ಪೈ ಅವರ ಕಾವ್ಯದ ನಿಲುವುಗಳನ್ನು ಹೀಗೆ ಗುರುತಿಸುತ್ತಾರೆ:

"ಪೈ ಅವರಿಗೆ ಇಹಪರಗಳೆರಡೂ ಬೇರೆ ಬೇರೆಯಾಗಿ ಪರಸ್ಪರ ವಿರುದ್ಧವಾಗಿ ಕಾಣುತ್ತಿರಲಿಲ್ಲ. ಒಂದೇ ದಾರಿಯಲ್ಲಿಯ ಬೇರೆ ಬೇರೆ ಹಂತಗಳು ಅವು, ಎಂದು ನಂಬಿದವರು. ವೈಕುಂಠ ಕೈಲಾಸಗಳ ಅವರ ಕಲ್ಪನೆ ಅವರ ಸಾಮಾಜಿಕ ಪ್ರಜ್ಞೆಯಲ್ಲಿ ಹೇಗೆ ನೆಲೆ ನಿಂತಿತ್ತು ಎನ್ನುವುದನ್ನು ಆ ದೊಡ್ಡದರ ಕಡೆಗೆಯೇ ಹೇಗೆ ಅವರ ಬದುಕು ಒಲಿದಿತ್ತು ಎನ್ನುವುದನ್ನು ಸ್ಪಷ್ಟವಾಗಿ ಕಾಣಬಹುದು"– ಎಂದು.

ನಾಡು – ನುಡಿ ಪ್ರೀತಿಯನ್ನು ಗಮನಿಸುವ ಇನಾಂದಾರರು ಅವರ ಕಾವ್ಯದಲ್ಲಿ ಅದು ಹೇಗೆ ಬಂದಿದೆ ಎನ್ನುವುದನ್ನು, "ನಾಡು ತುಳು; ನುಡಿ ಕನ್ನಡ. ಇವೆರಡನ್ನು ಕುರಿತು ಅವರು ಬರೆದ ಎರಡು ಕವನಗಳು ಅವೆರಡರ ಘನತೆ ಗೌರವಗಳನ್ನು ದಿಕ್ಕು ದಿಕ್ಕಿನಲ್ಲಿ ಹುಯ್ಯುವ ಡಂಗುರಗಳಂತಿದೆ. ಹಿಂದಿನ ಉಜ್ವಲ ಇತಿಹಾಸ, ಇಂದಿನ ಉಜ್ವಲ ಅಭಿಮಾನಗಳೆರಡೂ ಸೇರಿ, ನಾಡು-ನುಡಿಗಳ ಜಯಭೇರಿಯಾಗಿ ನಿಂತಿದೆ. ನಾಡು-ನುಡಿಗಳಿಗೆ ಒಲಿದ ಕವಿಯ ಬಾಯಿ ಇತಿಹಾಸಜ್ಞನಿಗೆ, ಸಂಶೋಧಕನಿಗೆ ಸಿಕ್ಕಾಗ ಮಾತ್ರ ಇಂಥ ಕಾವ್ಯ" ಎನ್ನುತ್ತಾರೆ.

ಬದುಕಿನ ನಿಗೂಢತೆಗಳಲ್ಲಿ ಒಂದಾದ 'ಸಾವ'ನ್ನು ಕುರಿತ ಚಿಂತನೆಗಳನ್ನು ಕೇಂದ್ರವಾಗಿಸಿಕೊಂಡು ಬರೆದ 'ಗೊಲ್ಗೊಥಾ' 'ವೈಶಾಖಿ'ಯ ಬಗ್ಗೆ ಬರೆಯುತ್ತಾ, "ಸಾವು ಸಾಮಾನ್ಯನನ್ನು ತಲ್ಲಣಿಸುತ್ತದೆ; ಆದರೆ ಕವಿ ಚೇತನವನ್ನು ಅದರ ಅರ್ಥ, ಸೂಕ್ಷ್ಮಗೂಢದೆಡೆಗಿನ ದಾರಿಯಲ್ಲಿ ಓಡಿಸುತ್ತದೆ. ಅವರ ಹಿರಿಯ ಕೃತಿಗಳಾದ ಗೊಲ್ಗೊಥಾ, ವೈಶಾಖಿ ಎರಡೂ ಸಾವಿಗೆ ಸಂಬಂಧಪಟ್ಟವು ಎನ್ನುವುದನ್ನು ನೆನೆದಾಗ ಸಾವನ್ನು ಕುರಿತ ಆಲೋಚನೆ ಅವರಲ್ಲಿ ಬಹುಶಃ ತಮ್ಮ ಮಡದಿಯ ಮರಣದಿಂದ ಮೊದಲಾಯಿತೆನ್ನುವುದನ್ನು ಊಹಿಸಬಹುದು. ಈ ಆಲೋಚನೆಯ ಒಂದು ಹಂತವಾಗಿಯೇ ಮಹಾತ್ಮರ ಸಾವು ಸಾವಲ್ಲ; ಸಾಮಾನ್ಯರ ಬದುಕು-ಬದುಕಲ್ಲ' – ಎನ್ನುವ ಈ ಹೇಳಿಕೆಗಳು ಲೇಖಕರ ಕಾವ್ಯ ಕುರಿತಾದ ಗಂಭೀರ ಚಿಂತನೆಗಳ ದ್ಯೋತಕವಾಗಿದೆ. ಕಡೆಯ ಭಾಗದಲ್ಲಿ ಕಾವ್ಯದ ಭಾಷೆ, ಶೈಲಿಯ ವಿಶ್ಲೇಷಣೆ ಮಾಡಿದ್ದಾರೆ. ಅವರ ತಾತ್ವಿಕತೆಯ ಚಿಂತನೆಯನ್ನೂ ನಡೆಸಿದ್ದಾರೆ. ಇನಾಂದಾರರು, ಸೃಜನಶೀಲ ಮನೋಧರ್ಮದ ಜೊತೆ ಜೊತೆಗೆ ಸೂಕ್ಷ್ಮಾತಿ ಸೂಕ್ಷ್ಮ ವಿಮರ್ಶಕ ದೃಷ್ಟಿಯನ್ನೂ ವಿದ್ವತ್ತಿನ ಜೊತೆಗೆ ರೂಢಿಸಿಕೊಂಡವರಾಗಿ,

ಪೈರ ಕಾವ್ಯದ ಭಾಷೆ, ಶೈಲಿ ಕುರಿತು ವಿಶ್ಲೇಷಣಾತ್ಮಕ ವಿವರಣೆಯನ್ನು ಹೀಗೆ ನೀಡಿದ್ದಾರೆ:–

"ಕವಿಯ ಮನಸ್ಸಿನಲ್ಲಿ ಮೂಡಿ ನಿಂತ ಭಾವನೆಯ ಮೊಗ್ಗು ಅರಳಿ ಓದುಗನ ಮನಸ್ಸಿನಲ್ಲಿ ತನ್ನ ಅರ್ಥವನ್ನು ಯಥಾವತ್ತಾಗಿ ಬೀರಬೇಕಾದಾಗ ಆತ ಬಳಸುವ ಪದಗಳ ಹೊಂದಾಣಿಕೆಯಾಗಲಿ, ಅರ್ಥ ಸಾಮರ್ಥ್ಯವಾಗಲಿ ಮಾತ್ರ ಕಾರಣವಲ್ಲ, ಬಳ್ಳಿ ಪಡೆದ ಮೊಗ್ಗು ಎಲ್ಲಿಯೂ ವಿಕಾಸಗೊಂಡು ತನ್ನ ಪಾಡಿಗೆ ತಾನು ಎಲ್ಲಿಯೂ ಪರಿಮಳವನ್ನು ಬೀರುತ್ತದೆ. ಆದರೆ ಆ ಪರಿಮಳಕ್ಕೆ ಬಳ್ಳಿಯೊಂದೇ ಕಾರಣವೇ? ಅದು ಬೆಳೆದ ಮಣ್ಣು, ಕುಡಿದ ನೀರು, ಸೇವಿಸಿದ ಗಾಳಿ, ಬೆಳಕುಗಳೂ ತಮ್ಮ ಕೆಲಸವನ್ನು ಮಾಡಿರುತ್ತವೆ. ಇವೆಲ್ಲವುಗಳ ಪರಿಣಾಮವನ್ನು ನಾವು ಹೂವಿನಲ್ಲಿ ಕಾಣಬಹುದು. ಕವಿಯ ಭಾವಶಬ್ದ ರೂಪದಲ್ಲಿ ಮೂಡಿಬರುವಾಗ ಅವನ ಬದುಕು, ಅಧ್ಯಯನ, ಆಲೋಚನೆ, ಸಂಸ್ಕಾರ, ರಾಗದ್ವೇಷಗಳು, ಅರ್ಥದೃಷ್ಟಿ ಛಂದಬಂಧಗಳ ಬಗೆಗಿನ ಅರಿವು ಆ ಭಾವವನ್ನು ರೂಪಿಸುವುದರಲ್ಲಿ ಪರಿಣಾಮಕಾರಿಯದ ಅಂಶಗಳಾಗಿರುತ್ತವೆ. ಕವಿಯ ರುಚಿಗೆ ಹಿನ್ನೆಲೆಯಾದ ಸಂಸ್ಕೃತಿ ಅವರವರಲ್ಲಿ ಭಿನ್ನವಾಗಿರುವುದರಿಂದ ಪ್ರತಿಯೊಬ್ಬ ಕವಿಯ ಶೈಲಿ ತನ್ನದೇ ಆಗಿರುತ್ತದೆ" ಎಂದು ಹೇಳುತ್ತಾರೆ.

ಇನಾಂದಾರರ ಕಾವ್ಯ ವಿಶ್ಲೇಷಣೆಯ ಪರಿ ನೋಡಿದರೆ ಪೈ ಅವರ ಬಗ್ಗೆ ವಿಶೇಷವಾದ ಗೌರವ, ಅಭಿಮಾನಗಳು ಇದ್ದಂತೆ ಕಾಣುತ್ತದೆ. ಅದೂ ಅಲ್ಲದೆ ಲೇಖಕರು ಈ ಕೃತಿಯ ವಿಮರ್ಶೆಗೆ ತೊಡಗಿದ್ದ ಕಾಲಘಟ್ಟ ರಸವಿಮರ್ಶೆಯ ಕಾಲಘಟ್ಟವೇ ಆಗಿತ್ತು. ನಮ್ಮ ನವೋದಯ ಮನದವರ ಕಾವ್ಯ ಭಾವ ಕೇಂದ್ರಿತವೇ ಆಗಿದ್ದಂತೆ ವಿಮರ್ಶಕರ ನಿಲುವೂ ಭಾವಸ್ಯಂದಿ ವಿಚಾರಗಳನ್ನು, ಮನ ಮುಟ್ಟುವಂತಹ ರೀತಿಯ ನಿರೂಪಣೆಯನ್ನು ಸಹೃದಯತೆಯೊಂದಿಗೆ ನೋಡುವ, ಪರಿಭಾವಿಸುವುದರ ಕಡೆಗೇ ಇರುತ್ತಿದ್ದುದರಿಂದ ಮುಕ್ತ ಮನಸ್ಸಿನ ಮೆಚ್ಚಿಗೆಯೇ ವಿಮರ್ಶೆಯ ಪರಿಣಾಮವಾಗಿರುವುದು ಸ್ವಾಭಾವಿಕವಾಗಿತ್ತು. ಪೈಗಳ ಕಾವ್ಯ ವಿಚಾರದಲ್ಲಿ ಲೇಖಕರ ಧೋರಣೆಯೂ ಇದೇ ಆಗಿರುವುದು ಈ ಕೃತಿಯನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ.

■

# ಡಾ. ಅಂಬೇಡ್ಕರ್ ವ್ಯಕ್ತಿ ಮತ್ತು ವಿಚಾರ

ಜೀವನ ಚರಿತ್ರೆಗಳನ್ನು ಬರೆಯುವುದು ಒಂದು ದೊಡ್ಡ ಸವಾಲು. ಇವುಗಳ ರಚನೆಯಲ್ಲಿ ಯಾವುದೇ ಬಗೆಯ ಅವಾಸ್ತವ ಸಂಗತಿಗಳಿಗಾಗಲಿ ತಿರುಚಿದ ವಿಚಾರಗಳಿಗಾಗಲಿ, ಕಲ್ಪನೆಗಾಗಲಿ ಎಡೆಯಿಲ್ಲ. ಜೀವನ ಚರಿತ್ರೆಗಳು ಅಸಾಮಾನ್ಯ ವ್ಯಕ್ತಿಗಳ ವ್ಯಕ್ತಿತ್ವ ಸಾಧನೆ, ಚಿಂತನೆಗಳ ಸಂಕಲನವೂ ಐತಿಹಾಸಿಕ ಮಹತ್ವವನ್ನು ಒಳಗೊಳ್ಳುವ ದಾಖಲೆಗಳೂ ಆಗಿರುತ್ತವೆ. ಆದ್ದರಿಂದ ಅವುಗಳ ರಚನೆಯಲ್ಲಿ ಹೆಚ್ಚಿನ ಎಚ್ಚರಿಕೆ ಬೇಕಾಗುತ್ತದೆ. ಲೇಖಕರ ಜವಾಬ್ದಾರಿಯೂ ಹೆಚ್ಚಾಗಿರುತ್ತದೆ. ಎಲ್ಲಿಯೂ ಯಾವುದೇ ವಿವರಗಳು, ಸತ್ಯಾಂಶಗಳು, ಲೇಖಕನ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಎಲ್ಲವೂ ನಿಖರವಾಗಿ ಮತ್ತು ವಿಸ್ತೃತವಾಗಿ ಅಲ್ಲದಿದ್ದರೂ ಸಂಕ್ಷಿಪ್ತವಾಗಿ ಜೀವನ ಚರಿತ್ರೆ ಕೃತಿಯಲ್ಲಿ ದಾಖಲೆಯಾಗಲೇಬೇಕು. ಇಂತಹ ಅರಿವಿನೊಂದಿಗೆ ಇನಾಂದಾರರು ಡಾ. ಅಂಬೇಡ್ಕರರಂತಹ ದೈತ್ಯ ವ್ಯಕ್ತಿತ್ವವನ್ನು ಸಂಕ್ಷಿಪ್ತ ರೂಪದಲ್ಲಿ ಕೊಡಲು ಮುಂದಾಗಿರುವುದೇ ಒಂದು ದೊಡ್ಡ ಸಾಹಸ. ಅಂಬೇಡ್ಕರರ ಬದುಕು–ವ್ಯಕ್ತಿತ್ವ ಗುಣಸ್ವಭಾವ–ಸಾಮಾಜಿಕ–ಸಾಂಸ್ಕೃತಿಕ ಪರಿಸರದಲ್ಲಿ ಅನುಭವಿಸಿದ (ಜಾತಿಯ ಕಾರಣದಿಂದ) ಯಾತನೆ, ಮಾನಸಿಕ ಹಿಂಸೆ, ಸಮುದಾಯದ ಪರವಾಗಿ ನಡೆಸಿದ ಹೋರಾಟ–ಇವುಗಳ ಪರಿಣಾಮವಾಗಿ ಹೊಮ್ಮಿದ ಸಾಮಾಜಿಕ, ರಾಜಕೀಯ ಚಿಂತನೆಗಳು – ಕುರಿತಾದ ಅಪಾರ ರಾಶಿಯ ಬರಹದ ಸಂಪುಟಗಳು – ಹೀಗೆ ಇಷ್ಟೆಲ್ಲವನ್ನೂ ಸಿಂಧುವಿನಲ್ಲಿ ಬಿಂದುವಿನಂತೆ ಕೇವಲ ೧೬೪ ಪುಟಗಳಲ್ಲಿ ಭಟ್ಟಿ ಇಳಿಸಿಯೂ ಅಂಬೇಡ್ಕರರ ಸಮಗ್ರ ವ್ಯಕ್ತಿತ್ವವನ್ನು ಕಟ್ಟಿಕೊಳ್ಳಲು ಸಾಧ್ಯವಾಗುವಂತೆ ಸರಳವಾಗಿ, ಸಂಕ್ಷಿಪ್ತವಾಗಿ ಹರಳುಗಟ್ಟಿದ ಭಾಷೆಯಲ್ಲಿ ಓದುಗರಿಗೆ ತಲುಪಿಸಿದ್ದಾರೆ ಎನ್ನುವುದು ಒಂದು ಮಹತ್ವದ ಸಂಗತಿ.

ಇನಾಂದಾರರು ಅಂಬೇಡ್ಕರರ ಖಾಸಗಿ ಬದುಕಿನಲ್ಲಿ ವರ್ಣಾಧಾರಿತ ಸಮಾಜದ ತಾರತಮ್ಯ ಧೋರಣೆಯಿಂದ ಅನುಭವಿಸಿದ ಸಂಕಷ್ಟಗಳು, ಅವಮಾನಗಳು ಅಸಹನೀಯವೂ ಯಾತನಾಮಯವೂ ಆಗಿದ್ದರೂ ಅದರ ನಡುವಿನಿಂದಲೇ ಅವೆಲ್ಲವನ್ನೂ ಸವಾಲಿನಂತೆ ಎದುರಿಸಿ ಹಂತಹಂತವಾಗಿ, ಛಲದಿಂದಲೇ ವಿದ್ಯಾಭ್ಯಾಸ ಮುಂದುವರೆಸಿ ಉನ್ನತ ಪದವಿ, ಪಾಂಡಿತ್ಯಗಳನ್ನು

ಪಡೆದುದೇ ಅಲ್ಲದೆ, ಸಮಕಾಲೀನ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳನ್ನು ಗಮನಿಸುತ್ತಾ ಅವುಗಳ ವಿಚಾರವಾಗಿ ಗಂಭೀರವಾದ ಚಿಂತನೆ ನಡೆಸುತ್ತಾ, ತಮ್ಮದೇ ಆದ ಸ್ವತಂತ್ರ ವಿಚಾರ ನಿಲುವುಗಳನ್ನು ಕ್ರಾಂತಿಕಾರಕ ಆಲೋಚನೆಗಳನ್ನು ಸಾರ್ವಜನಿಕ ವೇದಿಕೆಗಳ ಮೂಲಕ, ಪತ್ರಿಕೆಗಳ ಮೂಲಕ ಬಹಿರಂಗಪಡಿಸುತ್ತ, ಅನೇಕ ರಾಜಕೀಯ ಮುಖಂಡರ ಸ್ವಾತಂತ್ರ್ಯ ಹೋರಾಟಗಾರರ ವಿಚಾರಗಳಿಗೆ ಮುಖಾಮುಖಿಯಾಗುತ್ತ ಸಂಚಲನವನ್ನು ಉಂಟು ಮಾಡತೊಡಗಿದರು. ತಮ್ಮ ಸಮುದಾಯದ ಮೇಲೆ ಆಗುತ್ತಿದ್ದ ಅತ್ಯಾಚಾರ, ಅನ್ಯಾಯ, ಶೋಷಣೆಗಳ ವಿರುದ್ಧ ಬಂಡೇಳುವಂತೆ ಸಂಘಟಿಸುತ್ತಿದ್ದರು. ಅಸ್ಪೃಶ್ಯರ ಬಗ್ಗೆ ಗಾಂಧೀಜಿಯವರ ಸಹಾನುಭೂತಿ ಇತ್ತು. ಜಾತಿ ಸಂಕೋಲೆಗಳಿಂದ ಬಿಡುಗಡೆಯಾಗದ ಹೊರತು ಅಸ್ಪೃಶ್ಯರಿಗೆ, ದಲಿತರಿಗೆ ಭವಿಷ್ಯವೇ ಇರುವುದಿಲ್ಲ ಎನ್ನುವ ಅಭಿಪ್ರಾಯವನ್ನು ಹೊಂದಿದ್ದರು. ಆದರೆ ಕಾಂಗ್ರೆಸ್ ಪಕ್ಷದ ನಾಯಕರಿಗೆ ಇವರ ಬಗ್ಗೆ ಅಂತಹ ಕಾಳಜಿ ಇರಲಿಲ್ಲ. ಆದ್ದರಿಂದ ಸ್ವಾತಂತ್ರ್ಯಾ ನಂತರದ ಸಮಾಜದ ಸ್ವರೂಪ ಹೇಗಿರಬೇಕೆಂಬುದರ ಕಲ್ಪನೆ ಯಾರಿಗೂ ಇರಲಿಲ್ಲವಾಗಿ ಅಂಬೇಡ್ಕರರಿಗೆ, ಅಸ್ಪೃಶ್ಯರಿಗೆ ದೊರೆಯಬೇಕಾದ ಸಾಮಾಜಿಕ ಸಮಾನತೆ, ಸಾಮಾಜಿಕ ನ್ಯಾಯ ದೊರೆಯುತ್ತ ದೆಂಬುದು ಖಾತ್ರಿ ಇರಲಿಲ್ಲ. ಆದ್ದರಿಂದ ನಿಮ್ನವರ್ಗದ ತಮ್ಮ ಸಮಾಜದ ಪರವಾಗಿ ದನಿ ಎತ್ತಿದ್ದು ಅನೇಕ ರಾಜಕೀಯ ಮುಖಂಡರಿಗೆ ಯಾಕೋ ಸರಿಬೀಳಲಿಲ್ಲ. ರಾಜಕೀಯ ಬಿಡುಗಡೆಯೊಂದೇ ಬಿಡುಗಡೆ ಎಂದು ಭಾವಿಸಿದ್ದವರಿಗೆ, ಜಾತಿ ಭೇದ, ವರ್ಣಭೇದಗಳಿಂದಲೂ ಬಿಡುಗಡೆಯಾದಾಗಲೇ ನಿಜವಾದ ಬಿಡುಗಡೆ ಎಂಬುದು ಅರ್ಥವಾಗಿರಲಿಲ್ಲ. ಆದರೆ ಅಂಬೇಡ್ಕರರು ನಿಜವಾದ ಬಿಡುಗಡೆ ಯಾವುದೆಂಬುದನ್ನು ಅರ್ಥ ಮಾಡಿಕೊಂಡಿದ್ದರು. ಹಾಗಾಗಿ ಅನೇಕ ರಾಜಕೀಯ ಮುಖಂಡರನ್ನು ಎದುರು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಇದರಿಂದಾಗಿ ಅನೇಕರ ನಿರ್ಲಕ್ಷ್ಯಕ್ಕೆ ಅಸಮಾಧಾನಗಳಿಗೆ ಗುರಿಯಾಗಬೇಕಾಗಿ ಬಂತು. ಆದರೂ ಬೆನ್ನು ಬಿಡದ ಬೇತಾಳನಂತೆ ಹಿಂದೆ ಬಿದ್ದು ತಮ್ಮ ಗುರಿ ಮುಟ್ಟುವವರೆಗೆ ಹೋರಾಟ ನಿಲ್ಲಲಾರದು ಎಂದು ಮಂದಿಗೆ ಮನವರಿಕೆ ಮಾಡಲು ಪರಯತ್ನಿಸಿದರು. ನಿಮ್ನ ವರ್ಗದವರ ಸ್ಥಾನಮಾನಗಳಿಗೆ ಧಕ್ಕೆಯುಂಟಾಯಿತು. ಬ್ರಿಟಿಷರ ಒಡೆದು ಆಳುವ ನೀತಿ, ಸರಕಾರದ ಧೋರಣೆಗಳು ಅಂಬೇಡ್ಕರರಿಗೆ ನಾಝಿಗಳಿಗಿತಲೂ, ಫ್ಯಾಸಿಸ್ಟ್‌ಗಳಿಗಿಂತಲೂ ಭಯಂಕರವೆನಿಸಿತು. ರಾಜಕೀಯ ನೈತಿಕತೆ, ದೇಶಪ್ರೇಮಗಳಿದ್ದರೂ ಅವರ ಹೋರಾಟಶೈಲಿ, ನಿಷ್ಠುರ ನಿಲುವುಗಳು, ಸರಕಾರದ ಪಕ್ಷಪಾತ, ಸ್ವಾತಂತ್ರ್ಯ ಹೋರಾಟದ ವಿರೋಧಿ' ಎಂದೆಲ್ಲ ಅಪಪ್ರಚಾರ ಮಾಡಲಾಯಿತು. ಸಂವಿಧಾನಶಿಲ್ಪಿಯಾದರೂ ನ್ಯಾಯ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಕ್ರೋಢೀಕರಿಸಿದವರೂ ಆಗಿಯೂ ಸ್ವಾತಂತ್ರ್ಯ

ಭಾರತ ಅವರನ್ನು ಸರಿಯಾಗಿ ಗುರುತಿಸುವಲ್ಲಿ ಅನ್ಯಾಯವೆಸಗಿತು. ಅವರಿಗೆ ಸಲ್ಲಬೇಕಾದ ಸ್ಥಾನಮಾನಗಳು ದೊರೆಯಲಿಲ್ಲ. ಮಂತ್ರಿಮಂಡಳದ ಸದಸ್ಯತ್ವಕ್ಕೂ ರಾಜೀನಾಮೆ ನೀಡಬೇಕಾದ ಅನಿವಾರ್ಯತೆ ಉಂಟಾದದ್ದೂ ಅವರ ಬದುಕಿನ ದುರಂತವೇ ಆಗಿದೆ.

ಇನಾಂದಾರರು ಇಂತಹ ಮಹಾನ್ ಸಾಧಕ, ಚಿಂತಕ, ಹೋರಾಟಗಾರ, ಕ್ರಾಂತಿಪುರುಷನ ಜೀವನದ ಹತ್ತಾರು ಮಗ್ಗುಲುಗಳನ್ನು, ವ್ಯಕ್ತಿತ್ವದ ಅನೇಕ ಮುಖಗಳನ್ನು, ಸಾಂಸಾರಿಕ ಬದುಕಿನ ಸಂಘರ್ಷಗಳನ್ನು, ಸಾಮಾನ್ಯ ಓದುಗನಿಗೂ ಆಪ್ತವೆನಿಸುವಂತೆ ಸುಂದರವಾಗಿ, ಸರಳವಾಗಿ, ಸಂಕ್ಷಿಪ್ತವಾಗಿ ತಮ್ಮ ಕೃತಿಯಲ್ಲಿ ಪರಿಚಯಿಸಿಕೊಟ್ಟಿದ್ದಾರೆ.

ಅಂಬೇಡ್ಕರರ ವಿಚಾರಗಳೆಲ್ಲವೂ ಸರ್ವಸಾಮಾನ್ಯವಲ್ಲ ಅವರ ಚಿಂತನೆಗಳಲ್ಲಿ ಇದ್ದ ದ್ವಂದ್ವಗಳು, ವಿರೋಧಾಭಾಸಗಳು ಅತಾರ್ಕಿಕ ನಿಲುವುಗಳು ಹಿಂದೂ ಸಮಾಜ, ಧರ್ಮಗಳ ಬಗೆಗಿದ್ದ ಪ್ರತಿಭಟನಾತ್ಮಕ ನಿಲುವಿನೊಂದಿಗೆ ಬೌದ್ಧ ಮತಾಂತರಗೊಂಡದ್ದು ಮುಂತಾದವುಗಳನ್ನು, ಇನಾಂದಾರರು ಹೇಳಲು ಹೋಗುವುದಿಲ್ಲ.

ತಮ್ಮ ಕೃತಿಯ ಆಶಯ, ಚರ್ಚೆ, ವಿರೋಧ, ಭಿನ್ನಾಭಿಪ್ರಾಯಗಳನ್ನು ಹುಟ್ಟುಹಾಕುವುದಲ್ಲ, ಅಂತಹ ಹಿರಿಯ ಚೇತನದ ಸಂಘರ್ಷಮಯ ಬದುಕು, ಸಾಧನೆ ಚಿಂತನೆಗಳ ಪರಿಚಯವಷ್ಟೇ ಎಂದು ತಿಳಿಸುತ್ತಾರೆ.

ಅಂಬೇಡ್ಕರರ ಆಲೋಚನೆಗಳನ್ನು ನಿರೂಪಿಸುವ, ವಿಶ್ಲೇಷಿಸುವ ಇನಾಂದಾರರ ನಿರೂಪಣಾ ಸಾಮರ್ಥ್ಯಕ್ಕೆ ಅವರು ಹೇಳುವ, ಅಂಬೇಡ್ಕರರ ಕುರಿತಾದ ಕೆಳಗಿನ ಸಾಲುಗಳೇ ಸಾಕ್ಷಿಯಾಗಿವೆ.

"ಅಂಬೇಡ್ಕರರು ಸ್ವತಂತ್ರವಾಗಿ ಕಾರ್ಯನಿರತರಾಗುವುದಕ್ಕೆ ಕಾರಣಗಳಿದ್ದವು. ರಾನಡೆಯಂಥ ಸುಧಾರಕರ ಗಮನ ಸ್ತ್ರೀಶಿಕ್ಷಣ ವಿಧವಾ ವಿವಾಹ, ಸ್ತ್ರೀಯರ ಆಸ್ತಿ ಹಕ್ಕು ಇತ್ಯಾದಿಗಳ ಕಡೆಗಿತ್ತಾದರೆ, ಅಂಬೇಡ್ಕರರಿಗೆ ಜಾತಿ ಪದ್ಧತಿಯನ್ನೇ ಇಲ್ಲದಾಗಿಸಿ ಸಮಾನತೆಯ ಆಧಾರದ ಮೇಲೆ ಇಡೀ 'ಹಿಂದೂ ಸಮಾಜದ ಪುನಾರಚನೆಯನ್ನು ಸಾಧಿಸಬೇಕಾಗಿತ್ತು. ಉಳಿದವರು ಪರಿಹರಿಸಬೇಕೆಂದ ಸಮಸ್ಯೆಗಳು ಮಧ್ಯಮ ಹಾಗೂ ಮೇಲು ವರ್ಗದವರ ಸಮಸ್ಯೆಗಳಾಗಿದ್ದವು. ಆರ್ಯ ಸಮಾಜ, ಹಿಂದೂ ಮಹಾಸಭೆಯಂಥ ಸಂಸ್ಥೆಗಳು ತಮ್ಮ ದಾರಿಯಲ್ಲಿ ಕೆಲಸ ಮಾಡುತ್ತಿದ್ದವು. ಇವರೆಲ್ಲರೂ ತಾವು ಶಿಷ್ಟರು, ಮೇಲ್ವರ್ಗದವರು ಎಂಬ ಹೆಚ್ಚಳದ ಮನೋಧರ್ಮದವರಾಗಿದ್ದರು. ಅಂಬೇಡ್ಕರರು ಇದರಲ್ಲಿಯ

ಹೀನಾಯುವನ್ನು ಅರ್ಥ ಮಾಡಿಕೊಂಡಿದ್ದರು. ದಲಿತರಿಗೂ ಇದು ತಿಳಿಯತೊಡಗಿತ್ತು. ತಮ್ಮ ಉತ್ಕರ್ಷವನ್ನು ತಾವೇ ಸಾಧಿಸುವ ಸಾಮರ್ಥ್ಯವನ್ನು ದಲಿತರೇ ಪಡೆಯುವುದು ಅಂಬೇಡ್ಕರರಿಗೆ ಮುಖ್ಯವಾಗಿ ಕಾಣುತ್ತಿತ್ತು. ಇದರಿಂದಾಗಿ ದಾರಿ ಬೇರೆಯಾಗಬೇಕಾಯಿತು." ಇಂಥ ಮಾತುಗಳು ಸನ್ನಿವೇಶದ ವಿಶ್ಲೇಷಣೆಯ ಮೂಲಕ ಅಂಬೇಡ್ಕರರ ನಿಲುವಿಗೆ ಸಮರ್ಥನೆಯನ್ನು ನೀಡಿದ್ದಾರೆ. ಇಂತಹ ಆಲೋಚನೆಗಳೊಂದಿಗೆ ಲೇಖಕರು ಬರೆಯಹೊರಟಿದ್ದರಿಂದ ಕೃತಿಯಲ್ಲಿ ಕೇವಲ ವಿವರಣೆಯೊಂದನ್ನೇ ನೀಡದೆ ಅಲ್ಲಲ್ಲಿ ವಿಮರ್ಶಾತ್ಮಕ ನಿಲುವುಗಳನ್ನೂ ತೋರಿದ್ದಾರೆ. ಅಸ್ಪೃಶ್ಯರ ವಿಚಾರವಾಗಿ ಗಾಂಧಿ ಮತ್ತು ಅಂಬೇಡ್ಕರರ ನಿಲುಗಳು ಹೇಗೆ ಭಿನ್ನವಾಗಿದ್ದವು ಮತ್ತು ಏಕೆ ಎಂಬುದನ್ನು "ಆದರ್ಶದ ದೃಷ್ಟಿಯಿಂದ ಗಾಂಧೀಜಿಯವರ ದೃಷ್ಟಿ ಸರಿಯಾಗಿರಬಹುದು. ಆದರೆ ಅಂಬೇಡ್ಕರರಿಗೆ ಅಸ್ಪೃಶ್ಯರ ಸಮಸ್ಯೆ ಒಂದು ದಿನನಿತ್ಯದ ವ್ಯಾವಹಾರಿಕವಾದ ಸಮಸ್ಯೆಯಾಗಿತ್ತು. ಆದರ್ಶದ ಮಾತುಗಳನ್ನು ನಂಬಿಕೊಂಡು ಪರಿಹಾರಕ್ಕಾಗಿ ಅನಿರ್ದಿಷ್ಟ ಕಾಲ ಕಾಯುತ್ತಿರುವುದು ಅವರಿಗೆ ಬೇಡವಾಗಿತ್ತು. ಒಲಿಸುವುದಾಗದಿದ್ದಾಗ ಒತ್ತಾಯವೊಂದೇ ದಾರಿಯೆಂದು ಅವರು ಸಮಸ್ಯೆಯನ್ನು ರಾಜಕೀಯ ದೃಷ್ಟಿಯಿಂದ ಕಂಡು ವ್ಯವಹಾರ್ಯವಾದ ಪರಿಹಾರವನ್ನು ಒದಗಿಸಿ ಕೊಡುವ ಯತ್ನ ಮಾಡಿದರು. ಹೀಗೆ ಗುರಿ ಒಂದೇ ಆದರೂ ದೃಷ್ಟಿ ಭೇದದಿಂದಾಗಿ ಅಸ್ಪೃಶ್ಯತಾ ನಿವಾರಣೆಯ ವಿಷಯದಲ್ಲಿ ಗಾಂಧೀಜಿ ಹಾಗೂ ಅಂಬೇಡ್ಕರರ ದಾರಿಗಳು ಬೇರೆಯಾದವು" ಎಂದು ಸತರ್ಕ ವಿಮರ್ಶೆಯೊಂದಿಗೆ ಸನ್ನಿವೇಶದ ಒಂದು ಸ್ಪಷ್ಟ ಕಲ್ಪನೆ ಬರುವಂತೆ ಮಾಡುತ್ತಾರೆ. ಕ್ಲೀಷೆಯಿಲ್ಲದ ಭಾಷೆಯೇ ಎಲ್ಲ ಬರಹಗಳ ಜೀವನಾಡಿಯಾದರೂ, ಜೀವನ ಚರಿತ್ರೆಗಳ ರಚನೆಯಲ್ಲಿ ಇಂಥದ್ದು ಬಹಳ ಅನಿವಾರ್ಯವಾಗುತ್ತದೆ.



# ಮಂಗಲ್ಯಾಂಡಿನಲ್ಲಿ ಮೂರು ವಾರ

ಇದೊಂದು ಕಾಲ್ಪನಿಕ ಪ್ರವಾಸ ಕಥನವೇ ಆದರೂ ಅಲ್ಲಿಯ ಜನಜೀವನದ ವಿಡಂಬನೆಯ ಮೂಲಕ ನಮ್ಮ ದೇಶದ ಸಂಸ್ಕೃತಿ ಜನಜೀವನದ ರೀತಿಯನ್ನು ಬಿಂಬಿಸುತ್ತಾರೆ. ವೈಜ್ಞಾನಿಕ ಪ್ರಗತಿಯ ಉತ್ತುಂಗದಲ್ಲಿರುವ ಅತ್ಯಂತ ಪ್ರಗತಿಪರ ದೇಶವೆಂದು ಪರಿಗಣಿಸಲಾಗಿರುವ ದೇಶದ ಸಾಂಸ್ಕೃತಿಕ ಅವನತಿಯನ್ನು ದರ್ಶನ ಮಾಡಿಸುತ್ತಾರೆ. ವಸ್ತು ಕಾಲ್ಪನಿಕವೇ, ಆದರೆ ಅಲ್ಲಿ ನಡೆಯುವ ಸಂಗತಿಗಳೆಲ್ಲ ವಾಸ್ತವ ಲೋಕದ್ದೇ. ಅಲ್ಲಿನ ಜನರ, ಅಧಿಕಾರಿಗಳ ರಾಜಕಾರಣಿಗಳ ಎಲ್ಲ ಸ್ವಭಾವಗಳೂ ಅಧಿಕಾರಾಕಾಂಕ್ಷೆ, ಭ್ರಷ್ಟತೆ ಮತ್ತು ಪ್ರತಿಯೊಂದು ರಂಗದಲ್ಲಿಯೂ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ – ಎಲ್ಲೆಲ್ಲೂ ಈಗ ಎಲ್ಲೆಡೆ ಕಾಣುತ್ತಿರುವ ಭ್ರಷ್ಟ ಪರಿಸರವೇ' ಇಂಥದ್ದೆಲ್ಲವನ್ನೂ ಹಂತಹಂತವಾಗಿ ತಮ್ಮ ಅನುಭವಕ್ಕೆ ಬರುವ ಸನ್ನಿವೇಶಗಳ, ಸಂದರ್ಭಗಳ, ಘಟನೆಗಳ, ವ್ಯಕ್ತಿಗಳ ಮೂಲಕವೇ ನಮ್ಮ ದೇಶದ ವರ್ತಮಾನದ ಚಿತ್ರವನ್ನೇ ಬಿಂಬಿಸುತ್ತಾರೆ. ಹೀಗೆ ಬಿಂಬಿಸುವಲ್ಲಿ ವ್ಯಂಗ್ಯ ವಿಡಂಬನೆಯ ಶೈಲಿಯ ಮೂಲಕ, ನಮ್ಮ ದೇಶವನ್ನೇ ಪರೋಕ್ಷವಾಗಿ ಟಾರ್ಗೆಟ್ ಮಾಡುತ್ತಾರೆ. ಅವರೇ ಹೇಳುವಂತೆ ಅಂದಂದು ತೋಚಿದ ವಿಷಯವನ್ನು ಲಘು ಹಾಸ್ಯದ ಅಥವಾ ವ್ಯಂಗ್ಯದ ದೃಷ್ಟಿಯಿಂದ ಕಂಡು ಮನಸ್ಸು ಹರಿದ ಹಾಗೆ ಬರೆದಿದ್ದಾರೆ.

ಇವರ ಈ ಕೃತಿ ರಚನೆಗೆ ಪ್ರೇರಣೆ, ರಷ್ಯದವರೋ ಅಮೆರಿಕಾದವರೋ ಕಳಿಸಿದ ಒಂದು ಉಪಗ್ರಹ ಮಂಗಳಗ್ರಹದ ಹತ್ತಿರ ಹೋಗಿ, ಅದು ಭೂಮಿಗೆ ಕಳುಹಿಸಿದ ಒಂದು ಕ್ಲೋಸಪ್ ಚಿತ್ರದ ಸ್ವರೂಪದಲ್ಲಿ ಊಹಿಸಿಕೊಳ್ಳುತ್ತಾ ಹೋದಂತೆ ಅವರ ಕಲ್ಪನೆಯಲ್ಲಿ ಮಂಗಲ್ಯಾಂಡ್ ಉದ್ಭವವಾಗುತ್ತದೆ. ಅದಕ್ಕೆ ಪ್ರವಾಸ ಹೊರಟು ಅಲ್ಲಿನ ಸ್ಥಿತಗತಿ, ಪರಿಸರ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಜೀವನಶೈಲಿ, ಅಲ್ಲಿನ ಜನರ ನಡಾವಳಿ ಮುಂತಾದವನ್ನೂ, ವಾಸ್ತವವನ್ನೂ ದಿಗ್ಭ್ರಮೆಗೆ ದೂಡುವಂತೆ ಚಿತ್ರಿಸಿದ್ದಾರೆ. ಇವರು ತಾವೇ ರೂಪಿಸಿಕೊಂಡ ವಿಮಾನವೇರಿ ಮಂಗಳ ಲೋಕವನ್ನು ಪ್ರವೇಶಿಸುತ್ತಾರೆ. ಅವರು ಅದಕ್ಕೆ 'ಇಂಡಿಯಾ'ದ ಅಣಕ ರೂಪವಾದ 'ಹಿಂಡಿಯಾ' ಎಂದು ನಾಮಕರಣ ಮಾಡುತ್ತಾರೆ. ಪ್ರಯಾಣ, ಪ್ರವೇಶವಾದ ನಂತರ ಅದು ಮಂಗಲ್ಯಾಂಡ್ ಎಂಬುದು ಅನುಭವಕ್ಕೆ ಬರುತ್ತದೆ.

ವಿಚಿತ್ರ ವ್ಯಕ್ತಿಗಳು, ವಿಚಿತ್ರ ಸನ್ನಿವೇಶಗಳು, ಸಂದರ್ಭಗಳು, ಆಡಳಿತ ವ್ಯವಸ್ಥೆ, ಕಣ್ಣಿಗೆ ಬೀಳುತ್ತದೆ. ವಿಚಿತ್ರವೆಂದರೆ ಅಲ್ಲಿ ಲೋಕಸಭೆಗೆ ಚುನಾಯಿತರಾದವರೆಲ್ಲರೂ ಮಂತ್ರಿಗಳೇ ಆಗಿರುವುದು ರಾಜಕೀಯ ಪ್ರಗತಿಗೆ ನಿದರ್ಶನವಾಗಿದ್ದಾರೆ, ತಿಂದು ತಿಂದು ಪ್ರತಿಯೊಬ್ಬ ಮಂತ್ರಿಯೂ ದಷ್ಟಪುಷ್ಟರಾಗಿದ್ದಾರೆ. ತಾವು ಭಾರತದಿಂದ ಬಂದವರೆಂದು ತಿಳಿಯುತ್ತಿದ್ದಂತೆ ಮತ್ತು ಈ ದೇಶದ ಬಗ್ಗೆ ತುಂಬ ಗೌರವ ಇದ್ದುದರಿಂದ ಇವರಿಗೆ ಅಭೂತಪೂರ್ವ ಸ್ವಾಗತ ದೊರೆಯುತ್ತದೆ. ಇಲ್ಲಿಗಿಂತ ಹೆಚ್ಚಿನ ಸಾಧನೆ ಅಲ್ಲಿ ಕಾಣುತ್ತಾರೆ. ಪ್ರತಿಯೊಂದು ದಿಕ್ಕಿನಿಂದಲೂ ನಮಗಿಂತ ಮೇಲ್ಮಟ್ಟವನ್ನು ತಲುಪಿದ್ದಾರೆ. ಬದುಕಿನ ಅಸಂಗತತೆ, ಭ್ರಷ್ಟತೆ, ಲಂಚಗುಳಿತನ, ಸ್ವೇಚ್ಛೆ ಸ್ವಚ್ಛಂದತೆಗಳಲ್ಲಿ, ಐಷಾರಾಮಿ ಬದುಕಿನಲ್ಲಿ, ಸ್ವಾರ್ಥಲೋಭಗಳಲ್ಲಿ – ಯಾವುದರಲ್ಲಿಯೂ ಗುಲಗಂಜಿಯಷ್ಟೂ ಹಿಂದೆ ಬಿದ್ದಿಲ್ಲ. ಹೀಗಾಗಲು ಕಾರಣ ನಮ್ಮ ಸರಕಾರ, ನಮ್ಮ ಮಂತ್ರಿಗಳು, ನಮ್ಮ ಮಂದಿಯೇ! ನಮ್ಮ ದೇಶದ ವಸ್ತುಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡವರಲ್ಲವಾದ್ದರಿಂದ ಅವರ ದೃಷ್ಟಿಯಲ್ಲಿನ ಭಾರತ ಮಹೋನ್ನತ, ಅವರ ಜನರ ರಾಷ್ಟ್ರೀಯ ಘೋಷಣೆ, 'ಜೈಹಿಂದ್'ಗೆ ಸಂವಾದಿಯಾಗಿ, ಪ್ರಾಸಬದ್ಧವೆನಿಸುವ 'ಜೀವಾಹಿಂಡ್' – ಎಂಬುದು ಲೇಖಕರ ತೀಕ್ಷ್ಣ ವಿಡಂಬನಾತ್ಮಕ ಅಭಿಪ್ರಾಯವಾಗಿದೆ. ಹೋಟೆಲುಗಳು ಸರಕಾರಿ ಉದ್ಯಮವಾದ್ದರಿಂದ ಯಾವುದಕ್ಕೂ ಅತಿಥಿಯಾಗಿ ಹೋಗಿರುವ ಅವರಿಗೆ ಕೊರತೆಯೆಂಬುದಿಲ್ಲ. ಆದರೆ ಆಹಾರಕ್ಕೆ ಬದಲಾಗಿ 'ಹಸಿವಿನ ಮಾತ್ರೆ' ಅವರೆದುರಿಗೆ ಬಂದಾಗ ಮಾತ್ರ ದಿಗ್ಭ್ರಮೆಗೊಳ್ಳುತ್ತಾರೆ.

ಮಂತ್ರಿಗಳಿಗೆ ವೈಭವೋಪೇತ ವಸತಿ, ಕೈಗೊಬ್ಬ, ಕಾಲಿಗೊಬ್ಬ, ಮಂತ್ರಿಗೊಬ್ಬ ಮಂತ್ರಿ ಸಹಾಯಕ (dignity of labour) ಯಾವ ಮಂತ್ರಿ, ಯಾವ ಕೆಲಸ ಮಾಡಿದರೂ ತಾರತಮ್ಯವಿಲ್ಲ, ಎಲ್ಲರೂ ಸಮಾನ ಗೌರವಕ್ಕೆ ಅರ್ಹರು. ಯಾರಿಗೆ ಯಾರೂ ವಿರೋಧಿಯಿಲ್ಲ. ಆದ್ರಿಂದ ವಿರೋಧ ಪಕ್ಷವೆಂಬುದೇ ಅಗತ್ಯವಿಲ್ಲ. ಗುಂಪುಗುಳಿತನ, ಒಳಸಂಚು, ವಾಗ್ವಾದ, ಕೆಸರೆರೆಚಾಟ, ಪಕ್ಷಾಂತರ ಪೀಡೆ ಯಾವುದೂ ಇಲ್ಲ. ಸರಕಾರವೂ ಯಾವುದನ್ನೂ ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಅದಕ್ಷತೆ, ನಿರ್ಲಕ್ಷ್ಯ ಅಧಿಕಾರಿಗಳ ದೌರ್ಜನ್ಯ, ಪೋಲಿಸ್ ವ್ಯವಸ್ಥೆಯಲ್ಲಿನ ಕ್ರೌರ್ಯ ಎಲ್ಲವೂ ನಮ್ಮ ದೇಶದ್ದು ಪ್ರತಿಫಲಿಸಿದಂತಿದೆ.

ಸಾಲದ್ದಕ್ಕೆ ಶಿಕ್ಷಣ ಇಲಾಖೆ, ಆರೋಗ್ಯ ಇಲಾಖೆ, ಸಾಮಾಜಿಕ ಪರಿಸ್ಥಿತಿ, ಸ್ತ್ರೀಯರ ಪರಿಸ್ಥಿತಿ, ಗ್ರಾಮೀಣ ಪರಿಸರ – ಯಾವುದನ್ನು ನೋಡಿದರೂ ಹೀನಾಯ ವ್ಯವಸ್ಥೆಯೇ.

ಶಿಕ್ಷಣ ವ್ಯವಸ್ಥೆಗೆ ಬಂದರೆ – ಶಿಕ್ಷಣ ನೀತಿ ಅತ್ಯಂತ ದರಿದ್ರವಾಗಿದೆ. ಶಾಲೆಗಳೋ ದೊಡ್ಡಿಗಳು, ಪ್ರತಿಯೊಂದಕ್ಕೂ ಮುಷ್ಕರ. ತಮ್ಮ ಬೇಡಿಕೆಗಳಿಗೆ ಮಾನ್ಯತೆ ನೀಡಬೇಕೆಂಬ ಒತ್ತಾಯ. ವಿದ್ಯಾರ್ಥಿಗಳಲ್ಲಿ ಮಾನಸಿಕ ವಿಕೃತಿ, ಮನೋದೌರ್ಬಲ್ಯ. ವಿದ್ಯಾರ್ಥಿಗಳಿಗೆ ಒಳ್ಳೆಯ ಶಿಕ್ಷಣ ನೀಡುವುದಕ್ಕಿಂತ, ಶಿಕ್ಷಣದ ಹೆಸರಿನಲ್ಲಿ ಸ್ವಾರ್ಥ. ಹಣದ ಉಳಿತಾಯಕ್ಕೆಂದು ಯಾವುದೇ ಸೌಲಭ್ಯಗಳಿಲ್ಲದ ದನದ ದೊಡ್ಡಿಗಳಂತಹ ಶಾಲೆಗಳು, ಹಣದಿಂದ ಪರೀಕ್ಷೆಗಳಲ್ಲಿ ಪಾಸು, ಶಿಕ್ಷಣ ಮಂತ್ರಿಗಳಿಂದ ದಿವ್ಯ ನಿರ್ಲಕ್ಷ್ಯ, ಕಾಲೇಜು ಯುವಕರಲ್ಲಿ ತುಂಬಿ ತುಳುಕುತ್ತಿರುವ ಸ್ವಚ್ಛಂದತೆ, ಫ್ಯಾಷನ್ ಮೋಹ, ಐಷಾರಾಮಿತನ, ಲಂಗುಲಗಾಮಿಲ್ಲದ ನಡವಳಿಕೆ, ದುರಭ್ಯಾಸಗಳು, ಪದವಿ ಗಿಟ್ಟಿಸಿಕೊಳ್ಳುವ ತಂತ್ರ ನೈಪುಣ್ಯ, ವಿದ್ಯಾರ್ಥಿಗಳ ಬೆನ್ನಿಗೆ ರಾಜಕಾರಣಿಗಳ ಸದಾಕಾಲ ವರದಹಸ್ತ! ಇವೆಲ್ಲವುಗಳ ಸ್ಪಷ್ಟ ದರ್ಶನ.

ಆರೋಗ್ಯ ಇಲಾಖೆಯೂ ಹಿಂದೆ ಬಿದ್ದಿಲ್ಲ. ಇಲ್ಲಿರುವ ಸರಕಾರಿ ಆಸ್ಪತ್ರೆಗಳ ದುಃಸ್ಥಿತಿ, ವೈದ್ಯರ ನಿರ್ಲಕ್ಷ್ಯ, ಆಸ್ಪತ್ರೆಗಳಿರುವುದು, ಅಲ್ಲಿನ ವೈದ್ಯರ ಪ್ರಕಾರ, ರೋಗಿಗಳನ್ನು ರೋಗಮುಕ್ತರಾಗಿಸುವುದಕ್ಕಲ್ಲ ಬದಲಾಗಿ ಮೇಲೆ ಕಳಿಸುವುದೇ ಆಗಿದೆ. ಸ್ವಂತ ಸುಖವೇ ವೈದ್ಯರ ಧ್ಯೇಯ.

ಮಂಗಲ್ಯಾಂಡಿನ ಸಾಹಿತಿಗಳ ಬಗ್ಗೆ ಹೇಳುವುದೇ ರೋಚಕವೆನಿಸುತ್ತದೆ. ಕಿರಿಯ ಬರಹಗಾರರಿಗೆ, ಹಿರಿಯ ಬರಹಗಾರರಲ್ಲಿ ನಿರಾಸಕ್ತಿ. ಹಾಗೆಯೇ ಹಿರಿಯ ಬರಹಗಾರರಿಗೆ ಕಿರಿಯ ಬರಹಗಾರರಲ್ಲಿ ನಿರಾಸಕ್ತಿ ಸಾಹಿತ್ಯ ಕ್ಷೇತ್ರದಲ್ಲಿ ಗುಂಪುಗಾರಿಕೆ, ರಾಜಕೀಯ ವ್ಯಕ್ತಿ ಪ್ರತಿಷ್ಠೆ, ಅಹಂಕಾರ, ಕೃತಿಗಿಂತ ವ್ಯಕ್ತಿಗೆ ಮಹತ್ವ, ಇನ್ನು ಧಾರ್ಮಿಕ ವಲಯವಂತೂ ನಾಚಿಕೆಗೇಡಿನದು. ಹೊರಗೆ ಉಡುವುದು ಕಾವಿ ಒಳಗಿನಿಂದ ಮಾಡುವುದು ಧರ್ಮಭ್ರಷ್ಟ ಕೆಲಸಗಳು. ಕಾವಿಯ ದುರ್ಲಾಭ. ಡಾಂಭಿಕತೆ, ಹೊಲಸು ಬದುಕು, ಅಧಿಕಾರ ಲೋಲುಪತೆ, ಹಣದಾಹ.

ಸ್ತ್ರೀಯರ ಸ್ವಾತಂತ್ರ್ಯವೆಂದರೆ ವಿಲಾಸ ಜೀವನ, ಚಾರಿತ್ರ್ಯನಾಶ, ಸ್ವಚ್ಛಂದತೆಯೇ ಸ್ವಾತಂತ್ರ್ಯವೆಂಬ ಘೋಷಣೆ, ಯಾವ ಮಟ್ಟದ ನೈತಿಕ ಪತನಕ್ಕೂ ಸಿದ್ಧವಾಗಿ ನಿಲ್ಲಬೇಕೆಂಬ ನಿಲುವು.

ಹಳ್ಳಿಗಳ ಸ್ಥಿತಿಯಂತೂ ಮತ್ತೂ ದಾರುಣ ಬಂಜರು ಭೂಮಿ. ನಿರ್ದಾಕ್ಷಿಣ್ಯವಾಗಿ ಅರಣ್ಯ ನಾಶ. ನಗರ ಸಂಸ್ಕೃತಿಯಿಂದ ಸೆಳೆಯಲ್ಪಟ್ಟ ರೈತರು ಕೃಷಿಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ನಗರಗಳಲ್ಲಿ ಆಧುನಿಕ ಬದುಕಿನ ಪರಿಸರದ ನಿರ್ಮಾಣ. ಇವಿಷ್ಟನ್ನೂ ಲೇಖಕರು ತಮ್ಮ ಪ್ರವಾಸದಲ್ಲಿ ಕಂಡುಕೊಂಡ ಮಂಗಾಲ್ಯಾಂಡ್ ಸಂಸ್ಕೃತಿಯ ಸ್ವರೂಪ ಚಿತ್ರಣ, ನೋಡುತ್ತಿದ್ದ ಪ್ರತಿಯೊಂದು

ಕ್ಷಣವೂ ಇಂಡಿಯಾವನ್ನು ನೆನಪಿಸುತ್ತಲೇ ಇತ್ತೆಂಬುದೂ, ಒಂದು ರೀತಿಯಲ್ಲಿ ಹಾಗೆ ನೋಡಿದರೆ ಇಂಡಿಯಾಕ್ಕಿಂತಲೂ ಭಯಂಕರ ವಿಕೃತಿಯನ್ನೇ ಗಮನಿಸಿದ್ದಾರೆ, ತಮ್ಮನ್ನು ಬೀಳ್ಕೊಡುವಾಗಲೂ ಅವರಲ್ಲಿನ ಆಷಾಢಭೂತಿತನ ಲೇಖಕರ ಅನುಭವಕ್ಕೆ ಬರುತ್ತದೆ. ಒಟ್ಟಾರೆಯಾಗಿ ಈ ಕಾಲ್ಪನಿಕ ಪ್ರವಾಸ ಕಥನದ ಹಿಂದೆ ಇಂಡಿಯಾದ ಭ್ರಷ್ಟ ಪರಿಸರವನ್ನು ವ್ಯಂಗ್ಯದ ಮೂಲಕ ನಗ್ನಗೊಳಿಸುವುದೇ ಅವರ ಆಶಯವಾಗಿದೆ ಅತ್ಯಂತ ಆಪ್ತವಾಗಿ ಓದಿಸಿಕೊಳ್ಳುವ ರೋಚಕ ವಿಡಂಬನಾ ಕೃತಿಯಾಗಿದೆ.



## ಬಿಡುಗಡೆ

ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದ ಶ್ರೀರಂಗರ ಪ್ರಭಾವಕ್ಕೆ ಒಳಗಾಗಿ, ನಾಟಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದು ರಂಗಪ್ರಯೋಗಗಳನ್ನು ಹತ್ತಿರದಿಂದ ಕಂಡಂತಹ ಇನಾಂದಾರರಿಗೆ ನಾಟಕ ರಚನೆಯು ಬಂದಿದ್ದರೆ ಆಶ್ಚರ್ಯವಿಲ್ಲ. ಕನ್ನಡದಲ್ಲಿ ನಾಟಕಗಳ ರಚನೆ ಅಪರೂಪವಾಗಿದ್ದ ಕಾಲದಲ್ಲಿ (ಕೆಲವರನ್ನು ಹೊರತುಪಡಿಸಿ) ಇನಾಂದಾರರು 'ಬಿಡುಗಡೆ' ಎಂಬ ಹೆಸರಿನ ನಾಟಕ ಬರೆದರು. ಮೊದಲ ಪ್ರಯತ್ನವಾಗಿ ರಚಿಸಿದ ಈ ನಾಟಕ ಮುಂಬಯಿ ಸರಕಾರದಿಂದ ಅತ್ಯುತ್ತಮ ನಾಟಕವೆಂದು ಪರಿಗಣಿತವಾಗಿ ಬಹುಮಾನಕ್ಕೂ ಪಾತ್ರವಾಯಿತು. ೧೯೫೮ರಲ್ಲಿ ಆಕಾಶವಾಣಿಯಲ್ಲಿ ಪ್ರಸಾರವೂ ಆಯಿತು.

ಇದೊಂದು ಪೂರ್ಣ ಪ್ರಮಾಣದ ನಾಟಕ. ಬಹುಮಾನವೇನೊ ಬಂತು. ಅಪರೂಪಕ್ಕೆ ಕೆಲವು ಪ್ರಯೋಗಗಳನ್ನೂ ಕಾಣುವಂತೆ ಆಯಿತು. ಬೆಳಗಾಂ, ಮುಂಬಯಿಗಳಲ್ಲಿಯೂ ಪ್ರಯೋಗಗೊಂಡಿತಾದರೂ, ಪ್ರಯೋಗಗಳ ಸಂಖ್ಯೆ ಹೆಚ್ಚಾಗಿರಲಿಲ್ಲ.

ಒಂದೇ ದಿನದಲ್ಲಿ ನಡೆಯುವ ಕಥೆ ಮೂರು ಹಂತಗಳಲ್ಲಿ ಮುಂದುವರೆಯುತ್ತದೆ. ಮೂರು ಅಂಕಗಳಲ್ಲಿ ಅಂದರೆ ಮುಂಜಾನೆ, ಮಧ್ಯಾಹ್ನ, ಸಾಯಂಕಾಲ ಹೀಗೆ ಕಾಲಾವಧಿಯಲ್ಲಿ ನಾಟಕ ಬೆಳೆಯುತ್ತಾ ಹೋಗುತ್ತದೆ.

ಹಂತಹಂತದಲ್ಲಿ ಬೆಳೆಯುವ ಕಥೆಯೆಂದರೆ ಕೇಂದ್ರಪಾತ್ರ ಕೇಶವರಾಯನ ಮಗಳು ಕಮಲಾಳ ಗಂಡ ಹುಚ್ಚನಾಗಿದ್ದು, ಹುಚ್ಚಾಸ್ಪತ್ರೆಯಲ್ಲಿರುತ್ತಾನೆ, ಆಸ್ಪತ್ರೆಯಿಂದ ವಿಠಲ ತಪ್ಪಿಸಿಕೊಂಡು ಹೋಗಿರುವ ಸುದ್ದಿ ಫೋನ್ ಮೂಲಕ ಪೋಲಿಸಿನವರು ತಿಳಿಸುತ್ತಾರೆ. ಇಷ್ಟರಲ್ಲೇ ದಿಢೀರನೆ ಮನೆ ಒಳಗೆ ಕೇಶವರಾಯರ ಎದುರು ವಿಠ್ಠಲ ಪ್ರತ್ಯಕ್ಷನಾಗಿ, ತನಗೆ ಹುಚ್ಚು ವಾಸಿಯಾಗಿದೆಯೆಂದೂ ಕಮಲಳ ನೆನಪಾಗುತ್ತಲೇ ಓಡಿಬಂದನೆಂದು ತಿಳಿಸುತ್ತಾನೆ. ಕೇಶವರಾಯರು ನೆಮ್ಮದಿ ಸಮಾಧಾನಗಳಿಂದ ವಿಠ್ಠಲನನ್ನು ಮಾತಾಡಿಸಿದರೆ, ಕಮಲಳಿಗೆ ಗಂಡ ವಾಸಿಯಾಗಿ ಬಂದ ಸುದ್ದಿ ಸಂತಸಕ್ಕಿಂತ ಆಘಾತವನ್ನು ಉಂಟು ಮಾಡುತ್ತದೆ.

ಎರಡನೇ ಅಂಕದಲ್ಲಿ ಕೇಶವರಾಯರು ಮಗಳಿಗೆ ವಿಠ್ಠಲನ ಹುಚ್ಚು ವಾಸಿಯಾಗಿದೆಯೆಂದು ಮನವರಿಕೆ ಮಾಡಿಸಲು ಪ್ರಯತ್ನಿಸುತ್ತಾರೆ. ಆದರೆ ಕಮಲಳ ಆಲೋಚನೆಯೇ ಬೇರೆಯಾಗಿತ್ತಾದ್ದರಿಂದ ಅವಳಿಗೆ ಏನೂ ಮಾಡಲು ತೋಚದೆ ಮಾನಸಿಕ ಹೊಯ್ದಾಟಕ್ಕೆ ಗುರಿಯಾಗುತ್ತಾಳೆ. ಅದಕ್ಕೆ ಕಾರಣ ಅವಳು ತಾನು ಪ್ರೀತಿಸಿದ ಮೋಹನನೊಡನೆ ಮದುವೆಯಾಗುವ ನಿಲುವಿಗೆ ಬಂದಿರುತ್ತಾಳೆ. ಅವಳಿಗೆ ವಿಠ್ಠಲನ ಹುಚ್ಚು ವಾಸಿಯಾಗುವುದಿಲ್ಲವೆಂಬ ನಂಬಿಕೆಯಿಂದ ಈ ನಿರ್ಧಾರಕ್ಕೆ ಬಂದಿರುತ್ತಾಳೆ ಮತ್ತು ವಿಚ್ಛೇದನಕ್ಕೆ ಅರ್ಜಿಯನ್ನು ಹಾಕಿರುತ್ತಾಳೆ. ಈಗ ಅವಳಿಗೆ ಸಂದಿಗ್ಧ ಎದುರಾಗುತ್ತದೆ. ಎಲ್ಲಿಯೋ ಒಂದು ಕಡೆ ಪಾಪಪ್ರಜ್ಞೆ ಅವಳನ್ನು ಕಾಡುತ್ತದೆ. ಮೋಹನನನ್ನು ಪ್ರೀತಿಸಿದ್ದು, ಮದುವೆಯಾಗಲು ನಿರ್ಧರಿಸಿದ್ದು ತಪ್ಪು ಎಂಬ ಭಾವನೆ ಬೆಳೆಯುತ್ತದೆ. ಅದೇ ಸಮಯಕ್ಕೆ ಮೋಹನ, ಇನ್ನೇನು ಕಮಲಾ ತನ್ನವಳಾಗುತ್ತಾಳೆ ಎಂಬ ಕನಸು ನಿರೀಕ್ಷೆಗಳೊಂದಿಗೆ, ಬಿಡುಗಡೆಯ ಸಮಾಚಾರದೊಂದಿಗೆ ಬಂದವನಿಗೆ ವಿಠ್ಠಲ ಎದುರಾದದ್ದು ದಿಗ್ಭ್ರಮೆಗೊಳ್ಳುವಂತಾಗುತ್ತದೆ; ಆಘಾತಕ್ಕೂ ಪಕ್ಕಾಗುತ್ತಾನೆ, ಕಮಲಳೂ ಮೋಹನನ ಬಗ್ಗೆ ಅಷ್ಟಾಗಿ ಸ್ಪಂದಿಸದೆ ಗಂಡನ ಜೊತೆ ಕರ್ತವ್ಯ ನಿರ್ವಹಣೆಯಲ್ಲಿದ್ದು, ತಾನು ನಂತರ ಅವನೊಡನೆ ಬಂದು ಮಾತಾಡುವೆನೆಂದು ಹೇಳಿದಾಗಲೇ ಮೋಹನನಿಗೆ ಕಮಲಳ ಮನಸ್ಸು ಅರ್ಥವಾಗುತ್ತದೆ. ಈ ಮಾತು ನಡೆಯುವಾಗಲೇ ನಿದ್ದೆಯಿಂದ ಎಚ್ಚೆತ್ತು ಬಂದ ವಿಠ್ಠಲನಿಗೆ ಅವರಿಬ್ಬರ ಸಂಬಂಧದ ಸುಳಿವು ಸಿಕ್ಕುತ್ತದೆ. ಆದರೆ ಎಂಟು ವರ್ಷ ತನಗಾಗಿ ಅನುಭವಿಸಿದ ಸಂಕಟದ ಬಗ್ಗೆ ಪ್ರೀತಿಯಿಂದ, ಮೆಚ್ಚುಗೆಯಿಂದ, ಸಹಾನುಭೂತಿಯಿಂದ ಮಾತಾಡಿದ ಮಾತುಗಳು ಕಮಲಾಳನ್ನು ಮತ್ತಷ್ಟು ವೇದನೆಗೆ ಗುರಿ ಮಾಡುತ್ತವೆ.

ಕೇಸು ಮುಗಿದು ತೀರ್ಪು ಹೊರಡದಿದ್ದರೆ, ಕೇಸನ್ನು ಹಿಂಪಡೆಯುವ ಉದ್ದೇಶದಿಂದ ಕೇಸವರಾಯ ಕೋರ್ಟ್‌ಗೆ ಬರುವಷ್ಟು ಹೊತ್ತಿಗೆ ತೀರ್ಪು ಹೊರಬಿದ್ದಿರುತ್ತದೆ. ತಾನೊಂದು ನೆನೆದರೆ ದೈವವೊಂದು ಬಗೆಯಿತು ಎಂಬಂತಾಗುತ್ತದೆ. ಬಿಡುಗಡೆಯಾಗಿ ಬಂದ ಗಂಡನೊಡನೆ ಮಗಳು ಮತ್ತೆ ಮೊದಲಿನಂತೆ ಸಂಸಾರ ಮಾಡಲು ಆಗುವುದೋ ಇಲ್ಲವೋ ಎಂಬ ಸಂದೇಹವೊಂದೆಡೆಯಾದರೆ, ಹೊಂದಿಕೆಯಾಗಿ ಸಂಸಾರ ಸಾಧ್ಯವಾದರೆ ಎಲ್ಲರಿಗೂ ಒಳ್ಳೆಯದೆಂಬ ಸಮಾಧಾನ ಮತ್ತೊಂದೆಡೆ.

ಮೂರನೆಯ ಅಂಕದಲ್ಲಿ ಕೇಶವರಾಯರ ಎರಡನೇ ಮಗಳಾದ ಲಲಿತೆ, ಕಿಟ್ಟಿಯರ ಸಮಸ್ಯೆಯ ಸನ್ನಿವೇಶವಿದೆ. ಲಲಿತಾ ಪ್ರೀತಿಸಿದ ಕಿಟ್ಟಿಗೆ ಒಂದು ನಿಲುವಿಲ್ಲ. ಲಲಿತಳನ್ನು ಪ್ರೀತಿಸುತ್ತಲೇ ಬೇರೆ ಹೆಣ್ಣುಗಳನ್ನು ಮದುವೆಯಾಗುವ

ಪ್ರಯತ್ನಗಳಲ್ಲಿರುತ್ತಾನೆ. ಯಾವುದನ್ನೂ ಖಚಿತವಾಗಿ ಹೇಳದೆ ಎಲ್ಲರಿಗೂ ಅಸಮಾಧಾನ ಉಂಟು ಮಾಡುತ್ತಾನೆ. ಕೇಶವರಾಯರು ಆದರೂ ಇವರಿಬ್ಬರ ಮದುವೆಗೆ ಹೇಗೋ ಒಪ್ಪಿಗೆ ಕೊಡುತ್ತಾರೆ. ಆದರೆ ಕಿಟ್ಟಿ ಬೇರೊಬ್ಬ ಹುಡುಗಿಯ ಜೊತೆ ಮದುವೆ ನಿಶ್ಚಯ ಮಾಡಿಕೊಂಡು ಲಲಿತಳ ಜೊತೆ ಸಿನಿಮಾಕ್ಕೆ ಹೋದದ್ದನ್ನು ಗಮನಿಸಿ ಸಿಟ್ಟಿಗೇಳುತ್ತಾರೆ. ಕೇಶವರಾಯರ ಸಿಟ್ಟು ಆರೋಪಗಳಿಂದ ಕೆರಳಿದ ಕಿಟ್ಟಿ, ಇನ್ನೊಬ್ಬನಿಗಾಗಿ ಬಿಡುಗಡೆ ಬೇಡಿದ ಹೆಂಡತಿಯ ಗಂಡ ಎಂದು ವಿಠ್ಠಲನನ್ನು ಮೂದಲಿಸುತ್ತಾನೆ. ಕಮಲಾ ಮೋಹನರ ವ್ಯವಹಾರವನ್ನು ಬಹಿರಂಗಪಡಿಸಿ ಕಿಡಿಗೇಡಿಯಂತೆ ವರ್ತಿಸುತ್ತಾನೆ. ವಿಠ್ಠಲ ಅವರಿಬ್ಬರ ಸಂಬಂಧದ ಬಗ್ಗೆ ನೋಡಿ ತಿಳಿದ್ದರೂ ಕಿಟ್ಟಿಯ ಮಾತು ಅವನನ್ನು ತೀವ್ರವಾಗಿ ಕ್ಷೋಭೆಗೆ ಒಳಪಡಿಸುತ್ತದೆ. ಮತ್ತೊಮ್ಮೆ ಅವನು ತೀವ್ರ ಆಘಾತದಿಂದ ಮಾನಸಿಕ ಸ್ತಿಮಿತವನ್ನು ಕಳೆದುಕೊಂಡು ಹುಚ್ಚನಾಗುತ್ತಾನೆ. ಕೇಶವರಾಯರ ಸಿಟ್ಟು ಇದರಿಂದ ತಾರಕಕ್ಕೇರಿ ಕಿಟ್ಟಿಯ ಮೇಲೆ ಹರಿಹಾಯುತ್ತಾರೆ. ಅಷ್ಟರಲ್ಲಿ ಮೋಹನರಾಯ ಅಲ್ಲಿಗೆ ಬಂದು ಪರಿಸ್ಥಿತಿ ಗಮನಿಸಿ, ತಪ್ಪಿಸಿಕೊಂಡು ಬಂದ ಹುಚ್ಚ ಇಲ್ಲಿದ್ದಾನೆಂದೂ ಅಂಬ್ಯುಲೆನ್ಸ್ ಕಳಿಸಬೇಕೆಂದು ಫೋನಿನ ಮೂಲಕ ತಿಳಿಸಿದಾಗ ಅವರು (ಆಸ್ಪತ್ರೆ ಸಿಬ್ಬಂದಿ) ಧಾವಿಸಿ ಬಂದು ಅವನನ್ನು ಕರೆದೊಯ್ಯುತ್ತಾರೆ. ಈ ಹಂತಕ್ಕೆ ನಾಟಕ ಬಂದು ನಿಲ್ಲುತ್ತದೆ. ಮುಂದೇನಾಯಿತೆಂಬುದು ಪ್ರೇಕ್ಷಕರ ಊಹೆಗೆ ಬಿಟ್ಟದ್ದು. ಈ ನಾಟಕ ದುಃಖಾಂತವೋ, ದುರಂತವೋ ಸುಖಾಂತವೋ ಎಂಬುದು ಸ್ಪಷ್ಟವಾಗಿಲ್ಲ. ಆದರೆ ಲೇಖಕರು ಈ ನಾಟಕದ ಬಗ್ಗೆ ತಮ್ಮ 'ಅರಿಕೆ' ಭಾಗದಲ್ಲಿ "ಲೋಕ ಚರಿತದ ಒಂದು ದುರಂತ ಬಗೆಯನ್ನು ಇಲ್ಲಿ ತೋರಿಸಬಯಸಿದ್ದೇನೆ" ಎಂದು ಹೇಳಿದ್ದಾರೆಯೇ ಹೊರತು ಈ ನಾಟಕ ಯಾವ ವರ್ಗಕ್ಕೆ ಸೇರುತ್ತದೆಂಬುದನ್ನು ಸ್ಪಷ್ಟಪಡಿಸುವುದಿಲ್ಲ.



# ಶ್ರೀರಾಮ ಪಟ್ಟಾಭಿಷೇಕ

ರಾಮಕಥಾ ಕೇಂದ್ರದ ಹಲವು ರಾಮಾಯಣಗಳು ಕನ್ನಡದಲ್ಲಿ ಹೇರಳವಾಗಿದ್ದು, ಕುವೆಂಪು ಅವರ ರಾಮಾಯಣ ದರ್ಶನಂ ಕೃತಿಗೆ ಜ್ಞಾನಪೀಠ ಪ್ರಶಸ್ತಿ ಬಂದು ಮತ್ತಷ್ಟು ಜನಪ್ರಿಯತೆಗೆ ಕಾರಣವಾಗಿರುವುದು ಎಲ್ಲರಿಗೂ ತಿಳಿದ ವಿಷಯವೇ. ಆದರೆ ಮಾಸ್ತಿಯವರು ಬರೆದ 'ಶ್ರೀರಾಮ ಪಟ್ಟಾಭಿಷೇಕ' ಕೃತಿಯೂ ರಾಮಾಯಣ ದರ್ಶನದಷ್ಟೇ ಮಹತ್ವದ ಕೃತಿಯಾಗಿದ್ದರೂ ಕನ್ನಡ ವಿಮರ್ಶಕರು ಯಾಕೆ ಅಷ್ಟಾಗಿ ಗಮನಿಸಿಲ್ಲವೆಂಬ ಅಚ್ಚರಿಯೊಂದಿಗೆ ವಿ.ಎಂ. ಇನಾಂದಾರರು, ಈ ಕೃತಿಯ ವಿಮರ್ಶೆಗೆ ಮುಂದಾದರು. ತಮಗೆ ಉಡುಗೊರೆಯಾಗಿ ಮಾಸ್ತಿಯವರಿಂದ ದೊರೆತ ಈ ಕೃತಿಯನ್ನು ಅದರೊಳಗಿನ ಮಹತ್ವದ ಅಂಶಗಳನ್ನು ಗುರುತಿಸಿ ಅದರ ಮೌಲಿಕತೆಯನ್ನು ಸಾಹಿತ್ಯ ಲೋಕದ ಗಮನಕ್ಕೆ ತರಬೇಕೆಂಬ ಉದ್ದೇಶದಿಂದ ಈ ಕೃತಿ ವಿಮರ್ಶೆ ವಿಶ್ಲೇಷಣೆಗಳಿಗೆ ಪ್ರವೃತ್ತರಾದರು.

ಮೊದಲಿಗೆ ಈ ಕೃತಿಯಲ್ಲಿ ಲೇಖಕರು ಜೈನ, ಬೌದ್ಧ, ವೈದಿಕ ಸಂಪ್ರದಾಯಗಳಿಗೆ ಸೇರಿದ ಭಿನ್ನ ಭಿನ್ನ ರಾಮಾಯಣಗಳ ಪ್ರಸ್ತಾಪ ಮಾಡಿ, ಅವುಗಳಲ್ಲಿ ಹೇಗೆ ರಾಮಕಥೆ ಆಯಾ ಸಂಪ್ರದಾಯಗಳ ತಾತ್ವಿಕ ಚಿಂತನೆಗಳಿಗೆ ಅನುಗುಣವಾಗಿ ಬೇರೆ ಬೇರೆ ಸ್ವರೂಪವನ್ನು ಪಡೆದಿರುವುದನ್ನು ವಿವರಿಸುತ್ತಲೇ ಎಲ್ಲ ರಾಮಾಯಣಗಳಲ್ಲಿಯೂ 'ರಾಮ ಅವತಾರ ಪುರುಷ' ಎಂಬ ನಂಬಿಕೆ ಸಮಾನವಾಗಿ ಕಂಡಿರುವುದನ್ನು ಗುರುತಿಸುತ್ತಾರೆ. ಪ್ರತಿಯೊಂದು ಸಂಪ್ರದಾಯವೂ ಈ ಕಥಾನಕವನ್ನು ತಮ್ಮ ತತ್ವ ದರ್ಶನಗಳಿಗೆ ನಿದರ್ಶನವಾಗಿ ಬಳಸಿಕೊಂಡಿದ್ದಾರೆ ಎಂದು ಹೇಳುತ್ತಾ ಮಾಸ್ತಿಯವರು ತಮ್ಮ ಕೃತಿಯಲ್ಲಿ, ೧೫ ಭಾಗಗಳಲ್ಲಿ ರಾಮಕಥೆಯನ್ನು ವಿವಿಧ ಹಂತಗಳಲ್ಲಿ ವಿವರಿಸಿರುವ ಬಗೆಯನ್ನು ವಿಶ್ಲೇಷಣಾತ್ಮಕವಾಗಿನಿರೂಪಿಸುತ್ತಾರೆ. ರಾಮ ಮನುಷ್ಯನೇ ಆದರೂ ಅವತಾರ ಪುರುಷನೆಂದು ಪರಿಗಣಿತವಾದ್ದರಿಂದ ಅದನ್ನು ಒಪ್ಪಿರುವುದರಿಂದ, ರಾಮಕಥೆಯನ್ನು ಅವತಾರದ ಕಥೆಯಾದ್ದರಿಂದ ಅದರಲ್ಲಿನ ಅದ್ಭುತ ಸಂಗತಿಗಳು ಅದ್ಭುತವೆನಿಸದೆ ಸಹಜವೇ! ಕತೆಗೆ ಅತಿಶಯತೆಯನ್ನು ಸೇರಿಸುವುದು ಮೂಲ ಸತ್ವವನ್ನು ಹೆಚ್ಚುಗೊಳಿಸುವುದಕ್ಕೆ ಎನ್ನುವುದು ಲೇಖಕರ ಅಭಿಪ್ರಾಯ.

ಅವತಾರ ಪುರುಷನೆಂಬ ನಂಬಿಕೆಗೆ, ಭಕ್ತಿಯ ಜೊತೆಗೆ ಇರಬಹುದಾದ ಇನ್ನೂ ಹಲವಾರು ಕಾರಣಗಳ ವಿವರಣೆ ನೀಡುತ್ತಾ ಭಿನ್ನಮತ ಸಂಪ್ರದಾಯಗಳ ಹಿನ್ನೆಲೆಯಲ್ಲಿ ರಚಿತವಾದ ಕೃತಿ ಆಯಾ ಮತ ಸಂಪ್ರದಾಯಗಳ ತತ್ವದರ್ಶನಗಳಿಗೆ ಸೀಮಿತವಾಗುವುದರಿಂದ ಎಲ್ಲರಿಂದಲೂ ಸ್ವೀಕೃತವಾಗುವುದಿಲ್ಲ. ಆದ್ದರಿಂದ ಮೂಲಕಥೆಯ ಸ್ವರೂಪವೇನು ಎಂಬ ಪ್ರಶ್ನೆಗೆ ವಿವರಗಳನ್ನು ಹುಡುಕುತ್ತಾರೆ. ಲೋಕೋತ್ತರ ಚರಿತೆಯ ಚಿತ್ರಣ, ಸಾರ್ವತ್ರಿಕತೆ, ಮಾನವ ಹೃದಯ ಮುಟ್ಟಬಲ್ಲ ಸಾಮರ್ಥ್ಯ, ಮನುಷ್ಯ ಮನಸ್ಸಿನ ಸಂಸ್ಕರಣ ಸಾಮರ್ಥ್ಯ ಇತ್ಯಾದಿ ಅಂತರ್ನಿಹಿತ ಗುಣಗಳೇ ಅದರ ವಿಶ್ವಮಾನ್ಯತೆಗೆ, ಜನಾದರಕ್ಕೆ ಕಾರಣವೆಂದು ವಿಶ್ಲೇಷಿಸುತ್ತಾರೆ. ಜೈನ ರಾಮಾಯಣ, (ಪಂಪರಾಮಾಯಣ) ಕುಮುದೇಂದು ರಾಮಾಯಣ ಇತ್ಯಾದಿಗಳ ಪ್ರಸ್ತಾಪವನ್ನು ಮಾಡಿ ಕಳೆದ ಶತಮಾನದಲ್ಲಿ ಕಾವ್ಯ ರೂಪದಲ್ಲಿ ಬಂದಿರುವ ಎರಡೇ ಎರಡು ಕೃತಿಗಳೆಂದು ಕುವೆಂಪು ಅವರ ರಾಮಾಯಣ ದರ್ಶನಂ ಮಾಸ್ತಿಯವರ 'ಶ್ರೀರಾಮ ಪಟ್ಟಾಭಿಷೇಕ' ಎಂದು ಹೆಸರಿಸುತ್ತಾರೆ. ೧೫ ಭಾಗಗಳಲ್ಲಿ ಇಡೀ ರಾಮಕಥೆಯನ್ನು ಕಥಾಘಟ್ಟಗಳಲ್ಲಿ ವಿವರಿಸುತ್ತಾರೆ. ಎಷ್ಟೊಂದು ರಾಮಾಯಣಗಳಿದ್ದರೂ ಈ ಕಾವ್ಯ "ಅವತಾರದ ಅಂಶವನ್ನು ಬದಿಗಿರಿಸಿ, ಅತಿಮಾನುಷವೆನ್ನಬಹುದಾದ ಎಲ್ಲ ಸಂದರ್ಭಗಳನ್ನೂ ದೂರವಿರಿಸಿ, ಸಹಜವೆನಿಸಬಹುದಾದ ರೀತಿಯಲ್ಲಿ ಇಡೀ ರಾಮಾಯಣದ ಕಥೆಯನ್ನು ಹೇಳುವ ಕನ್ನಡ ಕಾವ್ಯ ಇದೊಂದೇ. ಆ ದೃಷ್ಟಿಯಿಂದ ಇದು ಅತ್ಯಂತ ವಿಶಿಷ್ಟವಾದ ಒಂದು ಕಾವ್ಯ ರಚನೆ, ಅದ್ವಿತೀಯ ಎಂದೂ ಹೇಳಬಹುದಾದ ಒಂದ ಕೃತಿ ವಿಶೇಷ. ಅದರ ಸಾಧನೆಯನ್ನು ವಿಶ್ಲೇಷಿಸಿ ಕೆಲವು ಮಾತುಗಳನ್ನು ಹೇಳುವುದು ಈ ಬರಹದ ಉದ್ದೇಶ" ಎಂದು ತಾವು ವಿಮರ್ಶೆ, ವಿಶ್ಲೇಷಣೆಗೆ ಹೊರಟಿರುವುದಕ್ಕೆ ಹಿನ್ನೆಲೆಯನ್ನು ವಿವರಿಸುತ್ತಾರೆ.

ಮಾಸ್ತಿಯವರ ವಿಚಾರವಾಗಿ ಹೇಳುವಾಗ, ರಾಮಚರಿತೆಯಲ್ಲಿ ಭಕ್ತಿಯಿರಿಸಿಕೊಂಡಿರುವಷ್ಟೇ ವಿಮರ್ಶಾತ್ಮಕವಾದ ನಿಲುವನ್ನೂ ಮಾಸ್ತಿಯವರು ಹೊಂದಿದ್ದಾರೆ ಎಂದು ಗುರುತಿಸುತ್ತಾರೆ.

ರಾಮಾಯಣ ಕಾವ್ಯದ ಪುನಃ ಸೃಷ್ಟಿಯನ್ನು, ಮಾಸ್ತಿಯವರು ನಾಲ್ಕು ವಿಧಗಳಲ್ಲಿ ಮಾಡಿಕೊಂಡಿರುವುದನ್ನು ಈ ರೀತಿ ವಿವರಿಸುತ್ತಾರೆ. ೧. ಕಥಾರಚನೆಯ ನೂತನ ವಿನ್ಯಾಸದಲ್ಲಿ, ೨. ಮುಖ್ಯ ಪಾತ್ರಗಳ ಅಂತಃಸತ್ವ ದರ್ಶನದಲ್ಲಿ ಹಾಗೂ ಕೆಲವು ಪಾತ್ರಗಳ ಸ್ವಭಾವ ಸತ್ವದ ಹೊಸ ಮುಖಗಳನ್ನು ತೋರಿಸುವುದರಲ್ಲಿ, ೩. ಸ್ವಕಲ್ಪಿತವಾಗಿ ನಿರ್ಮಿಸಿಕೊಂಡ ಪಾತ್ರ ಹಾಗೂ ಸನ್ನಿವೇಶಗಳ ಮೂಲಕ ಮೂಲ ಕಥೆಯ ಆಶಯವನ್ನು ವಿಶದಪಡಿಸುವ ರೀತಿಯಲ್ಲಿ ಹಾಗೂ ೪.

ಒಂದೊಂದು ಸನ್ನಿವೇಶವೂ ಸ್ಫುಟವಾಗಿ ಅಚ್ಚಳಿಯದೆ ಓದುವವನ ಮನಸ್ಸಿನೆದುರು ನಿಲ್ಲುವಂತೆ ಚಿತ್ರಿಸುವ ಕಲೆಗಾರಿಕೆಯಲ್ಲಿ. ಈ ನಾಲ್ಕು ದೃಷ್ಟಿಯಿಂದ ಕೃತಿಯ ವಿಶ್ಲೇಷಣೆ ಸಾರ್ಥಕವಾಗುತ್ತದೆಂದು ಭಾವಿಸಿ ಅದೇ ಮಾದರಿಯಲ್ಲಿ ವಿಶ್ಲೇಷಣೆಗೆ ಮುಂದಾಗುತ್ತಾರೆ.

ಮೊದಲಿಗೆ ಕಥಾವಿನ್ಯಾಸವನ್ನು ಶ್ರೀರಾಮಚಂದ್ರ, ಸೀತಾದೇವಿ ಕೋಸಲದ ದೊರೆತನವ ಕೈಕೊಂಡ ಅಭಿಷೇಚನೋತ್ಸವದ ಕಥನ ಎಂದು ಗುರುತಿಸಿ, ಪಟ್ಟಾಭಿಷೇಕ ಸಿದ್ಧತೆಗಳ ವಿವರ ಮೂರು ನಾಲ್ಕು ದಿನಗಳಲ್ಲಿ ನಡೆದ ಸಂಗತಿಗಳು, ಮೊದಲ ದಿನದ ನಿರೀಕ್ಷೆ, ಆತಂಕ, ಆತುರಗಳು, ಎರಡನೇ ದಿನದ ಸಂಭ್ರಮೋತ್ಸಾಹ, ಮೂರನೆ ದಿನದ ಪಟ್ಟಾಭಿಷೇಕದ ವಿಶೇಷ ಮಹತ್ವ, ಉತ್ಕಟತೆ, ಔಚಿತ್ಯ, ಸಿಂಹಾಸನ ತಪ್ಪಿಹೋದ ಸಂಗತಿ, ವನವಾಸ, ಭರತನ ಆಗಮನ ವಿಷಯ, ಭರತನಿಗೆ ಮನದಟ್ಟು ಮಾಡುವ ಪ್ರಯತ್ನ, ಅಣ್ಣನನ್ನು ಹುಡುಕಿ ಪಾದುಕೆಗಳನ್ನು ತಂದು, ಸಿಂಹಾಸನದ ಮೇಲಿರಿಸಿ ಮಾಡುವ ರಾಜ್ಯಭಾರ, ವನವಾಸಾವಧಿ, ಸೀತಾಪಹರಣ ಹನುಮ-ಸುಗ್ರೀವರ ಸಖ್ಯ-ರಾವಣ ವಧೆ-ಸೀತೆಯ ಅಗ್ನಿಪರೀಕ್ಷೆ - ಮರಳಿ ಕೋಸಲಿಕ್ಕೆ - ಇತ್ಯಾದಿಗಳ ವಿವರಣೆ ಇವೆಲ್ಲವನ್ನೂ ಗಮನಿಸುವ ಲೇಖಕರು ಮಾಸ್ತಿಯವರ ಕಥಾ ಹೆಣಿಗೆಯನ್ನು ನಿರ್ವಹಿಸಿದ ಕ್ರಮವನ್ನು ಮೆಚ್ಚಿ ನುಡಿಯುತ್ತಾರೆ. ಒಂದೊಂದು ಸನ್ನಿವೇಶವನ್ನೂ ಗಮನಿಸಿ ಅದರ ವಿಶ್ಲೇಷಣೆ ನೀಡುತ್ತಾರೆ. ಸನ್ನಿವೇಶಗಳ ವಿವರಣೆಯಲ್ಲಿ ಕಲಾತ್ಮಕತೆಯನ್ನು ಗುರುತಿಸಿ, ಅದಕ್ಕೆ ನಿದರ್ಶನವಾಗಿ ಕೆಲವು ಸನ್ನಿವೇಶಗಳನ್ನು ಹೆಸರಿಸುತ್ತಾರೆ. ಸೀತಾಸಮೇತ ರಾಮ ಉಯ್ಯಾಲೆಯಲ್ಲಿ ಕುಳಿತಿರುವ ಸಮಯದಲ್ಲಿ ಕೈಕೆಯಿ ಬರಹೇಳಿರುವ ವಿಚಾರವನ್ನು ಸುಮಂತ್ರ ಹೇಳುವ ಸನ್ನಿವೇಶ, ತಂದೆಯು ರಾಮನಿಗೆ ಪಟ್ಟಾಭಿಷೇಕ ತಪ್ಪಿದ್ದಕ್ಕೆ ದುಃಖಿಸುವಾಗ ರಾಮನು ಸಾಂತ್ವನದೊಂದಿಗೆ ನುಡಿವ ಸನ್ನಿವೇಶ ಇತ್ಯಾದಿಗಳನ್ನು ಪದ್ಯಭಾಗಗಳ ಮೂಲಕ ನಿದರ್ಶನಾತ್ಮಕವಾಗಿ ವಿವರಿಸುತ್ತಾರೆ. ಪ್ರತಿಯೊಂದು ಸನ್ನಿವೇಶವನ್ನು ವಿವರಿಸಿ, ಅದರಲ್ಲಿನ ಕಲೆಗಾರಿಕೆಯನ್ನು ಗುರುತಿಸುತ್ತಾರೆ. ಕಥೆಯಲ್ಲಿನ ಸನ್ನಿವೇಶಗಳನ್ನು ಈ ರೀತಿ ಚಿಂತಿಸಿದ ವಾಸ್ತವ ಪ್ರಜ್ಞೆ ಅಥವಾ ಈ ಮೊದಲು ಸೂಚಿಸಿದಂತೆ ಸಹೃದಯತೆಯೇ ಕ್ರಿಯಾಮುಖವಾಗಿ ಪ್ರತಿನಿರ್ಮಿತಿಯ ಸಾಮರ್ಥ್ಯವಾಗುವ ವಿಧಾನ ಆಯಾಯಾ ಸನ್ನಿವೇಶಗಳಲ್ಲಿ ವ್ಯವಹರಿಸುವ ಸಣ್ಣ ದೊಡ್ಡ ಪಾತ್ರಗಳ ಸ್ವಭಾವದರ್ಶನದಲ್ಲಿಯೂ ಕೆಲಸ ಮಾಡುತ್ತದೆ. ಅವೆಲ್ಲವುಗಳ ಅಂತಸ್ಸತ್ವವನ್ನು ಒಳಹೊಕ್ಕು ನೋಡಿದವರಂತೆ, ಚಿರಪರಿಚಿತರಾದ ಜೀವಂತ ವ್ಯಕ್ತಿಗಳಂತೆ ಅವನ್ನು ಅರ್ಥ ಮಾಡಿಕೊಂಡಿರುವುದರಿಂದ ಇಂಥಿಂಥ ಸಂದರ್ಭದಲ್ಲಿ ಅವು ಹೇಗೆ ನಡೆದುಕೊಳ್ಳಬಹುದು, ಹೇಗೆ ನುಡಿಯಬಹುದು ಎನ್ನುವುದನ್ನು ಸಹಜವಾಗಿಯೇ ಅವರು ಊಹಿಸಬಲ್ಲರು"

ಎಂದು ಮೆಚ್ಚುಗೆಯ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ, ವಾಲ್ಮೀಕಿ ಚಿತ್ರಿಸುವ ಕೈಕೇಯಿ ಮಗನಿಗೆ ರಾಜ್ಯ ಬೇಡುವ ಸನ್ನಿವೇಶವನ್ನು ಶ್ರೀರಾಮ ಪಟ್ಟಾಭಿಷೇಕದ ಸನ್ನಿವೇಶದೊಂದಿಗೆ ಹೋಲಿಸಿ ಮಾತನಾಡುತ್ತಾರೆ. ಹಾಗೆಯೇ ವನವಾಸದ ಕೊನೆಯ ದಿನದಂದು ರಾಮ-ಸೀತೆ ಲಕ್ಷ್ಮಣರನ್ನು ಎದುರುಗೊಳ್ಳಲು ಬಂದ ಸನ್ನಿವೇಶದಲ್ಲಿ ಅವರಾಡುವ ಮಾತುಗಳ ಹಿಂದಿನ ಮನಃಸ್ಥಿತಿಯನ್ನು ಎಷ್ಟು ನೈಜವಾಗಿ ಚಿತ್ರಿಸಿದ್ದಾರೆ ಎನ್ನುವುದನ್ನು ಪದ್ಯ ಸಾಲುಗಳ ಮೂಲಕ ತೋರಿಸಿಕೊಡುತ್ತಾರೆ.

ನಂತರ ಊರ್ಮಿಳೆಯನ್ನು ಮಾಸ್ತಿಯವರು ಕಂಡ ಬಗೆಯ ಅದ್ಭುತವಾಗಿ ಚಿತ್ರಿಸಿರುವುದನ್ನು ಗುರುತಿಸುತ್ತಾರೆ. ಸಾವಿತ್ರಿಯ ಪಾತ್ರ ದರ್ಶನದಲ್ಲಿ ಆ ಸ್ವಭಾವ ಸತ್ವದ ಒಂದು ಹೊಸ ಮುಖವನ್ನು ತೋರಿಸಿ ಅದರ ಉದಾತ್ತತೆಯನ್ನು ಹೆಚ್ಚಿಸಿದಂತೆ, ರಾವಣನ ಸ್ವಭಾವ ದರ್ಶನದಲ್ಲಿಯೂ ಒಂದು ಸೂಕ್ಷ್ಮವಾದ ಹೊಸ ನೋಟವನ್ನು ಬಿಡಿಸಿ ತೋರಿಸಿರುವುದನ್ನು ಪ್ರಸ್ತಾಪಿಸುತ್ತಾರೆ. ಪ್ರತಿಯೊಂದು ಸನ್ನಿವೇಶ, ಪ್ರತಿಯೊಂದು ಪಾತ್ರ, ಪ್ರತಿಯೊಂದು ಘಟನೆ – ಹೀಗೆ ಪ್ರತಿಯೊಂದರ ಹಿಂದೆ ಇರುವ ಮಾಸ್ತಿಯವರ ಅನನ್ಯ ದೃಷ್ಟಿ, ಮಾನವ ಸ್ವಭಾವಗಳನ್ನು ಗ್ರಹಿಸುವ ಮನೋವೈಜ್ಞಾನಿಕ ನೆಲೆ, ಅತ್ಯಂತ ವಾಸ್ತವಿಕವೆಂಬಂತೆ ಕಾಣಿಸುವ ಪರಿ ಮುಂತಾದವುಗಳನ್ನು ಲೇಖಕರು ಸೂಕ್ಷ್ಮವಾಗಿ ಗುರುತಿಸಿ ಕಾವ್ಯದ ಮಹಾನತೆಯನ್ನು ಎತ್ತಿ ಹಿಡಿಯುತ್ತಾರೆ. ಎಷ್ಟೇ ಸಣ್ಣ ಪಾತ್ರವಾದರೂ ಅದನ್ನು ನಿರ್ಲಕ್ಷಿಸದೆ, ಸನ್ನಿವೇಶಕ್ಕೆ ಪೂರಕವೂ ಅನಿವಾರ್ಯವೂ ಎಂಬಂತೆ ಚಿತ್ರಿಸುವುದನ್ನೂ ವಿವರಿಸಿ ತೋರುತ್ತಾರೆ.

ಸನ್ನಿವೇಶಗಳು ಮೂಲ ರಾಮಾಯಣದಲ್ಲಿ ಇರುವವುಗಳನ್ನೇ ತೆಗೆದುಕೊಂಡು, ತಮ್ಮದೇ ರೀತಿಯಲ್ಲಿ, ಅವುಗಳನ್ನು ಪುನಃ ಸೃಷ್ಟಿಸುತ್ತಾರೆ. ಇದರ ಜೊತೆಗೆ ಕೆಲವೊಂದು ಸನ್ನಿವೇಶಗಳನ್ನು ಪಾತ್ರಗಳನ್ನು ಸ್ವತಃ ಸೃಷ್ಟಿಸಿಕೊಳ್ಳುತ್ತಾರೆ. ಇದರಿಂದ ಕಾವ್ಯಕ್ಕೆ ಮತ್ತಷ್ಟು ಮೆರುಗು ಬಂದಿರುವುದನ್ನು ವಿವರಿಸಿ ತೋರುತ್ತಾರೆ. ತಾವು ತಮ್ಮ ಅಭಿಪ್ರಾಯಗಳನ್ನು ವ್ಯಕ್ತ ಪಡಿಸುತ್ತಲೇ ಮಾಸ್ತಿಯವರೇ ಸ್ವತಃ ಇದರ ವಿಚಾರವಾಗಿ ಹೇಳಿರುವ ಮಾತುಗಳನ್ನೂ ದಾಖಲಿಸುತ್ತಾರೆ. "ಯಾವುದಾದರೊಂದು ಸಂದರ್ಭದ ಭಾವವನ್ನು ಸ್ಫುಟವಾಗಿಸುವುದಕ್ಕಾಗಿಯೆಂದೊ, ಒಂದು ಪಾತ್ರದ ಸ್ವಭಾವ ಸತ್ವದ ಯಾವುದಾದರೊಂದು ಮುಖವನ್ನು ವಿಶದಪಡಿಸುವುದಕ್ಕೆಂದೋ, ಕಥೆಯಲ್ಲಿಯ ಕೆಲವು ಬೆಳವಣಿಗೆಗಳನ್ನು ಹೆಚ್ಚುಸಹಜವೆನಿಸುವಂತೆ ತೋರಿಸುವುದಕ್ಕೆಂದೊ ಇಂಥ ಸನ್ನಿವೇಶಗಳನ್ನು ನಿರ್ಮಿಸಿಕೊಂಡದ್ದು ಕಾಣುತ್ತದೆ" ಎಂದು ಮಾಸ್ತಿಯವರ ಉದ್ದೇಶಗಳನ್ನೂ ಗುರುತಿಸುತ್ತಾರೆ. ಅಷ್ಟೇ ಅಲ್ಲ ಗುರುತಿಸಿದ್ದನ್ನು ಸವಿಸ್ತೃತವಾಗಿ ನಿದರ್ಶನಾತ್ಮಕವಾಗಿ ವಿವರಿಸಿ ಓದುಗರ ಗಮನಕ್ಕೆ ತರುತ್ತಾರೆ.

ಇಂತಹ ಸ್ವಕಲ್ಪಿತ, ಅಸಂಭವ ಸನ್ನಿವೇಶಗಳ ನಡುವೆಯೂ ವಾಲ್ಮೀಕಿಯ ಮೂಲ ಕಾವ್ಯಕ್ಕೆ ಹತ್ತಿರವಾಗಿ ಸಾಗುತ್ತಿದ್ದುದನ್ನು ಗಮನಿಗೆ ಅಚ್ಚರಿಯನ್ನು ವ್ಯಕ್ತಪಡಿಸುತ್ತಾರೆ. ತಮ್ಮ ಸ್ವಂತ ಕಲ್ಪನೆ ಮತ್ತು ಮೂಲವನ್ನು ಹೇಗೆ ಅತ್ಯಂತ ಸಮರ್ಥವಾಗಿ ಸಮೀಕರಿಸಿಕೊಂಡಿದ್ದಾರೆ ಎಂಬುದರ ಬಗ್ಗೆ ಲೇಖಕರು ಹೀಗೆ ವಿವರಿಸುತ್ತಾರೆ, "ಸನ್ನಿವೇಶ ಮೂಲದಲ್ಲಿಯದೇ ಇರಲಿ, ಸ್ವಕಲ್ಪಿತವೇ ಇರಲಿ, ಅದನ್ನು ಯಥಾವತ್ತಾಗಿ ಎಂದರೆ, ಅದರ ಸಂಭಾವ್ಯತೆಯ ವಿಷಯದಲ್ಲಿ ಸಂದೇಹವೇ ಮೂಡದ ರೀತಿಯಲ್ಲಿ, ಅದರ ಚಿತ್ರ ನಿಚ್ಚಳವಾಗಿ ಓದುವವನ ಕಣ್ಣೆದುರು ನಿಲ್ಲುವಂತೆ ಚಿತ್ರಿಸುವುದು ಇಲ್ಲಿಯ ಕಥನ ಕಾವ್ಯದ ರೀತಿ ಹಾಗೂ ವೈಶಿಷ್ಟ್ಯ" ಎಂದು ಮೆಚ್ಚುಗೆಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ನಿಸರ್ಗ ಚಿತ್ರಣದ ಸೊಗಸು, ಸೌಂದರ್ಯಗಳನ್ನು ಅತಿಮಾನುಷ ಅಥವಾ ಅಮಾನುಷ, ಅವಾಸ್ತವವನ್ನು ಬದಿಗಿರಿಸಿ ವಾಸ್ತವದ ಅಂಶಗಳ ಕಡೆಗೇ ಮಾಸ್ತಿಯವರ ಮನಸ್ಸು ಒಲಿದಿರುವುದನ್ನೂ ಗುರುತಿಸುತ್ತಾರೆ.

ರಾಮಾಯಣದಲ್ಲಿನ ರಾಮನನ್ನು ಅವತಾರ ಪುರುಷನೆಂಬ ನಂಬಿಕೆಯಲ್ಲಿರಿಸಿಕೊಂಡಾಗ, ಆ ಕೃತಿ ಮತ ಗ್ರಂಥವಾಗುವ, ಪಕ್ಷಪಾತ, ವಿರೋಧಗಳಿಗೆ ಎಡೆಮಾಡಿಕೊಡುವ ಅಪಾಯವಿರುವುದೇ ಅಲ್ಲದೆ ಮಾನವೀಯ ಮೌಲ್ಯಗಳಿಗೆ ಅಪಚಾರವಾಗುತ್ತದೆ ಎನ್ನುವ ಮಾಸ್ತಿಯವರ ವಿಚಾರವನ್ನು ಮೆಚ್ಚಿಕೊಳ್ಳುವ ಲೇಖಕರು, ಮಾಸ್ತಿಯವರೇ ತಮ್ಮ ಕೃತಿಯ ಮುನ್ನುಡಿಯಲ್ಲಿ ವಿಶದೀಕರಿಸಿರುವುದನ್ನು ಉದ್ಧರಿಸುತ್ತಾರೆ. "ಸನಾತನ ಧರ್ಮದ ಬೆಳವಣಿಗೆಯಲ್ಲಿ ಒಬ್ಬ ದೇವರು ಹತ್ತು ಹೆಸರು ಹತ್ತು ದೇವರಾಗಿ ಒಬ್ಬೊಬ್ಬ ದೇವರ ಅನುಯಾಯಿಗಳೂ ತಮ್ಮ ದೇವರು ಹಿರಿಯ್ಣರೆನ್ನುವುದಕ್ಕೆ ಇಲ್ಲದ ಕಥೆಗಳನ್ನು ಕಟ್ಟಿ, ತಮ್ಮ ಈ ಹೋರಟೆಯ ವ್ಯಾಪಾರದಿಂದ ನಮ್ಮ ಧರ್ಮದ ಜೀವಂತ ಸೂತ್ರಗಳನ್ನು ಅತಥ್ಯದ ಹೊದರಿನಲ್ಲಿ ಮುಚ್ಚಿಮರೆ ಮಾಡಿರುವುದು ಕಾಣುತ್ತದೆ. ಇದರಿಂದ ಈ ಮುನ್ನ ಸಮಾಜದಲ್ಲಿ ತಕ್ಕಷ್ಟು ಕೇಡಾಗಿದೆ. ಈಗಲೂ ಆಗುತ್ತಿದೆ. ಸನಾತನ ಧರ್ಮದ ಜೀವನದಲ್ಲಿ ವಾಸ್ತವವಾಗಿ ಉಳಿಯ ಬೇಕೆಂದರೆ ನಮ್ಮ ಜನತೆಯ ಮನಸ್ಸು ಇಂಥ ಹೊದರುಗಳಿಂದ ಬಿಡಿಸಿಕೊಳ್ಳಬೇಕು. ಈ ವಿಷಯದಲ್ಲಿ ಒಂದು ದಾರಿಯನ್ನು ಕಾಣಲು ಈ ಕಾವ್ಯದಲ್ಲಿ ವಿನಮ್ರ ಪ್ರಯತ್ನ ನಡೆದಿದೆ" ಎನ್ನುವ ಮಾಸ್ತಿಯವರ ಉನ್ನತ, ಉದಾತ್ತ ಆಶಯಗಳ ಹಿನ್ನೆಲೆಯಲ್ಲಿ ರಚಿತವಾದ ಮಹತ್ತರ ಕಾವ್ಯವೆನಿಸಿದ್ದರಿಂದಲೇ ಲೇಖಕರು ಈ ಕೃತಿಯನ್ನು ಬಿಡಿ ಬಿಡಿಸಿ ಅತ್ಯಂತ ಗಂಭೀರವಾದ ರೀತಿಯಲ್ಲಿ, ವಿಶ್ಲೇಷಿಸಿ, ವಿವರಿಸುವ ಸಾಹಸಕ್ಕೆ ತೊಡಗುತ್ತಾರೆ. ಕಡೆಯದಾಗಿ ಲೇಖಕರು ಈ ಕೃತಿ ಮತ್ತು ಕೃತಿಕಾರನನ್ನು ಕುರಿತ ತಮ್ಮ ಅಂತಿಮ ನಿಲುವು, ನಿಷ್ಕರ್ಷೆಗಳನ್ನು ತಲುಪುತ್ತಾರೆ. "ವಿಮರ್ಶಕ

ಮಾಸ್ತಿಯವರು ತಮ್ಮ 'ಆದಿಕವಿ ವಾಲ್ಮೀಕಿ' ಗ್ರಂಥದಲ್ಲಿ ರಾಮಾಯಣದ ಕಥಾವತಾರವನ್ನು ಮಾನವ, ಮಾನವ ಚಾರಿತ್ರದ ಮಹೋನ್ನತಿಯನ್ನೇ ಆಧಾರವಾಗಿಸಿಕೊಂಡು ಸವಿಮರ್ಶವಾಗಿ ಪರಿಷ್ಕರಿಸಿ ಮೂಲದ ಕಥೆಯನ್ನು ಅದರ ಆಶಯವನ್ನು ನಿಷ್ಕರ್ಷಿಸುವ ಕೆಲಸವನ್ನು ಸಮರ್ಥವಾಗಿ ನೆರವೇರಿಸಿದ್ದಾರೆ. ಅಲ್ಲಿ ವಿಮರ್ಶಕರಾಗಿ ತಲುಪಿದ ನಿಷ್ಕರ್ಷೆಗಳ ಬೆಳಕಿನಲ್ಲಿ ಕಂಡ ವಾಲ್ಮೀಕಿ ರಾಮಾಯಣದ ಕಥೆಯನ್ನು ಇಲ್ಲಿ ಕವಿ ಶ್ರೀನಿವಾಸರು ಒಂದು ಹೊಸ ಆಕಾರದಲ್ಲಿ ಪುನಃಸೃಷ್ಟಿಸಿದ್ದಾರೆ. ಈ ಪುನಃ ಸೃಷ್ಟಿಕಾರ್ಯ ಒಂದು ಅನನ್ಯ ಸಾಧಾರಣವಾದ ಸಾಧನೆ. ಹರಯದಲ್ಲಿ ಸಂಕಲ್ಪಿಸಿ ಇಳಿ ವಯಸ್ಸಿನಲ್ಲಿ ಆರಂಭಿಸಿ ಮುಪ್ಪಿನಲ್ಲಿ ಮಂಗಳಕ್ಕೆ ತಂದಿರುವ ಈ ಕಾವ್ಯದಲ್ಲಿ ಜೀವನಾನುಭವದಿಂದ ಪರಿಷ್ಕಾರವಾದ ಅವರ ತಿಳಿವು, ಅವರ ಚಿತ್ತವೃತ್ತಿಯ ವಿಶೇಷವಾದ ನಯ, ನುಣುಪು, ಮಾರ್ದವತೆಗಳು, ಅವರದೇ ಆದ ಸಂಸ್ಕಾರ ವಿಶೇಷವೆನ್ನಬೇಕಾದ ಪರಿಣತ ಪ್ರಜ್ಞೆಯ ಬಗೆ, ಬದುಕು ಹಸನಾಗಬೇಕು ಎಂಬ ಆಕಾಂಕ್ಷೆ, ಶ್ರೀರಾಮ ಚರಿತೆ ಒಳಗೊಂಡಿರುವ ಮಾನವೀಯ ಜೀವನ ಮೌಲ್ಯಗಳ ಸತತ ಚಿಂತನ ಅನುಷ್ಠಾನಗಳಿಂದ ಅದು ಸಾಧ್ಯ ಎಂಬ ಶ್ರದ್ಧೆ ಇಲ್ಲಿಯ ಕಾವ್ಯವನ್ನು ಒಂದು ವಿಶಿಷ್ಟವಾದ ಸಾಧನೆಯನ್ನಾಗಿಸಿದೆ" ಎಂದು ಅವರ ಕಾವ್ಯದ ಎಲ್ಲ ಗುಣ ವಿಶೇಷಗಳನ್ನು ಅನನ್ಯವಾದ ವಿಮರ್ಶನ ದೃಷ್ಟಿಯಿಂದ ಹೆಕ್ಕಿತೆಗೆದು ತೋರಿ, ಮೌಲ್ಯದ ಔನ್ನತ್ಯವನ್ನು ಮುಕ್ತವಾಗಿ ಮೆಚ್ಚಿ ಕೊಂಡಾಡಿದ್ದಾರೆ.



# ಗೋವಿಂದ ಪೈ

ಆಧುನಿಕ ಕನ್ನಡದ ಅಧ್ವರ್ಯು, ಐತಿಹಾಸಿಕ ಸಂಶೋಧನೆಯ ನೇತಾರ, ಮೊತ್ತ ಮೊದಲ ರಾಷ್ಟ್ರಕವಿ ಎಂ.ಗೋವಿಂದ ಪೈ ಕುರಿತು ಪ್ರೊ. ಇನಾಂದಾರರು ಮಾನಸ ಗಂಗೋತ್ರಿಯ, 'ಕನ್ನಡ ರೈಟರ್ಸ್ ಅಂಡ್ ದೇರ್ ವರ್ಕ್ಸ್' ಮಾಲಿಕೆಗಾಗಿ ಬರೆದುಕೊಟ್ಟ ಇಂಗ್ಲಿಷ್ ಕೃತಿ ಇದಾಗಿದೆ. ೧೯೮೩ರಲ್ಲಿ ಹಾ.ಮಾ ನಾಯಕರ ಮುನ್ನುಡಿಯೊಂದಿಗೆ ಪ್ರಕಟವಾದ ಈ ಕೃತಿ ಗೋವಿಂದ ಪೈಗಳ ಜೀವನ ಸಾಧನೆಗಳನ್ನು ಸಾಕಷ್ಟು ವಿವರಗಳೊಂದಿಗೆ ಮೌಲಿಕ ಅಭಿಪ್ರಾಯಗಳೊಂದಿಗೆ ಅತ್ಯಂತ ಮಹತ್ವದ ಕೃತಿಯಾಗಿ ರೂಪಿಸಿ ಕನ್ನಡ– ಇಂಗ್ಲಿಷ್ ಸಾಹಿತ್ಯ ಜಗತ್ತಿಗೆ ಪರಿಚಯಿಸಿದ್ದಾರೆ; ಗೋವಿಂದ ಪೈಗಳು ಒಬ್ಬ ವ್ಯಕ್ತಿಯಲ್ಲ; ಒಂದು ಸಂಸ್ಥೆ . ಕನ್ನಡ ಸಾಹಿತ್ಯ, ಕರ್ನಾಟಕದಲ್ಲಿ ಜೈನಧರ್ಮದ ಹುಟ್ಟು, ಕನ್ನಡ ಕವಿಗಳ, ಕಾವ್ಯಗಳ ಕಾಲ ನಿರ್ಣಯ, ಧರ್ಮ, ಇತಿಹಾಸ, ಖಗೋಳ ಶಾಸ್ತ್ರ, ಗಣಿತ, ಭಾಷಾ ಶಾಸ್ತ್ರ– ಹೀಗೆ ಯಾವುದೇ ವಿಷಯವಾಗಿರಲಿ, ಅದಕ್ಕೆ ಸಂಬಂಧಪಟ್ಟ ವಿದ್ವತ್ತು, ಪಾಂಡಿತ್ಯಗಳ ಅಪಾರತೆಯನ್ನು, ತಮ್ಮ ಅಳವಾದ ಗಂಭೀರವಾದ ಅಧ್ಯಯನದ ಮೂಲಕ ಲೇಖಕರು, ಶಿಸ್ತುಬದ್ಧವಾಗಿ ವಿವರಿಸಿ ಗೋವಿಂದ ಪೈಗಳಿಗೆ ನ್ಯಾಯಸಲ್ಲಿಸಿದ್ದಾರೆ.

ಹನ್ನೆರಡು ಭಾಗಗಳಲ್ಲಿ, ಲೇಖಕರು ಗೋವಿಂದ ಪೈಗಳ ಜಾತಿ, ಜನನ, ಸ್ಥಳ, ವಿದ್ಯಾಭ್ಯಾಸ. ಆ ಕಾಲದ ಸಾಮಾಜಿಕ, ಸಾಹಿತ್ಯಿಕ ಪರಿಸರ – ಇತ್ಯಾದಿಗಳನ್ನು ವಿವರಿಸಿರುವುದರ ಜೊತೆಗೆ, ಪೈಗಳ ವಿದ್ಯಾಭ್ಯಾಸ ಕುರಿತೂ ಹೇಳಿದ್ದಾರೆ, ಪೈಗಳು ಹೆಚ್ಚಾಗಿ ತಮ್ಮ ತಾಯಿಯ ತವರೂರಾದ ಮಂಜೇಶ್ವರದಲ್ಲಿ ೨೩ನೇ ಮಾರ್ಚ್ ೧೮೮೩ರಲ್ಲಿ ಜನಿಸಿದರು. ಮಂಗಳೂರಿನ ಕೆನರಾ ಹೈಸ್ಕೂಲು, ಸೈಂಟ್ ಅಲೋಯ್‌ಷಿಯಸ್ ಕಾಲೇಜು ವಿದ್ಯಾಭ್ಯಾಸ; ಇಲ್ಲಿರುವಾಗಲೇ ಸಾಹಿತ್ಯ ಚಟುವಟಿಕೆಗಳು ಆರಂಭವಾಗಿದ್ದು, ಅವರಿಗಿದ್ದ ಅಪಾರವಾದ ಪುಸ್ತಕ ಪ್ರೇಮ– ಮುಂತಾದವುಗಳನ್ನೆಲ್ಲ ಇನಾಂದಾರರು ದಾಖಲಿಸುತ್ತಾರೆ. ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಪದವಿ ಶಿಕ್ಷಣ ಪಡೆದರು ಇಂಗ್ಲಿಷ್ ಭಾಷೆಯ ಮೇಲೆ ಅಪಾರ ಪ್ರಭುತ್ವವನ್ನು ಹೊಂದಿದ್ದರು. ತಮ್ಮ ಬದುಕಿನ ಮೂವತ್ತು ವರ್ಷಗಳನ್ನು ಅಧ್ಯಯನದಲ್ಲಿ ಮತ್ತು ಕುಟುಂಬ ನಿರ್ವಹಣೆಯಲ್ಲಿ ಕಳೆದರು. ಕಾವ್ಯ ಸ್ಫುರಣೆಗೆ

ಅವರ ಮಡದಿಯ ಸಾವೇ ಬಲವತ್ತರವಾದ ಕಾರಣವಾಯಿತು. ಮೊದಲಿನಿಂದಲೂ ಸಂವೇದನಾಶೀಲ ಮನಸ್ಸನ್ನು ಹೊಂದಿದ್ದ ಪೈಗಳಿಗೆ ಮಡದಿಯ ಅಗಲಿಕೆಯ ನೋವು ತೀಕ್ಷ್ಣವಾಗುತ್ತಿದ್ದಂತೆ, ಅವರೊಳಗಿನ ಕವಿಯೊಬ್ಬ ಜಾಗೃತನಾದ, ಜೊತೆಗೆ ಅಧ್ಯಾತ್ಮದತ್ತ ಮನಸ್ಸು ಹೊರಳಿತು, ಎನ್ನುತ್ತಾರೆ ಲೇಖಕರು.

ಇಂಗ್ಲಿಷ್ ಮೇಲೆ ಸಾಕಷ್ಟು ಪ್ರಭುತ್ವವಿದ್ದರೂ ಆ ಕಾಲದಲ್ಲಿ ಕನ್ನಡಕ್ಕಿದ್ದ ದೈನ್ಯಸ್ಥಿತಿಯನ್ನು ಬಲ್ಲವರಾಗಿದ್ದು ಕನ್ನಡ ಕಟ್ಟುವ ಬೆಳೆಸುವ. ಸಮೃದ್ಧವಾಗಿಸುವ ಹಂಬಲದಿಂದ ಕನ್ನಡಕ್ಕೇ ಒಲಿದರು ಎನ್ನುವ ವಿವರಗಳ ಮೇಲೆ ಲೇಖಕರು ಒತ್ತು ಕೊಟ್ಟಿದ್ದಾರೆ. ಇಂಗ್ಲಿಷ್ ಮೇಲಿನ ಭಾಷಾಪ್ರೇಮ, ಪ್ರಭುತ್ವಗಳು ಷೇಕ್ಸ್‌ಪಿಯರ್‌ನ Twelfth Night ಅನುವಾದಿಸಲು ಪ್ರೇರಣೆಯಾಯಿತು. ಹೆಂಡತಿಯ ಅಗಲಿಕೆಯ ನೋವಿನಿಂದ ಹುಟ್ಟಿದ 'ಗಿಳಿವಿಂಡು' ಕವನ ಸಂಕಲನದಲ್ಲಿನ ಗೊಮ್ಮಟ ಸ್ತುತಿ, ನಂದಾದೀಪ ಮತ್ತು ಸಾವಿನ ಬಗೆಗಿನ ನಿಗೂಢ ಚಿಂತನೆಯಿಂದ ಸೃಷ್ಟಿಯಾದ ಗೊಲ್ಗೊಥಾ, ವೈಶಾಖ ಕೃತಿಗಳು– ಇತ್ಯಾದಿ ವಿವರಗಳ ಬಗ್ಗೆ ಬೆಳಕು ಚೆಲ್ಲುತ್ತಾರೆ. ಅಲ್ಲದೆ ಅವುಗಳ ವಿಶ್ಲೇಷಣೆಗೂ ತೊಡಗುತ್ತಾರೆ.

ಮುಂದೆ ಗೋವಿಂದ ಪೈ ಅವರ ಕೃತಿಗಳ ವಿಶ್ಲೇಷಣೆ ಮಾಡುತ್ತಲೇ, ಕನ್ನಡ ಸಾಹಿತ್ಯ, ಭಾಷೆ ಇತ್ಯಾದಿಗಳ ಜೊತೆಗಿನ ಸಂಬಂಧಗಳನ್ನು ಸೂಕ್ಷ್ಮವಾಗಿ ವಿವರಿಸುತ್ತಾರೆ. ಗೋವಿಂದ ಪೈಗಳಮೇಲೆ ಯಾರ್‍ಯಾರ ಪ್ರಭಾವ, ಪ್ರೇರಣೆಗಳು ಇದ್ದವೆಂಬುದನ್ನೂ ಪ್ರಸ್ತಾಪಿಸುತ್ತಾರೆ. ಅಲ್ಲದೆ ಅವರೊಂದಿಗೆ ಭೇಟಿಯಾದ ಸಂದರ್ಭಗಳಲ್ಲಿ ನಡೆದ ಸಂವಾದ, ವಿಚಾರ ವಿನಿಮಯಗಳ ಬಗ್ಗೆ ಬರೆದಿರುವುದನ್ನೂ ಅವರ ಸಾಹಿತ್ಯವನ್ನು ಸರಿಯಾಗಿ ಗ್ರಹಿಸಲು ಸಹಾಯಕವೆಂಬ ಅರಿವಿನೊಂದಿಗೆ ಲೇಖಕರೂ ಅದರ ಬಗ್ಗೆ ಗಂಭೀರವಾಗಿ ವಿವರಿಸುತ್ತಾರೆ; 'ಗಿಳಿವಿಂಡು' ಸಂಕಲನ ರೂಪುಗೊಂಡ ಬಗೆಯನ್ನು ಪೈಗಳು ವಿವರಿಸಿದ್ದನ್ನು ದಾಖಲಿಸುತ್ತಾರೆ. 'ಅವರ ಸಾಹಿತ್ಯ ಸಾಧನೆ ಎಷ್ಟು ದೊಡ್ಡದೆಂಬುದು ಅವರಿಗೆ ತೀರಾ ಹತ್ತಿರ ಬಂದವರಿಗಲ್ಲದೆ ಬೇರೆ ಯಾರಿಗೂ ತಿಳಿಯುತ್ತಿರಲಿಲ್ಲ' ಎಂದು ಹೇಳಿ, ಅವರ ಕೃತಿಗಳಾದ ಗಿಳಿವಿಂಡು, ನಂದಾದೀಪ, ಗೊಲ್ಗೊಥಾ ಮತ್ತು ವೈಶಾಖ ನಾಟಕ ಕೃತಿಗಳಾದ ಹೆಬ್ಬೆರಳು, ಚಿತ್ರಭಾನು ಜಪಾನಿನ ನೋ ನಾಟಕಗಳು – ಕುರಿತು ಪ್ರಸ್ತಾಪಿಸುತ್ತಾರೆ.

ಎರಡನೇ ಭಾಗದಲ್ಲಿ ಕವಿತೆಗಳ ವಸ್ತು, ವಿಶ್ಲೇಷಣೆ, ಅಲ್ಲಿನ ಕವಿತೆಗಳ ರಮ್ಯತೆ ಮುಂತಾದವುಗಳನ್ನು ಉದಾಹರಣೆಗಳೊಂದಿಗೆ ವಿವರಿಸುತ್ತಾರೆ, ದೇಶ ಪ್ರೇಮ, ಪ್ರಕೃತಿ ಸೌಂದರ್ಯ ಅಧಿಭೌತಿಕ ಚಿಂತನೆ, ಪಾರಮಾರ್ಥಿಕತೆ ಇತ್ಯಾದಿ

ಅಂಶಗಳನ್ನು ಹುಟ್ಟು ಸಾವಿನ ನಿಗೂಢತೆಯನ್ನು 'ಪಂಡರಾಪುರದಲ್ಲಿ' ವಿಶ್ವಾಂಜಲಿ, ಕ್ವಾ ಇತ್ಯಾದಿ ಕವಿತೆಗಳನ್ನು ಉದಾಹರಿಸಿ ವಿವರಿಸಿದರೆ 'ಗೋವಿಂದ ಪೈ ಬ್ರಾಹ್ಮಣರೇ ಆಗಿದ್ದರೂ ಬೌದ್ಧಧರ್ಮ, ಜೈನಧರ್ಮ, ಕ್ರೈಸ್ತ ಧರ್ಮ ಇತ್ಯಾದಿಗಳಲ್ಲಿ ನಂಬಿಕೆಯಿರಿಸಿದ್ದು ದೇವಮಾನವರೆಂದು ಕರೆಸಿಕೊಂಡ ಕ್ರಿಸ್ತ, ಬುದ್ಧ, ಮಹಾವೀರನನ್ನು ಕುರಿತೂ ಚಿಂತನೆ ನಡೆಸಿದ್ದಾರೆ' ಎನ್ನುತ್ತಾರೆ ಲೇಖಕರು.

ಮೂರನೇ ಭಾಗದಲ್ಲಿ 'ನಂದಾ ದೀಪ' ಕವನ ಸಂಕಲನದ ವಿಮರ್ಶೆಗೆ ತೊಡಗುವುದಕ್ಕೆ ಮೊದಲು ಲೇಖಕರು "ಇಲ್ಲಿನ ಕವಿತೆಗಳು ಕಳೆದುಕೊಂಡ ಹೆಂಡತಿಗೆ ನೀಡಿದ ಬಾಷ್ಪಾಂಜಲಿ' ಎಂದು ಹೇಳಿದ್ದನ್ನು ಮತ್ತು ಪೈಗಳೇ ಇದರ ಬಗ್ಗೆ ಹೇಳಿದ "As a tribute of tears to my departed beloved and a homage of faith to the creator who seperated us.......' it has been lighted from the fires of sarrow which shall continue to burn till the end of my days' ಎಂದು ಹೇಳಿ 'ನಂದಾದೀಪ' ಸಂಕಲನ ರಚನೆಗೆ ಸಮರ್ಥನೆಯನ್ನು ನೀಡಿರುವುದನ್ನು ಪ್ರಸ್ತಾಪಿಸುತ್ತಾರೆ ಮತ್ತು ಈ ಕವನ ಕೃತಿಗಳ ಸಾಕಷ್ಟು ವಿವರಣೆಯನ್ನು ನೀಡುತ್ತಾರೆ; ವಿಮರ್ಶೆಯನ್ನು ಹೃದಯರಂಗ ಸಂಕಲನಕ್ಕೂ ವಿಸ್ತರಿಸುತ್ತಾರೆ.

೧೯೩೧ರಲ್ಲಿ ಬರೆದ 'ನಂದಾದೀಪ' ಪ್ರಕಟವಾದದ್ದು ಮಾತ್ರ ೧೯೬೮ರಲ್ಲಿ ಎಂದು ಹೇಳಿ ಈ ಕೃತಿಯ ಸ್ವರೂಪವನ್ನು ಕುರಿತು, "The poems in the present collection neither form a chronological sequence nor display any unity of purpose or design. They make a heterogeneons collection, while some of them reflect his basic attitudes and values which he held most dear. patriotism and piety continue to be the major motifs, A large hearted compassion for all living things, a deep seated appreciation of the nobler virtues of man kind that can ennoble and elevate human life, like self effacement, sacrifice, sympathy and heroism, re-appear in many of these poems –ಎಂದು ಹೇಳಿ ಒಟ್ಟಾರೆಯಾಗಿ ಅವರ ಕವಿತೆಗಳ ಮುಖ್ಯವಾದ ಭಾವ, ವಿಚಾರ ಸ್ಥಾನಗಳನ್ನು ಗುರುತಿಸುತ್ತಾರೆ, ಮತ್ತು ಕವಿತಾ ಸಂಕಲನದ ಹಿನ್ನೆಲೆಗಿರುವ ಅಶಯಗಳನ್ನು ವಿವರಿಸುತ್ತಾರೆ. ವಿಶೇಷವಾಗಿ ಈ ಸಂಕಲನದಲ್ಲಿನ ಕಥನ ಕವಿತೆಗಳ ಬಗ್ಗೆ ಒತ್ತು ಕೊಡುತ್ತಾರೆ. ಒಡೊಂದು ಕವಿತೆಯ ಕಥಾನಕ, ನಿರೂಪಣೆಯ ಸ್ವರೂಪವನ್ನೂ ವಿವರಿಸುತ್ತಾರೆ. 'ತೆಂಕಾಫ್ರಿಕಾದ ಹಳ್ಳಿ' 'ಎಣ್ಣೆಬಟ್ಟಲು' ಶೂದ್ರರ್ಷಿಕವಸಾ, ಭಿಕ್ಷುವು– ಪಕ್ಷಿಯು, ಮಾತಂಗಿ, ವಾಸವದತ್ತೆಯು ಹುಲ್ಲು ಕಟಿಗ– ಇತ್ಯಾದಿ ಹಲವಾರು ಕವಿತೆಗಳನ್ನು ವಿವರಿಸಿ ಉದಾಹರಿಸುತ್ತಾರೆ.

ಐದನೇ ಭಾಗದಲ್ಲಿ ಗೋವಿಂದ ಪೈ ಹೆಸರನ್ನು ಸಾರ್ಥಕಗೊಳಿಸಿದ 'ಗೊಲ್ಗೊಥಾ' ಬಗ್ಗೆ ವಿಸ್ತೃತ ವಿವರಣೆ ನೀಡುತ್ತಾರೆ. ೧೯೩೭ ರಲ್ಲಿ ಪ್ರಕಟವಾದ ಈ ಕಥನ ಕಾವ್ಯ ಇಡೀ ಕನ್ನಡ ಸಾಹಿತ್ಯ ಜಗತ್ತು ಬೆರಗಾಗುವಂತೆ ಮಾಡಿದ್ದನ್ನು ಪ್ರಸ್ತಾಪಿಸಿ, ೩೧೭ ಸಾಲುಗಳಲ್ಲಿನ ಈ ಕಥನ ಕವಿತೆಯ ವಸ್ತು, ಶೈಲಿ, ಅದರ ತಾತ್ವಿಕತೆ ಕುರಿತು ಸೂಕ್ಷ್ಮ ವಿವರಣೆ ನೀಡಿ, ಅತ್ಯಂತ ಸಂಕ್ಷಿಪ್ತವಾಗಿ ಕ್ರಿಸ್ತನನ್ನು ದಾರುಣವಾಗಿ ಶಿಲುಬೆಗೇರಿಸಿದ ಕ್ರೌರ್ಯದ ಸನ್ನಿವೇಶದ ಕಥೆಯನ್ನು ಲೇಖಕರು ನಿರೂಪಿಸುತ್ತಾರೆ. ಮುಂದೆ ಆ ಕಥಾನಕವನ್ನು ಹಲವು ಹಂತಗಳಲ್ಲಿ ಸ್ವಲ್ಪ ವಿಸ್ತಾರವಾಗಿ ವಿವರಿಸುತ್ತಾರೆ. ಈ ಕಾವ್ಯದ ಹಿಂದೆ ಗೋವಿಂದ ಪೈಗಳ ಶ್ರಮ ಎಷ್ಟಿತ್ತೆಂಬುದನ್ನು ಅವರು ಮಾಡಿದ ಕ್ರೈಸ್ತಧರ್ಮದ ಅಧ್ಯಯನ ಅನುಸಂಧಾನ, ಕ್ರೈಸ್ತ ವಿದ್ವಾಂಸರೊಂದಿಗೆ ನಡೆಸಿದ ಸಂವಾದ. ಸಂಶೋಧನೆ – ಇತ್ಯಾದಿಗಳ ಬಗ್ಗೆಯೂ ಮೆಚ್ಚುಗೆಯೊಂದಿಗೆ ಮಾತಾಡುತ್ತಾರೆ. ಕಾವ್ಯದ ಪ್ರತಿಯೊಂದು ವಿವರವೂ, ಅವರು ಓದಿರಬಹುದಾದ ಗಾಸ್ಪೆಲ್‌ಗಳ ಸಂಖ್ಯೆಯ ಅಪಾರತೆಗೆ ಸಾಕ್ಷಿಯಾಗಿದೆ ಎನ್ನುತ್ತಾರೆ, ಅಲ್ಲಿನ ಒಂದು ದಾರುಣ ಸನ್ನಿವೇಶದ ಹಿಂದೆ ಇರುವ ಮರುಕದ ತೀವ್ರತೆಯನ್ನು ಗುರುತಿಸಿ ಲೇಖಕರು, ಪೈಗಳ ಬಗ್ಗೆ, ಕಾವ್ಯದ ಬಗ್ಗೆ "Being himself a man of very deep humanitarian sympathies it was easy for the poet in him to be completely absorbed into every aspect of the subject and experience it in total sincerity" ಎಂದು ಮೆಚ್ಚಿಗೆ ಸೂಚಿಸುತ್ತಾರೆ.

ಇನಾಂದಾರರ ಕೃತಿಯ ಆರನೇ ಭಾಗ ಬುದ್ಧನ ಸಾವನ್ನು ಕಟ್ಟಿಕೊಡುವ 'ವೈಶಾಖಿ' ಕಥನ ಕಾವ್ಯವಾಗಿದೆ. ಮಾನವತೆಯನ್ನು ಪೋಷಿಸಿದ. ಎತ್ತಿ ಹಿಡಿದ ಇಂತಹ ಬುದ್ಧನನ್ನು ಕಾವ್ಯದ ನಾಯಕನಾಗಿಸಿದ್ದರ ಹಿಂದಿನ ಗೋವಿಂದಪೈ ಅವರ 'ಚಿಂತನೆ ಏನಿತ್ತೆಂಬುದನ್ನು "Buddhist conception of the nature of the soul or of the hereafter did not come in the way of his whole hearted acceptance of the primary of all that enrich and enoble man's life here and now, so that its teaching had for him an immediacy of appeal which explains his admiration for them and for the person who gav them to the world' ಎಂದು ಬೌದ್ಧ ಧರ್ಮದಲ್ಲಿ 'ಆತ್ಮದ' ಪರಿಕಲ್ಪನೆ ಏನೇ ಇರಲಿ, ಪೈಗಳಿಗೆ ಬುದ್ಧನ ತತ್ಕಾಲದ ಮನುಷ್ಯನ ನೋವು, ಸಂಕಟಗಳಿಗೆ ಪರಿಹಾರ ಸೂಚಿಸಿದ್ದೇ ಮಹಾನ್ ಎನಿಸಿದ್ದು, ಬುದ್ಧನ ಕುರಿತ ಈ ಕಥನಕ್ಕೆ ಬಲವಾದ ಪ್ರಚೋದನೆ ನೀಡಿರುವ ಸಾಧ್ಯತೆಯನ್ನು ಸೂಚಿಸುತ್ತಾರೆ.

೮೦ನೇ ವರ್ಷ ಪೂರೈಸಲು ಎರಡು ದಿನವಿದ್ದಾಗ ಚುಂದಾ ಕೊಟ್ಟುಹೋಗಿದ್ದ ಮಾಂಸದ ಆಹಾರ ಸೇವನೆಯಿಂದ ಆರೋಗ್ಯ ಕೆಟ್ಟು ಸಾವನ್ನಪ್ಪಿದ ಸಂಗತಿಯ ವಿವರಗಳನ್ನು ಒಳಗೊಂಡ ಕಥಾನಕವೇ ಈ ಕಾವ್ಯದ ವಸ್ತು, ಚುಂದನೇ ತನ್ನ

ಸಾವಿಗೆ ಕಾರಣನಾದರೂ ದಯಾರ್ದ್ರ ಹೃದಯಿಯಾದ ಬುದ್ಧ ಅವನನ್ನು ದೂಷಿಸುವುದೇ ಇಲ್ಲ, ತಾನಷ್ಟೇ ಅಲ್ಲ ಬೇರೆಯಾರೂ ಕೂಡಾ ಅವನನ್ನು ತನ್ನ ಸಾವಿಗೆ ಕಾರಣವೆಂದು ದೂಷಿಸಲೇ ಬಾರದೆಂದು ಕಟ್ಟುನಿಟ್ಟಾಗಿ ಆದೇಶಿಸಿದ, ಇದು ಬುದ್ಧನ ಔನ್ನತ್ಯಕ್ಕೆ ಸಾಕ್ಷಿಯಾಗಿದೆ.

ಸಮಗ್ರ ಕಾವ್ಯದ ಕಥಾನಕವನ್ನು ಎಲ್ಲ ವಿವರಗಳೊಂದಿಗೆ ವಿವರಿಸಿ, ಅಲ್ಲಿನ ಕಾವ್ಯದ ನಿರೂಪಣೆಯ ಸೊಗಸು, ಬಳಸಿದ ಪ್ರತಿಮೆ, ರೂಪಕಗಳ ಅರ್ಥ ಸೌಂದರ್ಯಗಳನ್ನು ವಿವರಿಸುತ್ತಾರೆ. ಅಂತಿಮವಾಗಿ ಎರಡೂ ಕಥನ ಕಾವ್ಯಗಳಾದ ಗೊಲ್ಗೊಥಾ ಮತ್ತು ವೈಶಾಖಿಯನ್ನು ತೌಲನಿಕವಾಗಿ ಪರಿಶೀಲಿಸಿ ಅವುಗಳ ಬಗೆಗಿನ ಅಭಿಪ್ರಾಯವನ್ನು ಲೇಖಕರು "Golgatha pictures a life cruelly cut of in its prime, truncated and ending tragically, while,vaishakhi pictuers one who had lived a long and full life, who passed away by his own choice with a full sense of fulfilment" ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ ಎರಡೂ ಕಾವ್ಯಗಳು ದುಃಖ ಮರುಕವನ್ನು ಓದುಗರಲ್ಲಿ ಹುಟ್ಟು ಹಾಕುತ್ತವೆ.

ಏಳನೇ ಅಧ್ಯಾಯದಲ್ಲಿ 'ಹೆಬ್ಬೆರಳು' ಎಂಟನೇ ಅಧ್ಯಾಯದಲ್ಲಿ 'ಚಿತ್ರಭಾನು' ನಾಟಕಗಳ ವಿಮರ್ಶೆಯಿದೆ. ಒಂಬತ್ತನೇ ಅಧ್ಯಾಯದಲ್ಲಿ ಏಕಾಂಕ ನಾಟಕಗಳಾದ ತಾಯಿ ಮತ್ತು 'ನೋ' ನಾಟಕಗಳ ವಿಶ್ಲೇಷಣೆಯಿದೆ.

'ಹೆಬ್ಬೆರಳು' ನಾಟಕದಲ್ಲಿ ಈಗಾಗಲೇ ಪರಿಚಿತವಾದ ಏಕಲವ್ಯನ ಕಥಾನಕವಿದೆ. ಎಲ್ಲ ಅನ್ಯ ನಾಟಕಗಳಲ್ಲಿಯೂ ಏಕಲವ್ಯನ ಗುರುಭಕ್ತಿಯ ಪರಾಕಾಷ್ಠೆಯನ್ನು ಬಿಂಬಿಸುವ, ಬಿಲ್ವಿದ್ಯೆಯ ಪ್ರದರ್ಶನಕ್ಕೆ ಅತ್ಯಂತ ಅನಿವಾರ್ಯವಾದ ಹೆಬ್ಬೆರಳನ್ನು ಕತ್ತರಿಸಿಕೊಡುವ ಸಂದರ್ಭವೇ ಪ್ರಧಾನವೆಂಬಂತೆ ಇಲ್ಲಿಯೂ ಅದೇ ಕಥೆಯನ್ನು ಬಿಂಬಿಸಲಾಗಿದೆ. ಒಂದು ಬದಲಾವಣೆಯೆಂದರೆ ಇಲ್ಲಿ ಮೇಳದ ಸೇರ್ಪಡೆ, ಲೇಖಕರಾದ ಇನಾಂದಾರರು ಕಥಾನಕದ ಮೂಲದ ಬಗ್ಗೆಯೂ ಬೆಳಕು ಚೆಲ್ಲುತ್ತಾರೆ. ನಾಲ್ಕು ದೃಶ್ಯಗಳಲ್ಲಿರುವ ಈ ನಾಟಕದಲ್ಲಿನ ಮಹತ್ವದ ಅಂಶಗಳನ್ನು ಹೀಗೆ ಗುರುತಿಸುತ್ತಾರೆ.

೧. ಏಕಲವ್ಯ ನಿಷಾದನಾದ್ದರಿಂದ ದ್ರೋಣಾಚಾರ್ಯರು ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಲು ನಿರಾಕರಿಸುತ್ತಾರೆ.

೨. ಅರ್ಜುನನಿಗೆ ಲೋಕದಲ್ಲಿ ಅವನನ್ನು ಮೀರಿಸುವಂಥ ಬಿಲ್ಗಾರ ಇರದಿರುವಂತೆ ಮಾಡುತ್ತೇನೆಂದು ವಾಗ್ದಾನ ನೀಡಿರುತ್ತಾರೆ.

೩. ತಾನು ನೀಡಿದ ವಾಗ್ದಾನಕ್ಕೆ ಭಂಗ ಬರುವ ಸಾಧ್ಯತೆಯ ಅರಿವಿನಿಂದಾಗಿ ಬಡಪಾಯಿ ಏಕಲವ್ಯನಿಂದ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಬೇಡುತ್ತಾರೆ–ಈ ಮೇಲಿನ ಮೂರು ಅಂಶಗಳಿಗೆ ಅನುಗುಣವಾಗಿ ನಾಟಕದ ಕಥಾನಕದ ಬೆಳವಣಿಗೆಯನ್ನು ಅದರ ತಿರುವುಗಳನ್ನು ವಿಶ್ಲೇಷಿಸುತ್ತಾರೆ. ಹೆಬ್ಬೆರಳು ನಾಟಕದ ಕಥೆ ಪ್ರಾಚೀನವೇ ಆದರೂ ಅದರ ಸಂದೇಶ ಆಧುನಿಕವಾಗಿದೆ. ಜಾತಿ ಸಮಾನತೆಯನ್ನು ನಿರೀಕ್ಷಿಸುವ ಸೂಚನೆಯೂ ಇದೆ ಎನ್ನುತ್ತಾರೆ. ಎಂಟನೇ ಅಧ್ಯಾಯದಲ್ಲಿ 'ಚಿತ್ರಭಾನು' ಕಥಾನಕವಿದೆ. ದೇಶಭಕ್ತ ಯುವಕನೊಬ್ಬನ ಸಾವಿನ ದುರಂತವನ್ನು ಚಿತ್ರಿಸುತ್ತಾರೆ. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯನ್ನು ಕಾಲಘಟ್ಟದ ಕಥೆ ವಾಸ್ತವ ಸಂಗತಿಗಳನ್ನು ಒಳಗೊಂಡಿದ್ದರೂ, ಕಾಲ್ಪನಿಕ ಪಾತ್ರಗಳು ಈ ನಾಟಕದ ಚೌಕಟ್ಟಿನೊಳಗೆ ಕಾಣಿಸಿಕೊಳ್ಳುತ್ತವೆ. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು, ಪೋಲಿಸರ ಗುಂಡಿಗೆ ಬಲಿಯಾಗಿ ಪ್ರಾಣಾರ್ಪಣೆ ಮಾಡಿದ ಅಸಂಖ್ಯಾತ ಮಂದಿ ಲೆಕ್ಕಕ್ಕೆ, ಗುರುತಿಗೆ ಸಿಗದೆ ಹೋಗಿದ್ದಾರೆ. ಇಂಥ ಸಂದರ್ಭದಲ್ಲಿ ಅಂತಹ ತ್ಯಾಗಕ್ಕೆ ಬಲಿಯಾದ ಯುವಕನೊಬ್ಬನನ್ನು ಅನಿವಾರ್ಯವಾಗಿ ಕಲ್ಪಿತವಾಗಿ ತಂದುಕೊಳ್ಳುತ್ತಾರೆ. ಇಂಥ ಕಲ್ಪಿತ ಪಾತ್ರದ ಮೂಲಕ ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ಯುವಕನೊಬ್ಬನ ಕಥೆಯನ್ನು ನಾಟಕದ ವಸ್ತುವಾಗಿ ಬಳಸಿಕೊಳ್ಳಲಾಗಿದೆ. 'ಚಿತ್ರಭಾನು' ಸಂವತ್ಸರದಲ್ಲಿ ನಡೆದ ಘಟನೆಯಾದ್ದರಿಂದ ನಾಟಕಕ್ಕೆ 'ಚಿತ್ರಭಾನು' ಹೆಸರೇ ಸಾರ್ಥಕವಾಗಿದೆ. ವೇಣುಗೋಪಾಲ, ಅವನ ತಾಯಿ ಯಶೋದೆ ಸೋದರಿ ಜಾನಕಿ– ಇವರೇ ಪಾತ್ರಧಾರಿಗಳು. ಈ ಪಾತ್ರಗಳ ಮೂಲಕವೇ ನಾಟಕದ ಕಥೆ ಮುಂದುವರೆಯುತ್ತದೆ. ನಿಸ್ವಾರ್ಥ ದೇಶಪ್ರೇಮಿ, ಕ್ರಿಯಾಶೀಲ ಸ್ವಾತಂತ್ರ್ಯ ಹೋರಾಟಗಾರ, ವೇಣುವಿನ ಹೋರಾಟದ ಚಟುವಟಿಕೆಗಳ ಸ್ವರೂಪ, ಅವನ ಅನನ್ಯ ಸಾಹಸ ಶೌರ್ಯ, ಅಂತಿಮವಾಗಿ ನಡೆದ ಅವನ ಬಲಿದಾನ ಇವೇ ಮುಖ್ಯವಾದ ಕಥಾಂಶಗಳು.

ಒಂಬತ್ತನೇ ಅಧ್ಯಾಯದಲ್ಲಿ ಜಪಾನಿ ಶೈಲಿಯ ಜಾನಪದೀಯ ಮಾದರಿಯ 'ನೋ' ನಾಟಕಗಳಿವೆ. ಇದರಲ್ಲಿ ಒಂದು ಏಕಾಂಕವಾಗಿದ್ದೆ ಮಿಕ್ಕವು ಅಪೆರಾ ಮಾದರಿಯವು ನಾಟಕಗಳಾಗಿವೆ. ೧೫ನೇ ಶತಮಾನದಲ್ಲಿ ಜಪಾನಿನ ಶಿಂತೋ ಧರ್ಮದ ದೇವತೆಗಳಲ್ಲಿ ಮುಖ್ಯವಾದ ಕಸುನ ದೇವಾಲಯದ ದೇವತೆಯ ಹಬ್ಬಗಳಲ್ಲಿ ಆಚರಿಸಲ್ಪಡುತ್ತಿದ್ದ ನಾಟ್ಯವೇ 'ನೋ' ನಾಟಕಗಳಿಗೆ ಮೂಲವಾಯಿತು. ಈ ನಾಟಕ ಕೃತಿ, ಅನುವಾದಿತ ನಾಟಕಗಳ ಸಂಕಲನವಾಗಿದೆ. ಇಲ್ಲಿ ಬರುವ ಮೇಳ ಗ್ರೀಕ್ ನಾಟಕಗಳಲ್ಲಿನ 'ಮೇಳ'ಕ್ಕಿಂತ ಭಿನ್ನವಾಗಿರುವುದನ್ನು ಲೇಖಕರು ಗುರುತಿಸುತ್ತಾರೆ ಮತ್ತು ಎಂಟು ನಾಟಕಗಳನ್ನು ಬಿಡಿ ಬಿಡಿಯಾಗಿ ಚರ್ಚಿಸುತ್ತಾರೆ. ಬೌದ್ಧಮತದವನಲ್ಲದ ಕಾರಣ ತಾನು ಪ್ರೀತಿಸಿದವನು ತನಗೆ ದಕ್ಕದ ಕಾರಣ

ಆತ್ಮಹತ್ಯೆಗೆ ಗುರಿಯಾಗುವ ಕಥೆಯನ್ನು ಕಾಯೋಯ್ ಕೊ ಮಾಚಿ ನಾಟಕದ ಕಥೆಯಾಗಿದ್ದರೆ, 'ಸೊತೋಬಾಕೊಮಾಚೆ'ಯಲ್ಲಿ ಸಮುದ್ರ ದಂಡೆಯ ಮೇಲಿನ ಮರವೊಂದರಿಂದ ನೇತಾಡುತ್ತಿದ್ದ ಅದ್ಭುತ ಸೌಂದರ್ಯದ ಗೌನೊಂದನ್ನು ನೋಡಿದ ಮೀನುಗಾರನೊಬ್ಬ ಅದನ್ನು ತೆಗೆದಿರಿಸಿಕೊಂಡಾಗ, ಕಳೆದು ಹೋದ ಗೌನನ್ನು ಹುಡುಕಲು ಬಂದ ಅಪ್ಸರೆಯೊಬ್ಬಳು ಅವನ ಬಳಿ ಇರುವುದನ್ನು ಪತ್ತೆಹಚ್ಚಿ ಅವನನ್ನು ಆ ಗೌನನ್ನು ತನಗೆ ಹಿಂತಿರುಗಿಸಲು ಕೇಳಿಕೊಂಡರೂ ಕೊಡದಿದ್ದಾಗ ಆಮಿಷವೊಡ್ಡಿ ಅದನ್ನು ಪಡೆಯುತ್ತಾಳೆ. ಅದಕ್ಕೆ ಬದಲಾಗಿ ವಿಶ್ವದಲ್ಲಿಯೇ ಭೂಮಿಯ ಮೇಲೆಲ್ಲೂ ನೋಡಲು ಸಿಗದ, ಗಂಡರನ್ನು ಬಹುವಾಗಿ ಸಂತೋಷದಿಂದ ಮೈಮರೆಸುವ ನೃತ್ಯವೊಂದನ್ನು ಉಡುಗೊರೆಯಾಗಿ ನೀಡುತ್ತಾಳೆ. ಇದೇ ಈ ನಾಟಕದ ಕಥಾನಕವಾಗಿದೆ.

'ಕುಮಸಾಕಾ' ನಾಟಕದಲ್ಲಿ ಎರಡು ಅಂಕಗಳಿವೆ. ದೊಡ್ಡ ದಾರಿಗಳ್ಳನಾಗಿದ್ದ ಕುಮಸಾಕನ ಪ್ರೇತವು ಒಬ್ಬ ಮುದಿಯ ಯಾಜಕನ ರೂಪದಲ್ಲಿ ಬಂದು ಯಾವನೋ ಒಬ್ಬ ಯಾತ್ರಿಕನಾದ ಯಾಜಕನನ್ನು ಎದುರ್ಗೊಂಡು ಆ ದಿನ ಸತ್ತ ಅನಾಮಧೇಯನೊಬ್ಬನ ಸದ್ಗತಿಗಾಗಿ ಪ್ರಾರ್ಥಿಸಬೇಕೆಂದು ಕೇಳಿಕೊಳ್ಳುತ್ತಾನೆ. ಮುದಿ ಯಾಜಕನ ಗುಡಿಲಲ್ಲಿ, ಪ್ರಾರ್ಥಿಸಲು ನೋಡಿದರೆ, ಬುದ್ಧನ ವಿಗ್ರಹವೇ ಇಲ್ಲ. ಬದಲಾಗಿ ಈಟಿ, ಮುದ್ಗರ ಬಾಣಗಳಿರುವುದನ್ನು ಕಂಡು ಅಚ್ಚರಿಪಡುತ್ತಾನೆ. ಮುದಿಯಾಜಕ ಅವುಗಳು ಇರುವುದು ದಾರಿಹೋಕರ ರಕ್ಷಣೆಗೆಂದೂ, ಬುದ್ಧನ ಆರಾಧನೆ ಎಷ್ಟು ಮುಖ್ಯವೊ ಜನರ ಪ್ರಾಣರಕ್ಷಣೆಯೂ ಅಷ್ಟೇ ಮುಖ್ಯವೆಂದು ಸಮರ್ಥಿಸಿಕೊಳ್ಳುತ್ತಾನೆ. ಇಡೀ ನಾಟಕದ ಆಶಯವೇ ಇದಾಗಿದೆ ಎಂಬುದನ್ನು ಗುರುತಿಸುತ್ತಾರೆ.

ಮುಂದಿನ 'ತ್ಸುನಿಮಾಸ', ಸತ್ತು ಹೋಗಿದ್ದ ಸಾಹಸಿ ಯೋಧನ ಆತ್ಮ ಮತ್ತು ಯಾಜಕನೊಬ್ಬನ ನಡುವೆ ನಡೆಯುವ ಸಂವಾದವನ್ನು ಪ್ರಸ್ತುತಪಡಿಸುತ್ತದೆ. ಮೆಚ್ಚಿಗೆಯ ರೂಪವಾಗಿ ಬಂದಿದ್ದ ಸಂಗೀತವಾದ್ಯವೊಂದು ಈಗ ತನ್ನ ಆತ್ಮವನ್ನು ಆಹ್ವಾನಿಸಲು ಯಾಜಕ ಸಾಧನವಾಗಿ ಬಳಸಿಕೊಳ್ಳುತ್ತಾನೆ. ಒಂದು ದಿನ ಎಲ್ಲರನ್ನೂ ಕರೆಸಿ ವಾದ್ಯಗೋಷ್ಠಿ ಏರ್ಪಡಿಸಿ ಆತ್ಮವೂ ತನ್ನ ವಾದ್ಯವನ್ನು ನುಡಿಸುವಂತೆ ಯೋಜಿಸುತ್ತದೆ.

ಅದ್ಭುತ ಸಂಗೀತಗೋಷ್ಠಿಯೂ ನಡೆಯುತ್ತದೆ. ನಂತರ ಆತ್ಮ ಮರೆಯಾಗುತ್ತದೆ. ಯಾಜಕ ತಾನು ಕಂಡದ್ದು ವಾಸ್ತವವೋ ಕಲ್ಪನೆಯೋ ಎಂದು ಅಚ್ಚರಿಪಡುತ್ತಾನೆ. ಈ ನಾಟಕದ ಆಕರ್ಷಣೆ ನಿಂತಿರುವುದು ರಂಜನೀಯವಾದ ದೃಶ್ಯ ಸಂಯೋಜನೆ

ಮತ್ತು ಸಂಗೀತಗಳ ಮೇಲೆ ಎಂಬ ಅಭಿಪ್ರಾಯವನ್ನು ಕಥಾವಿವರಣೆಯ ಅಂತ್ಯದಲ್ಲಿ ಸೂಚಿಸುತ್ತಾರೆ.

'ಸುಮಾಗೆಂಜಿ' ಎಂಬುದೊಂದು ಜಾನಪದೀಯ, ಮನೋರಂಜಕ ನಾಟಕವಾಗಿದೆ. ಗೆಂಜಿ ಎಂಬ ಸೌದೆ ಕಡಿಯುವವನೊಬ್ಬ ಸತ್ತು ಅವನ ಆತ್ಮ 'ಸುಮಾ' ಎಂಬ ನದೀ ತೀರದ ಪ್ರದೇಶವೊಂದರಲ್ಲಿ ವಾಸಿಸುತ್ತಿರುತ್ತದೆ. ಪುಜಿವಾರ ಎಂಬ ಷಿಂತೋ ದೇವಾಲಯದ ಪೂಜಾರಿಯೊಬ್ಬ ಗೆಂಜಿಯನ್ನು ಹುಡುಕುತ್ತಾ ಬರುತ್ತಾನೆ. ಗೆಂಜಿಯೇ ಒಬ್ಬ ಮುದುಕನಾಗಿ ಕಾಣಿಸಿಕೊಳ್ಳುತ್ತಾನೆ. ಪೂಜಾರಿ, ಅವನೇ ಗೆಂಜಿಯೆಂದು ತಿಳಿಯದೆ, ಗೆಂಜಿಯೆಲ್ಲಿರುವನೆಂದು ಕೇಳುತ್ತಾನೆ. ಗೆಂಜಿಯ ಆತ್ಮ, ಗೆಂಜಿ ಮುಂದೆ ಹೋದರೆ ಸಿಗುತ್ತಾನೆಂದು ದಾರಿ ತಿಳಿಸುತ್ತಾನೆ. ಚಂದ್ರೋದಯದವರೆಗೂ ಕಾಯುವಂತೆ ಸೂಚಿಸುತ್ತಾನೆ. ಅಂತೆಯೇ ಕಾದ ಪೂಜಾರಿಗೆ ಅದ್ಭುತ ರಮ್ಯ ರೋಮಾಂಚಕ ಅಲೌಕಿಕ ದೃಶ್ಯಗಳು ಕಾಣಸಿಗುತ್ತವೆ. ಸುತ್ತಲೂ ಸಂಗೀತ ಹೊಮ್ಮಿ ಹರಿಯುತ್ತದೆ.

ಹೀಗೆ 'ನೋ' ನಾಟಕಗಳು, ಕಾಲ್ಪನಿಕ, ಜಾನಪದೀಯ ರೋಮಾಂಚಕ ರಮ್ಯ ಕಥಾನಕಗಳನ್ನೇ ವಸ್ತುವಾಗಿ ಉಳ್ಳ, ಸಂಗೀತವನ್ನೇ ಜೀವಾಳವಾಗಿಸಿಕೊಂಡ ಈ ನಾಟಕಗಳನ್ನು ಗೋವಿಂದ ಪೈಗಳು ಭಾಷಾಂತರಿಸಿರುವುದನ್ನು ಪರಿಚಯಿಸುತ್ತಾರೆ. ಹತ್ತನೇ ಅಧ್ಯಾಯದಲ್ಲಿ ವಿವರಿಸಲಾದ ಕೃತಿ ಕನ್ನಡದ ಮೊರೆ. ೧೯೭೭ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಲೇಖನಗಳ ಸಂಪುಟ. ಇದರಲ್ಲಿ ಹೆಚ್ಚಾಗಿ ಆಧುನಿಕ ಕನ್ನಡ ಸಾಹಿತ್ಯ ಕುರಿತಾಗಿ, ಮುಖ್ಯವಾಗಿ ಸಾಹಿತ್ಯದ ಪ್ರಮುಖ ಪ್ರಕಾರಗಳಾದ ಕಥೆ, ಕಾದಂಬರಿ, ಕಾವ್ಯ, ನಾಟಕಗಳೇ ಅಲ್ಲದೆ ಛಂದಸ್ಸು, ಸಮ್ಮೇಳನಾಧ್ಯಕ್ಷ ಭಾಷಣ ಮುಂತಾದವುಗಳನ್ನೂ ಒಳಗೊಂಡ ಬೃಹತ್ ಲೇಖನ ಸಂಪುಟವಾಗಿದೆ, ಇವುಗಳ ಜೊತೆಗೆ ಕವಿಗಳ ಜನ್ಮದಿನ ಶತಮಾನೋತ್ಸವ ಮುಂತಾದ ಸಂದರ್ಭಗಳಿಗೆ ಬರೆದ ಲೇಖನಗಳೂ, ಅವರ ಕಾಲದ ಅನೇಕ ಮಂದಿ ಸಾಹಿತ್ಯ ದಿಗ್ಗಜಗಳೆನಿಸಿಕೊಂಡ ಬೇಂದ್ರೆ, ಎಂ.ಆರ್. ಶ್ರೀನಿವಾಸಮೂರ್ತಿ, ನಾರಾಯಣ ಕಿಲ್ಲೆ, ಎಂ.ಎನ್. ಕಾಮತ್ ಮುಂತಾದವರ ವ್ಯಕ್ತಿ ಚಿತ್ರಗಳೂ, ಅವರೊಂದಿಗೆ ನಡೆದ ಸಾಹಿತ್ಯ ಸಂವಾದಗಳೂ ಸೇರಿಕೊಂಡಿವೆ ಎಂಬುದನ್ನು ಗುರುತಿಸಿ ಅವುಗಳನ್ನು ದಾಖಲಿಸಿ, ವಿಭಿನ್ನ ವಿಷಯಗಳಿಗೆ ಸಂಬಂಧಪಟ್ಟ ಚರ್ಚೆ ಸಂವಾದಗಳಿಂದ ಹೊಮ್ಮಿದ ಮಹತ್ವದ ಅಂಶಗಳ ಬಗ್ಗೆ ಮಾತನಾಡುತ್ತಾರೆ. ಈ ಎಲ್ಲ ಲೇಖನಗಳ ಅವಲೋಕನದಿಂದ ಲೇಖಕರು ಗೋವಿಂದ ಪೈಗಳಿದ್ದ ವಸ್ತು ನಿಷ್ಠತೆ, ಸಂಶೋಧಕ ದೃಷ್ಟಿ ವಿಷಯ ಜ್ಞಾನ, ನಿಖರವಾದ ನಿರೂಪಣೆಯ ಸಾಮರ್ಥ್ಯ, ನಿರ್ದುಷ್ಟ ನಿಲುವುಗಳು – ಇತ್ಯಾದಿ ಅಂಶಗಳ ಬಗ್ಗೆ ಮೆಚ್ಚುಗೆಯನ್ನು

ವ್ಯಕ್ತಪಡಿಸುತ್ತಾರೆ. ಹನ್ನೊಂದನೆ ಅಧ್ಯಾಯದಲ್ಲಿ ಪೈ ಅವರ, ಕಾವ್ಯದ ಬಗೆಗಿನ ನಿಲುವುಗಳು, ಚಾರಿತ್ರಿಕ ಶೋಧಗಳನ್ನು ಒಳಗೊಂಡ ಬರಹಗಳ ಬಗ್ಗೆ ಬರೆಯುತ್ತಾರೆ. ಕಾವ್ಯಕ್ಷೇತ್ರ, ಸಂಶೋಧನ ಕ್ಷೇತ್ರಕ್ಕೆ ಅವರ ಅಪಾರ ಕೊಡುಗೆಯನ್ನು ಅದರ ಸ್ವರೂಪವನ್ನೂ ವಿಶ್ಲೇಷಿಸಿ, ಮಹತ್ವದ ನಿಲುವುಗಳ ಬಗ್ಗೆ ಬೆಳಕು ಚೆಲ್ಲುತ್ತಾರೆ. ಅಲ್ಲದೆ ಪೈ ಅವರ ಸಂಶೋಧನೆ ಎರಡು ನೆಲೆಗಳಲ್ಲಿ ನಡೆದದ್ದನ್ನು – ಚಾರಿತ್ರಿಕ ನೆಲೆ, ಮತ್ತು ವಿಶೇಷವಾಗಿ ತುಳುನಾಡಿನ ಸಾಂಸ್ಕೃತಿಕ ನೆಲೆ ಎಂಬುದನ್ನು ಒತ್ತಿ ಹೇಳುತ್ತಾರೆ.

ಅಪಾರ ಸಂಖ್ಯೆಯಲ್ಲಿರುವ ಅವರ ಅತ್ಯಂತ ಮಹತ್ವದ ಲೇಖನಗಳೆಲ್ಲವೂ ಬಹುಪಾಲು ಪತ್ರಿಕೆಗಳಲ್ಲಿ ಆಗಾಗ, ಅಲ್ಲಲ್ಲಿ ಪ್ರಕಟವಾಗುತ್ತಿದ್ದವುಗಳಾದ್ದರಿಂದ ಹಂಚಿಕೆಯಾಗಿ ಅಲಭ್ಯವಾಗಿದ್ದು, ಮೌಲಿಕವಾದ ಲೇಖನಗಳು ಸಂಕಲಿತವಾಗದೆ ಹೋದದ್ದು ದುರಂತ ಸಂಗತಿಯಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಇಂಥ ನಿರಾಶಾದಾಯಕ ಪರಿಸ್ಥಿತಿಯಲ್ಲಿ ಡಾ. ಶ್ರೀನಿವಾಸ ಹಾವನೂರರ ಮತ್ತು ಶ್ರೀ ಎಂ.ಬಿ. ನಾಯಕ್ ಅವರ ಶ್ರಮದ ಪರಿಣಾಮವಾಗಿ ಒಂದಷ್ಟನ್ನು ಪತ್ತೆಹಚ್ಚಿ ಸಂಗ್ರಹಿಸಲು ಸಾಧ್ಯವಾದದ್ದನ್ನು ಸಂತೋಷದ ಸಂಗತಿಯೆಂದು ಭಾವಿಸುತ್ತಾರೆ. 'ವಾಙ್ಮಯ ದರ್ಶನ' ಹೆಸರಿನ ಬೃಹತ್ ಸಂಪುಟ ಪ್ರಕಟವಾಗಿ, ಗೋವಿಂದ ಪೈ ಅವರ ಶ್ರಮಕ್ಕೆ ಸಾರ್ಥಕತೆ ಲಭ್ಯವಾಗಿದೆ ಎನ್ನುತ್ತಾರೆ ಲೇಖಕರು.

ಸಾರಸ್ವತ ಬ್ರಾಹ್ಮಣ ಸಮುದಾಯಕ್ಕೆ ಸೇರಿದ ಪೈ ಅವರು ಇದರ ಮೂಲ, ತುಳುನಾಡಿನ ಪ್ರಾಚೀನತೆ, ಇತಿಹಾಸ, ತುಳುನಾಡನಾಳಿದ ರಾಜವಂಶಗಳು ಗ್ರೀಕರೊಡನೆ ತುಳುನಾಡಿನ ಸಂಬಂಧ, ವಿಭಿನ್ನ ಮತ ಪಂಥಗಳ ಉಗಮ, ವಿಕಾಸ – ಇತ್ಯಾದಿಗಳ ಬಗ್ಗೆ ಮೂಡಿದ ಜಿಜ್ಞಾಸೆಯೇ ಅವರ ಸಂಶೋಧನ ಪ್ರವೃತ್ತಿಗೆ ಚಾಲನೆಯಾಯಿತೆಂದು ಲೇಖಕರು ಗ್ರಹಿಸಿ ಬರೆಯುತ್ತಾರೆ. ಈ ಸಂಶೋಧನ ಪ್ರವೃತ್ತಿ ತುಳುನಾಡು, ನುಡಿಗಷ್ಟೇ ಸೀಮಿತಗೊಳ್ಳದೆ ಕರ್ನಾಟಕ, ಕನ್ನಡ ಭಾಷೆ, ಭಾಷಾ ಪ್ರಾಚೀನತೆಗೂ ವಿಸ್ತರಿಸಿ, ಅಸಂಖ್ಯ ದಾಖಲೆ-ಪುರಾವೆಗಳನ್ನು ಪರಿಶೀಲಿಸಿ, ಹಿಂದಿನವರ ಅಭಿಪ್ರಾಯಗಳನ್ನು ನಿರಾಕರಿಸಿಯೋ, ಪರಿಷ್ಕರಿಸಿಯೋ ತಮ್ಮ ಶೋಧದ ನಿರ್ವಚನಗಳನ್ನು ವಿದ್ವಾಂಸರ ಮುಂದಿರಿಸಿ, ಸಮರ್ಥನೆ, ಮೆಚ್ಚುಗೆಗಳನ್ನು ಗಳಿಸಿದರೆಂಬುದನ್ನು ತಿಳಿಸುತ್ತಲೇ ಪೈ ಅವರ ಸಂಶೋಧನೆಯ ರೀತಿ ವಿಧಾನಗಳನ್ನು, ಸ್ವರೂಪವನ್ನು, ಕನ್ನಡ ಕವಿಗಳ, ಕವಿಕೃತಿಗಳ ಕಾಲ ನಿರ್ಣಯ, ಕಾವ್ಯಗಳಿಗೆ ಪ್ರೇರಣೆಯಾದ ಸಂಸ್ಕೃತ ಪ್ರಾಕೃತ ಕಾವ್ಯಗಳ ವಿವರಣೆ ಇತ್ಯಾದಿಗಳನ್ನು ಒಳಗೊಂಡಂತೆ ಅವರ ಸಂಶೋಧನ ಪ್ರತಿಭೆಯ ಅಖಂಡತೆ ಬಗ್ಗೆ ಲೇಖಕರು, "It should be obvious that this stupendous

body of research work wouldnt have been possible without his having read every single work of every single author from ancient to modern times, and not merely read in a general sort of way but read line by line and word by word, pdeti with an eye on the implications of every single expression, This is a different kind of discipline and may if ones capacity to respond aesthetically to a work of literature" ಎಂದು ಹೇಳಿ ಪೈ ಅವರ ಸಂಶೋಧನೆಯ ಶಿಸ್ತು, ಅಪಾರ ಶ್ರಮದ ಸ್ವರೂಪವನ್ನು ತುಂಬ ಗಂಭೀರವಾದ ರೀತಿಯಲ್ಲಿ ಗ್ರಹಿಸಿ ಹೇಳಿದ ಮೆಚ್ಚುಗೆಯ ಮಾತುಗಳು, ಲೇಖಕರು ಗೋವಿಂದ ಪೈಗಳಿಗೆ ನೀಡುವ ಶ್ರದ್ಧಾಭಕ್ತಿಯ ಅಪೂರ್ವ ಕಾಣಿಕೆಯಾಗಿದೆ.



# ಕಾಳಿದಾಸನ ಕಥಾನಕಗಳು

ಸಂಸ್ಕೃತದ ಮಹಾಕವಿ ಮಹಾ ನಾಟಕಕಾರನೆಂದು ಜಗದ್ವಿಖ್ಯಾತನಾದ ಕಾಳಿದಾಸನ (ಕಾಲಿದಾಸನ) ಕಾವ್ಯ ನಾಟಕಗಳ ಕಥಾರೂಪಾಂತರಗಳ ಸಂಕಲನವಾದ 'ಕಾಲಿದಾಸನ ಕಥಾನಕಗಳು ಎಂಬ ಕೃತಿ ೧೯೫೫ರಲ್ಲಿ ಮೊದಲ ಆವೃತ್ತಿಯಾಗಿ ಪ್ರಕಟಗೊಂಡು ಜನಪ್ರಿಯತೆ ಮತ್ತು ಬೇಡಿಕೆಗಳಿಂದಾಗಿ ೧೯೭೫ರಲ್ಲಿ ಎರಡನೇ ಆವೃತ್ತಿಯಾಗಿ ಪ್ರಕಟಗೊಂಡಿದೆ. ಮೊದಲಿನಿಂದಲೂ ಸಂಸ್ಕೃತ ಸಾಹಿತ್ಯದ ಬಗ್ಗೆ ಒಲವಿದ್ದುದೇ ಅಲ್ಲದೆ ಕಾಲೇಜಿನಲ್ಲಿ ಓದುವಾಗ ಸಂಸ್ಕೃತವನ್ನೇ ಐಚ್ಛಿಕವಾಗಿ ಓದಬೇಕೆಂದಿದ್ದವರಿಗೆ, ಸಂಸ್ಕೃತದ ಓದು ಜೀವನೋಪಾಯಕ್ಕೆ ದಾರಿಯಾಗದಾದ್ದರಿಂದ ಇಂಗ್ಲಿಷ್ ಸಾಹಿತ್ಯವನ್ನು ಓದಬೇಕೆಂಬ ಶ್ರೀರಂಗರ ಸಲಹೆಯಂತೆ ಇಂಗ್ಲಿಷ್ ಓದಿ, ಇಂಗ್ಲಿಷ್ ಪ್ರೊಫೆಸರ್ ಆದರು. ಆದರೆ ಅವರಿಗೆ ಸಂಸ್ಕೃತ ಸಾಹಿತ್ಯದ ಮೇಲಿದ್ದ ಪ್ರೀತಿಯಿಂದಾಗಿ, ಇನಾಂದಾರರು ಸಂಸ್ಕೃತದ ಸಾಹಿತ್ಯವನ್ನು, ಅದರಲ್ಲಿಯೂ ಕಾಳಿದಾಸನ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದೇ ಅಲ್ಲದೆ, ಇಂಗ್ಲಿಷಿನಲ್ಲಿ ಪುಸ್ತಕ ಗಾತ್ರದ, 'ಸಂಸ್ಕೃತ ನಾಟಕಗಳಲ್ಲಿಯ ನಾಯಿಕೆಯರು ಎಂಬ ಇಂಗ್ಲಿಷ್ ಪ್ರಬಂಧವನ್ನು ಬರೆದು ಮುಂಬಯಿ ವಿಶ್ವವಿದ್ಯಾಲಯದ ಮಾಂಡಲಿಕ ಸುವರ್ಣ ಪದಕವನ್ನು ಪಡೆದರು. 'Vidushaka in sanskrit drama' ಎನ್ನುವ ವಿಷಯದ ಬಗ್ಗೆ ೧೯೪೫ರಲ್ಲಿ ವಿಮರ್ಶೆ ಬರೆದು ಭಾರತೀಯ ವಿದ್ಯಾಭವನದಿಂದ ಸ್ವರ್ಣಪದಕವನ್ನು ಗೆದ್ದುಕೊಂಡರು. ಉತ್ತರರಾಮ ಚರಿತಕ್ಕೆ ಮುನ್ನುಡಿಯನ್ನು ಇಂಗ್ಲಿಷಿನಲ್ಲಿ ೧೯೫೭ರಲ್ಲಿ ಬರೆದರು. ಅವರ ಈ ಬರಹಗಳನ್ನು ಗಮನಿಸಿದಾಗ ಅವರಿಗಿದ್ದ ಸಂಸ್ಕೃತ ಸಾಹಿತ್ಯದ ಮೇಲಿನ ಒಲವು ಮತ್ತು ಪ್ರಭುತ್ವ ಎಷ್ಟಿತ್ತೆಂಬುದು ತಿಳಿದು ಬರುತ್ತದೆ. ಇಂತಹ ಹಿನ್ನೆಲೆ ಇರಿಸಿಕೊಂಡಿದ್ದ ಇನಾಂದಾರರು 'ಕಾಳಿದಾಸನ ಕಥಾನಕಗಳು' ಎಂಬ ಕೃತಿಯನ್ನು ಕನ್ನಡದಲ್ಲಿ ಬರೆದದ್ದೇಕೆ ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಇದಕ್ಕೆ ಲೇಖಕರೆ ಈ ಕೃತಿಯ 'ಅರಿಕೆ' ಭಾಗದಲ್ಲಿ ಈ ರೀತಿ ವಿವರಿಸಿದ್ದಾರೆ. "ಕಾಳಿದಾಸ ಮಹಾಕವಿಯ ಹೆಸರನ್ನು ಕೇಳದವರು ಯಾರು? ಅವನ ಹೆಸರನ್ನೂ ಅವನು ರಚಿಸಿದ ಕೃತಿಗಳ ಹೆಸರುಗಳನ್ನೂ ಎಲ್ಲರೂ ತಿಳಿದಿದ್ದರೂ ಅವನ್ನು ಸಮಗ್ರವಾಗಿ ಓದಿ ಸಂತೋಷಪಡಬಲ್ಲವರು ಕಡಿಮೆ. ಆತ ಬರೆದದ್ದು ಸಂಸ್ಕೃತದಲ್ಲಿ. ಪರಿಶ್ರಮ

ವ್ಯಾಸಂಗಗಳಿಲ್ಲದೆ ಸಾಮಾನ್ಯರಿಗೆ ನಿಲುಕದ ಭಾಷೆ ಅದು. ಅದಕ್ಕಾಗಿ ಅನೇಕರಿಗೆ ಆತನ ಕಾವ್ಯ ಪ್ರತಿಭೆಯ ನೇರವಾದ ಪರಿಚಯ ಸಾಧ್ಯವಾಗುವುದಿಲ್ಲ". "ಸಂಸ್ಕೃತವನ್ನು ತಿಳಿಯದೆ ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯುವುದು ಸಾಧ್ಯವಿಲ್ಲ". ಅದನ್ನು ತಿಳಿಯದ ವಿದ್ಯಾ ವ್ಯಾಸಂಗ ಅಪೂರ್ಣ ಎಂದು ನನ್ನ ನಂಬಿಕೆ. ಕಾಳಿದಾಸಂಥವನ ಕೃತಿಗಳನ್ನು ಮೂಲ ಸಂಸ್ಕೃತದಲ್ಲಿ ಓದುವವರ ಸಂಖ್ಯೆಯೇ ಕುಗ್ಗುತ್ತಿದ್ದ ಈ ಕಾಲದಲ್ಲಿ ಉಳಿದವರ ಪಾಡೇನು, ಆದ್ದರಿಂದ ಕಾಳಿದಾಸನ ಕೃತಿಗಳ ಬಗೆಯಲ್ಲಿ ಪ್ರೀತಿಯನ್ನು ಹುಟ್ಟಿಸುವ ದೃಷ್ಟಿಯಿಂದ, ತನ್ಮೂಲಕ ಸಂಸ್ಕೃತದ ಬಗೆಯಲ್ಲಿ ಆಸಕ್ತಿ ಅಭಿರುಚಿಗಳು ಕೆಲಮಟ್ಟಿಗಾದರೂ ಜಾಗೃತವಾಗಲಿ ಎಂಬ ಬಯಕೆಯಿಂದ, ಕಾಳಿದಾಸನ ಕಾವ್ಯ ನಾಟಕಗಳಲ್ಲಿ ಬರುವ ಕಥಾಭಾಗಗಳನ್ನು ಸ್ಥೂಲವಾಗಿ ಈ ಚಿಕ್ಕ ಪುಸ್ತಕದಲ್ಲಿ ವಿವರಿಸಿದ್ದೇನೆ." ಎಂದು ಹೇಳಿರುವುದರಲ್ಲಿ ಈ ಕೃತಿ ರಚನೆಯ ಹಿಂದಿನ ತುಡಿತಗಳು ಏನೆಂಬುದು ಸ್ಪಷ್ಟವಾಗಿವೆ.

ಈ ಕೃತಿಯಲ್ಲಿನ ಆರು ಕಥಾನಕಗಳು, ರಘುವಂಶ, ಕುಮಾರ ಸಂಭವ, ಮೇಘದೂತ ಕಾವ್ಯಗಳಿಂದ ಬಂದವುಗಳಾಗಿವೆ. ಉಳಿದ ಮೂರು ವಿಕ್ರಮೋರ್ವಶೀಯ, ಮಾಲವಿಕಾಗ್ನಿ ಮಿತ್ರ, ಶಾಕುಂತಲ ನಾಟಕಗಳಿಂದ ಬಂದವುಗಳಾಗಿವೆ. ಈ ಕಥಾನಕಗಳು ಕಾವ್ಯದಿಂದಲೇ ಆಗಲಿ ನಾಟಕಗಳಿಂದಲೇ ಆಗಲಿ ಸಾಲು ಸಾಲುಗಳ ಗದ್ಯರೂಪಾಂತರವಲ್ಲ. ಸಂಸ್ಕೃತ ಮೂಲದಿಂದಲೇ ತೆಗೆದುಕೊಂಡ ಕಥಾನಕಗಳಾದರೂ ಸ್ವಭಾವತಃ ಸೃಜನಶೀಲ ಲೇಖಕರಾಗಿರುವ ಇವರಿಗೆ ಕಥಾರೂಪಾಂತರಗೊಳಿಸುವಾಗ ಯಾವುದೇ ತೊಡಕಿಲ್ಲದ ರೀತಿಯಲ್ಲಿ ಪುನಃಸೃಷ್ಟಿಗಳಂತಿವೆ.

ಸರಳವಾದ ಭಾಷೆ, ನೇರ ನಿರೂಪಣೆ, ಕನ್ನಡ ಜಾಯಮಾನಕ್ಕನುಗುಣವಾದ ಭಾಷಾರಚನೆ, ಉಪಮೆ ರೂಪಕಗಳ ಆಪ್ಯಾಯಮಾನವಾದ ರೂಪಾಂತರ ಇವೆಲ್ಲವೂ ಕನ್ನಡ ಓದುಗರಿಗೆ ಕನ್ನಡ ಬರಹಗಳಾಗಿ ಕಾಣುವುದೇ ಹೊರತು ಅನ್ಯಭಾಷಾ ಮೂಲದಿಂದ ಬಂದಿರಬೇಕೆಂಬ ಪ್ರಜ್ಞೆಗೆ ಎಡೆಯೇ ಇಲ್ಲದಂತೆನಿಸುತ್ತದೆ. ಸುದೀರ್ಘವಾದ ರಘುವಂಶ ಕಾವ್ಯದ ಕಥಾನಕ ಕೇವಲ ೩೩ ಪುಟಗಳಲ್ಲಿ ಅಡಕವಾಗಿ, ರಘುವಂಶಾವಳಿ ದಶರಥನ ರಾಜ್ಯಭಾರ, ಪುತ್ರ ಕಾಮೇಷ್ಟಿಯಾಗ, ರಾಮ ಲಕ್ಷ್ಮಣ, ಭರತ ಶತ್ರುಘ್ನರ ಜನನ, ರಾಮ ಪಟ್ಟಾಭಿಷೇಕದ ಪ್ರಯತ್ನ, ಕೈಕೇಯಿ ಪ್ರಸಂಗ, ವನವಾಸ, ಸೀತಾಪಹರಣ ರಾವಣವಧೆ, ಸೀತೆಯ ಅಗ್ನಿಪರೀಕ್ಷೆ, ಮರಳಿ ಅಯೋಧ್ಯೆಗೆ, ಸೀತಾಪರಿತ್ಯಾಗ – ಲವಕುಶ ಜನನ ರಾಮನಿಂದ ಅವಮಾನಿತಳಾದ ಸೀತೆ ಭೂದೇವಿಯ ಒಡಲ ಸೇರುವಿಕೆ – ಲವಕುಶರ

ರಾಜ್ಯಭಾರ ಹೀಗೆ ಸಮಸ್ತ ವಿವರಗಳೂ ಯಾವೊಂದನ್ನೂ ಬಿಡದೆ ಕಥಾನಕದಲ್ಲಿ ಅಡಕವಾಗಿ ಹುದಿಗಿಸಿದ್ದಾರೆ.

ಕುಮಾರಸಂಭವದ ಕಥಾನಕ, ತಾರಕಾಸುರ ವಧೆಗಾಗಿ ಕುಮಾರಸಂಭವದ ಅನಿವಾರ್ಯತೆ, ಶಿವಪಾರ್ವತಿಯರ ನಡುವೆ ನಡೆಯಬೇಕಾದ ಸಮಾಗಮಕ್ಕೆ ಮನ್ಮಥನ ಮಧ್ಯಪ್ರವೇಶ, ಯೋಗಸಮಾಧಿಯಲ್ಲಿದ್ದ ಶಿವನ ತಪೋಭಂಗ - ಶಿವನ ಸಿಟ್ಟಿನಿಂದ ಮನ್ಮಥನ ದಹನ, ಶಿವನನ್ನೇ ವರಿಸಲು ತಪೋನಿರತೆಯಾಗಿದ್ದ ಪಾರ್ವತಿಯ ನಡುವೆ ನಡೆದ ಸಂವಾದ, ಕಡೆಗೆ ಶಿವಪಾರ್ವತಿಯರು ದೇವಕುಲದ ಉದ್ಧಾರಕ್ಕಾಗಿ, ಕುವರನೊಬ್ಬನನ್ನು ಹೆತ್ತು ಕೊಡಬೇಕಾದುದರಿಂದ ಪಾರ್ವತಿಯೊಂದಿಗೆ ವಿವಾಹ. ಹೆತ್ತ ಮಗನನ್ನು ರಾಕ್ಷಸರಿಂದ ರಕ್ಷಿಸಿ ಕೃತ್ತಿಕೆಯರ ಆಶ್ರಯದಲ್ಲಿ ಬೆಳೆಸಿ ಕಡೆಗೆ ಅವಕಾಶ ಬಂದಾಗ ಕಾರ್ತಿಕೇಯ, ತಾರಕಾಸುರರ ನಡುವೆ ನಡೆದ ಭಯಂಕರ ಯುದ್ಧ ಈ ಕಥಾನಕದ ಸಾರವಾಗಿದೆ.

ಮೇಘದೂತ ನಿಜವಾಗಿಯೂ ನಿಸರ್ಗ ಮಹಾಕಾವ್ಯ. ಕಥೆಯ ಅಂಶ ಅತ್ಯಲ್ಪ. ವರ್ಣನೆಯೇ ಮುಖ್ಯ. ಇದೊಂದು ವಿರಹಾಕುಲ ಮನಸ್ಸಿನ ಅಳಲ ಅನನ್ಯ ದರ್ಶನ. ಯಾವುದೊ ಒಂದು ತಪ್ಪಿಗಾಗಿ, ಕುಬೇರ ಯಕ್ಷನೊಬ್ಬನಿಗೆ, ಪತ್ನಿವಿಯೋಗ ಲಭಿಸಲೆಂದು ನೀಡಿದ ಶಾಪ, ಶಪಿತ ಯಕ್ಷ ರಾಮಗಿರಿ ಪರ್ವತದಲ್ಲಿ ಹೆಂಡತಿಯ ವಿರಹದೊಂದಿಗೆ ಹಾಗೂ ಹೀಗೂ ಕಾಲ ಕಳೆಯುತ್ತಿದ್ದವನ ಕಣ್ಣಿಗೆ ಆಷಾಢದ ಒಂದು ಮಳೆ ಮೋಡವು ಕಣ್ಣಿಗೆ ಬಿದ್ದಾಗ, ಅದು ಮೋಡವೆಂದು ಭಾವಿಸದೆ ಜೀವಂತ ದೂತನಾಗಿ ಪರಿಗಣಿಸಿ ತನ್ನೆಲ್ಲ ವಿರಹ ಸಂದೇಶವನ್ನು ಅವಳಿಗೆ ತಲುಪಿಸಬೇಕೆಂದು ಬೇಡಿಕೊಳ್ಳುವಾಗ ಅವಳಿರುವ ಜಾಗದ ವರ್ಣನೆ; ಅಲ್ಲಿನ ಅದ್ಭುತ ನಿಸರ್ಗ ಸೌಂದರ್ಯ, ನದಿ, ಬೆಟ್ಟ, ಪರ್ವತ, ಅಲ್ಲಲ್ಲಿ ಅವಳಿರುವ ಜಾಗದ ಜಾಡನ್ನು ಹೇಳುವ ಕೆಲವು ಗುರುತುಗಳು ಎಲ್ಲವನ್ನೂ ವಿವರಿಸಿ ತಿಳಿಸುವುದನ್ನು ಅತ್ಯಂತ ಸುಂದರವಾಗಿ ಸರಳವಾಗಿ ಭಾಷಾಂತರಿಸಿರುವುದಕ್ಕೆ ಒಂದೆರಡು ಸಾಲುಗಳನ್ನು ನಿದರ್ಶನವಾಗಿ ನೋಡಬಹುದು. "ಅಲಕಾನಗರಿ ಯಲ್ಲಿಯ ಗಿಡಗಳು ಸದಾಕಾಲವೂ ಹೂವುಗಳನ್ನು ಹೊತ್ತು ನಿಂತಿರುತ್ತವೆ ಯಾದ್ದರಿಂದ ಭೃಂಗಗಳಾದರೂ ಅಲ್ಲಿ ಯಾವಾಗಲೂ ಇರುತ್ತದೆ. ಸರೋವರಗಳಲ್ಲಿ ನಿತ್ಯವೂ ಕಮಲಗಳು ಅರಳುತ್ತಿರುವುದರಿಂದ ಆ ಸರೋವರಗಳಿಗೆ ನಡುಕಟ್ಟಿನಂತೆ ಶೋಭಿಸುವ ಹಂಸಗಳ ಸಾಲು ಅಲ್ಲಿ ಯಾವಾಗಲೂ ಓಲಾಡುತ್ತಲೇ ಇರುತ್ತದೆ" ಹೀಗೆ ಉದ್ದಕ್ಕೂ ವರ್ಣನೆಗಳು ಅಡೆತಡೆಯಿಲ್ಲದೆ ನಿರರ್ಗಳವಾಗಿ ಮುಂದುವರೆಯುತ್ತವೆ.

**ವಿಕ್ರಮೋರ್ವಶೀಯ:** ಊರ್ವಶಿ ಪುರೂರವರ ಮಿಲನ ವಿವರಹಗಳ ಕಥಾನಕವಾಗಿದೆ. ದೇವತೆಗಳ ರಕ್ಷಣೆಗೆಂದು ಇಂದ್ರಲೋಕದೆಡೆ ಸಾಗುವ ಪುರೂರವ–ಮಾರ್ಗಮಧ್ಯದಲ್ಲಿ ಊರ್ವಶಿಯ ಆರ್ತ ಕರೆ ಪುರೂರವನಿಂದ ರಕ್ಷಣೆ– ಮೊದಲ ನೋಟಕ್ಕೇ ಪ್ರೇಮಾಂಕುರ, ಹಿಂತಿರುಗಿದ ಪುರೂರವ ಊರ್ವಶಿ ವಿರಹಾಗ್ನಿಯಲ್ಲಿ ಅಲ್ಲಿ ದೇವಲೋಕದಲ್ಲಿ 'ಲಕ್ಷ್ಮಿ ಸ್ವಯಂವರ' ನಾಟಕದಲ್ಲಿ ಊರ್ವಶಿ ಲಕ್ಷ್ಮಿ ಪಾತ್ರದಲ್ಲಿ ಪುರೂರವನ ಚಿಂತೆಯಲ್ಲಿ ಅನ್ಯಮನಸ್ಕಳಾಗಿ, 'ಪುರುಷೋತ್ತಮ' ಎಂದು ಹೇಳುವಲ್ಲಿ 'ಪುರೂರವ' ಎಂದು ಹೇಳಿ ಶಾಪಗ್ರಸ್ತಳಾದದ್ದು – ಪುರೂರವನಿಂದ ಸಾಕಷ್ಟು ಸಹಾಯ ಪಡೆದ ಕೃತಜ್ಞತೆಯಿಂದ ಊರ್ವಶಿ ಪುರೂರವನೊಂದಿಗೆ ಸೇರಲು ಅನುಮತಿ, ಹಿಂತಿರುಗಲು ಹಾಕಿದ ಷರತ್ತು ಊರ್ವಶಿ ಪುರೂರವರ ಸಂತಸದ ಸಂಯೋಗ – ಊರ್ವಶಿ ಹಾಕಿದ ಷರತ್ತಿನ ಅತಿಕ್ರಮಣ – ಸಿಟ್ಟಾದ ಊರ್ವಶಿ ಮರಳಿ ದೇವಲೋಕಕ್ಕೆ – ಪುರೂರವನ ವಿಷಾದಯೋಗ – ಅಂತಿಮವಾಗಿ ಊರ್ವಶಿ – ಪುರೂರವರ ಶಾಶ್ವತ ಸಮ್ಮಿಲನ – ಇದಿಷ್ಟೂ ವಿವರಗಳು ಈ ಕಥಾನಕದಲ್ಲಿ ಬಂದಿವೆ.

**ಮಾಲವಿಕಾಗ್ನಿಮಿತ್ರ:** ಇದೂ ಒಂದು ರೀತಿಯ ಪ್ರೇಮಕಲಹದ ಕಥೆ – ಸವತಿಯರ ನಡುವೆ ನಡೆಯುವ ಘರ್ಷಣೆ; ಅಗ್ನಿಮಿತ್ರನೆಂಬ ಅರಸನ ಇಬ್ಬರು ರಾಣಿಯರು ಧಾರಿಣಿ ಮತ್ತು ಇರಾವತಿ. ಧಾರಿಣಿಯ ಮಲತಮ್ಮನಿಗೆ ಯುದ್ಧದಲ್ಲಿ ಮಾಲವಿಕೆಯೆಂಬವಳು ಸೆರೆಯಾಳಾಗಿ ಸಿಗುವುದು – ಅಕ್ಕನಿಗೆ ಅವಳನ್ನು ದಾಸಿಯಾಗಿ ಕಾಣಿಕೆ ನೀಡಿದ್ದು – ಅಗ್ನಿಮಿತ್ರ ಅರಸ ಅನುಪಮ ಸುಂದರಿಯಾದ ಮಾಲವಿಕೆಯನ್ನು ಆಕಸ್ಮಿಕವಾಗಿ ನೋಡಿದ್ದು. ಅಗ್ನಿಮಿತ್ರನಲ್ಲಿ ಪದೇ ಪದೇ ಅವಳನ್ನು ನೋಡುವ ಬಯಕೆ ಗಂಡನ ಸ್ವಭಾವದ ಪರಿಚಯವಿದ್ದ ಧಾರಿಣಿ, ಅವಳನ್ನು ಅವನ ಕಣ್ಣಿಗೆ ಕಾಣದಂತೆ ಎಚ್ಚರ ವಹಿಸುವುದು – ಆದರೆ ದುಷ್ಟ ವಿದೂಷಕ ತಂತ್ರದಿಂದ – ನಾಟ್ಯ ಪ್ರದರ್ಶನದ ನೆಪ – ಮಾಲವಿಕೆಯೊಂದಿಗೆ ಭೇಟಿ – ನೋಡಿದಂದಿನಿಂದ ಅಗ್ನಿಮಿತ್ರನ ವಿರಹ ತಪ್ತತೆ – ಇವರಿಬ್ಬರ ಸಂಬಂಧ ರಾಣಿಯರಿಬ್ಬರಿಗೂ ತಿಳಿಯುತ್ತದೆ. ಮೊದಲು ಇರಿಸು ಮುರಿಸು, ನಂತರ ಸಮಾಧಾನ – ಮಾಲವಿಕೆಯ ನಿಜವಾದ ಪರಿಚಯ – ರಾಜಕನ್ಯೆ ಎಂಬ ಸತ್ಯದ ಅರಿವು – ಇದರಿಂದ ರಾಣಿಯರಿಬ್ಬರ ಸಿಟ್ಟು ತಿಳಿಯಾಗಿ – ಅಗ್ನಿಮಿತ್ರನಿಗೆ ಮಾಲವಿಕೆಯನ್ನು ಒಪ್ಪಿಸಿದ ಮೇಲೆ ಕಥೆ ಸುಖಾಂತ ಈ ರೀತಿಯಲ್ಲಿ ಲೇಖಕರು ನಾಟಕದ ಕಥಾನಕವನ್ನು ಅತ್ಯಂತ ಸುಂದರವಾಗಿ ನಿರೂಪಿಸಿದ್ದಾರೆ.

ಕಡೆಯದಾದ ಶಾಕುಂತಲ ವಿಶ್ವಮಾನ್ಯತೆ ಪಡೆದ ನಾಟಕದ ಕಥಾನಕವಾಗಿದೆ. ಬೇಟೆಗೆಂದು ದುಷ್ಯಂತ ಬಂದದ್ದು – ಅಲ್ಲಿನ ಆಶ್ರಮ ಪರಿಸರದಲ್ಲಿ ಕಣ್ವರ

ಸಾಕು ಮಗಳು ಕಣ್ಣಿಗೆ ಬಿದ್ದದ್ದು ಆಶ್ರಮದ ಹರಿಣವನ್ನು ಭೇಟೆಯಾಡುವುದನ್ನು ನಿಷೇಧಿಸಿದ್ದು, ಆಶ್ರಮದ ಆತಿಥ್ಯಕ್ಕೆ ಆಹ್ವಾನ – ಶಕುಂತಲೆಯ ಪರಿಚಯ – ಅವಳ ಪೂರ್ವಕಥೆ – ಕ್ಷತ್ರಿಯಳೇ ಆದ್ದರಿಂದ ವಿವಾಹವಾಗುವ ಮನಸು – ಇಬ್ಬರ ನಡುವೆ ಆಕರ್ಷಣೆ – ರಾಜಮುದ್ರೆಯುಂಗರವನ್ನು ನೆನಪಿಗಾಗಿ ಇತ್ತು. ಗಾಂಧರ್ವ ವಿವಾಹವಾದ ವಿಷಯ ಕಣ್ವರಿಗೆ ತಿಳಿದದ್ದು – ಮಗಳಾದ ಶಕುಂತಲೆಯನ್ನು ಗಂಡನ ಮನೆಗೆ ಕಳಿಸಿಕೊಡುವ ಸಿದ್ಧತೆ – ದುಷ್ಯಂತನೆಡೆಗೆ ಕಳಿಸಿದ್ದು ಹಾದಿಯಲ್ಲಿ ಕುರುಹಾಗಿ ಕೊಟ್ಟಿದ್ದ ಉಂಗುರ ಜಾರಿಬಿದ್ದು ಕಳೆದು ಹೋದದ್ದು – ಅರಮನೆ ತಲುಪಿದ ಮೇಲೆ – ಸಂಪೂರ್ಣವಾಗಿ ಶಕುಂತಲೆಯನ್ನು ಮರೆತು ಹೋಗಿದ್ದರಿಂದ ಸ್ವೀಕರಿಸಲು ನಿರಾಕರಣೆ – ಉಂಗುರಕ್ಕಾಗಿ ಹುಡುಕಾಟ ಸಿಗದೆ ಹೋದದ್ದು – ಶಕುಂತಲೆ ವಿಧಿಯಿಲ್ಲದೆ ವನಾಂತರ ಹೋದದ್ದು ನಂತರ ಕೆಲ ಕಾಲದ ಮೇಲೆ – ಉಂಗುರ ದೊರೆತು ಶಕುಂತಲೆ ನೆನಪು – ವಿರಹ – ಅವಳಿಗಾಗಿ ಹುಡುಕಾಟ – ಇಂದ್ರನಿಗೆ ಸಹಾಯ ನೀಡಿ ಹಿಂತಿರುಗುವಾಗ ಮಾರೀಚಾಶ್ರಮದಲ್ಲಿ ಶಕುಂತಲೆ ಮತ್ತು ಮಗನ ಭೇಟಿ – ಕ್ಷಮಾಯಾಚನೆ ರಾಜಮರ್ಯಾದೆಯೊಂದಿಗೆ ಅವಳನ್ನು ಪತ್ನಿಯಾಗಿ ಸ್ವೀಕರಿಸಿದ್ದು – ಸುದೀರ್ಘವಾದ ಕಥಾವಸ್ತು – ಕೇವಲ ಒಂದಿಪ್ಪತ್ತೈದು ಮೂವತ್ತು ಪುಟಗಳಲ್ಲಿ ವಿವರಗಳೊಂದಿಗೆ ಸಮಗ್ರವಾಗಿ ಕಥೆಯನ್ನು ಅತ್ಯಂತ ಸಮರ್ಥವಾಗಿ ನಿರೂಪಿಸಿದ್ದಾರೆ.

ಕಡೆಯಲ್ಲಿ ಕವಿ ಪರಿಚಯವನ್ನು ಓದುಗರ ಅನುಕೂಲಕ್ಕಾಗಿ ನೀಡಿರುವುದೇ ಅಲ್ಲದೆ, ಮತ್ತೆ ಅಲ್ಲಿಯೂ ಕಾವ್ಯ ನಾಟಕಗಳ ಸಂಕ್ಷಿಪ್ತ ಸಾರವನ್ನು ವಿಮರ್ಶಾತ್ಮಕವಾಗಿ ನೀಡಿದ್ದಾರೆ. ವಸ್ತು, ಪಾತ್ರ, ನಾಟಕೀಯತೆಯ ಸೊಗಸು, ಕಾವ್ಯಗಳಲ್ಲಿನ ಕಾವ್ಯಾತ್ಮಕ ಅಂಶಗಳು – ವರ್ಣನಾ ಸೌಂದರ್ಯ ಇತ್ಯಾದಿಗಳನ್ನು ವಿವರಿಸಿದ್ದಾರೆ. ಕಾಳಿದಾಸನ ಕೃತಿಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ನಾಟಕಗಳಲ್ಲಿ ನಾಟಕೀಯತೆ ಅವುಗಳ ಸಹಜ ಸ್ವರೂಪವಾದರೆ ಕಾವ್ಯಗಳಲ್ಲಿಯೂ ನಾಟಕೀಯಾಂಶಗಳು ಹಾಸುಹೊಕ್ಕಾಗಿ ಸೇರಿಕೊಂಡಿವೆ ಎಂಬುದನ್ನು ಕೆಲವು ಸನ್ನಿವೇಶಗಳ ಮುಖಾಂತರ ವಿವರಿಸಿ ತೋರುತ್ತಾರೆ, ಕಾಳಿದಾಸನ ನಾಟ್ಯ ಪ್ರತಿಭೆಯನ್ನು ಗುರುತಿಸುತ್ತಾರೆ. ನಿಜವಾಗಿ ನಾಟಕಗಳು, ನಾಟಕಗಳೆನಿಸಿಕೊಳ್ಳಬೇಕಾದರೆ ಅವಶ್ಯಕವಾದ ಅಂಶಗಳು ಯಾವುವು ಎಂಬುದನ್ನು ಚರ್ಚಿಸುತ್ತಾರೆ. ಈ ಸಂಬಂಧವಾಗಿ ಲೇಖಕರು, "ಕುಶಲ ಸಂಭಾಷಣೆ ಯೊಂದರಿಂದಲೇ ನಾಟಕವಾಗುವುದಿಲ್ಲ. ಒಂದರಿಂದ ಒಂದು ಎಂದು, ಅವುಗಳ ನಡುವೆ ಕಾರ್ಯಕಾರಣ ಸಂಬಂಧವನ್ನು ತೋರಿಸಿ ಸಹಜವಾಗಿ ಬೆಳೆಯುವ ಘಟನಾವಲಯವನ್ನು ರೂಪಿಸುವುದು, ಹಾಗೆ ಬೆಳೆದು ನಿಂತ ಸನ್ನಿವೇಶ ಕೇವಲ

ಕುತೂಹಲವನ್ನಲ್ಲದೆ ಮುಂದೆ ಏನಾದೀತೆಂದು, ಹೇಗಾದೀತೆಂದು, ಉಸಿರು ತಡೆದು ಕಾತರವನ್ನು ಹುಟ್ಟಿಸುವಂತಾಗುವುದು ನಾಟಕದಲ್ಲಿಯ ಮುಖ್ಯಾಂಶಗಳು. ಕಾಳಿದಾಸ ತನ್ನ ಕಾವ್ಯಗಳಲ್ಲಿಯೂ ಸನ್ನಿವೇಶಗಳನ್ನು ಈ ರೀತಿಯಲ್ಲಿ ಬೆಳೆಸಿಕೊಂಡು ಹೋಗುವುದನ್ನು ಕಾಣುತ್ತೇವೆ" ಎಂದು ಕಾಳಿದಾಸನ ಕಾವ್ಯ, ನಾಟಕಗಳಲ್ಲಿನ ನಾಟಕಾಂಶದ ಸ್ವರೂಪದ ಬಗ್ಗೆ ಮಾತನಾಡುವುದರ ಮೂಲಕ, ಯಾವುದೇ ಕೃತಿ ಕುರಿತು ಬರೆಯುವಾಗ ಲೇಖಕರ ವಿಮರ್ಶಾದೃಷ್ಟಿ ನಿರಂತರವಾಗಿ ಜಾಗೃತವಾಗಿರುತ್ತದೆ ಎಂಬುದನ್ನು ಸಾಬೀತುಪಡಿಸುತ್ತಾರೆ.

ಪ್ರತಿಯೊಂದು ಕೃತಿಯ ಅವಗಾಹನೆಯಲ್ಲಿಯೂ ಇವರ ಈ ವಿಮರ್ಶಾ ನಿಲುವು ಓದುಗರಿಗೆ ಒಂದು ರೀತಿಯಲ್ಲಿ ಮಾರ್ಗಸೂಚಿಯಾಗಿ ಕೆಲಸ ಮಾಡುತ್ತದೆ ಎಂಬುದು ಸ್ಪಷ್ಟವಾಗಿದೆ.

ಹೀಗೆ ಇನಾಂದಾರರು ತಮ್ಮ ಬದುಕಿನುದ್ದಕ್ಕೂ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡಿದ್ದು, ತಮ್ಮ ಬಹುಮುಖಿ ಪ್ರತಿಭೆ, ಬಹುಭಾಷಾ ಪಾಂಡಿತ್ಯ, ಆಳವಾದ ಜೀವನಾನುಭವ, ಸೂಕ್ಷ್ಮದೃಷ್ಟಿ, ಪ್ರಯೋಗಶೀಲ ಮನಸ್ಸು, ಅಧ್ಯಯನ, ಅಧ್ಯಾಪನಗಳಿಂದ, ತಾವು ರಚಿಸಿದ ಪ್ರತಿಯೊಂದು ಪ್ರಕಾರವೂ ಮೌಲಿಕವೆನಿಸುವಂತೆ ನೋಡಿಕೊಂಡರು. ಕನ್ನಡ ಕಾದಂಬರಿ ಕ್ಷೇತ್ರದ ಶ್ರೇಷ್ಠ ಕಾದಂಬರಿಕಾರರೆಂದು ಗುರುತಿಸಿಕೊಂಡರು. ತಮ್ಮ ವಿಸ್ತೃತ ಅನುಭವಕ್ಕೆ ದಕ್ಕಿದ ವಿಶಿಷ್ಟ ವಸ್ತು, ಸನ್ನಿವೇಶ, ಸಂದರ್ಭಗಳನ್ನೇ ಅಲ್ಲದೆ ಪರಿಸ್ಥಿತಿಗಳ ಒತ್ತಡಕ್ಕೆ ಸಿಲುಕಿ ಅನುಭವಿಸುವ ಯಾತನೆ, ಅಸಹಾಯಕತೆ, ಹತಾಶೆ, ನಿರಾಶೆಗಳನ್ನು ಅನುಭವಿಸುವ ಕ್ಷಣದ ತಲ್ಲಣಗಳನ್ನು, ಹಾಗೆಯೇ ಬದಲಾಗುವ ಮನಃಸ್ಥಿತಿಗಳನ್ನು, ಅತ್ಯಂತ ಸಮರ್ಥವಾಗಿ ಬಿಂಬಿಸಿದರು. ಹಾಗೆಯೇ, ಅವರು ಬರೆಯಲು ಆರಂಭಿಸಿದ ಕಾಲಘಟ್ಟವೂ ಅನೇಕ ಬದಲಾವಣೆಗಳಿಗೆ ಮುಖಾಮುಖಿಯಾಗುತ್ತಿದ್ದ ಸಂದರ್ಭದಲ್ಲಿ, ರಾಷ್ಟ್ರೀಯ ಆಂದೋಲನವೂ ಅಂತಿಮ ಘಟ್ಟವನ್ನು ತಲುಪುತ್ತಿದ್ದ ಕಾರಣ, ಭಾರತೀಯರ ಧೋರಣೆಗಳಲ್ಲಿ ನಿಲುವು ನಂಬಿಕೆಗಳಲ್ಲಿ ಸ್ಥಿತ್ಯಂತರಗಳೂ ಅನಿವಾರ್ಯವಾಗಿದ್ದವು. ಸಾಮಾಜಿಕ ಸುಧಾರಣೆ ಚಳುವಳಿ, ಸ್ವಾತಂತ್ರ್ಯ ಚಳುವಳಿಗಳಿಂದಾಗಿ, ಶಿಕ್ಷಣ, ಮಹಿಳೆ, ಸನಾತನ ಧರ್ಮ, ಸಂಸ್ಕೃತಿ ಸಂಬಂಧ ವಿಚಾರಗಳಲ್ಲಿಯೂ ಹೊಸದೃಷ್ಟಿ, ಧೋರಣೆಗಳು ಹುಟ್ಟು ಪಡೆಯುತ್ತಿದ್ದವು. ಇಂಥ ಒಂದು ಅವಧಿಯಲ್ಲಿ ಬದಲಾವಣೆಗಳು ಅನಿವಾರ್ಯವೆಂಬಂತೆ ಕಾಣಿಸಿಕೊಳ್ಳುತ್ತಿದ್ದವು. ವಿಶೇಷವಾಗಿ ಮಹಿಳೆಯರು ರೂಢಿಗತ ಸಂಪ್ರದಾಯಗಳಿಗೆ ಬದ್ಧರಾಗಿದ್ದವರು, ಸುಧಾರಣಾ ಚಳುವಳಿಯಿಂದ ಪ್ರೇರಣೆ ಪಡೆದು, ಶಿಕ್ಷಣ, ಉದ್ಯೋಗಗಳ ಮೂಲಕ ಬದಲಾವಣೆಗೆ ಯತ್ನಿಸುತ್ತಿದ್ದರು. ಇದರಿಂದಾಗಿ ಸಾಮಾಜಿಕ ನೆಲೆಯಲ್ಲಿ ಕೌಟುಂಬಿಕ

ನೆಲೆಯಲ್ಲಿ ಅನೇಕ ವೇಳೆ ಸಂಘರ್ಷಕ್ಕೆ ಒಳಗಾಗುವಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂತು. ಇನಾಂದಾರರು ಪ್ರಗತಿಪರ ಚಿಂತಕರೇ ಆಗಿದ್ದರೂ, ಸ್ತ್ರೀಶಿಕ್ಷಣವನ್ನು ಪುರಸ್ಕರಿಸಿದ್ದರೂ, ಹೆಣ್ಣುಮಕ್ಕಳ ತೀರಾ ಪ್ರಗತಿಪರ ಧೋರಣೆ, ಸ್ವಾತಂತ್ರ್ಯ ಸಮಾನತೆಗಳ ಬಗೆಗಿನ ದಿಟ್ಟ ನಿಲುವುಗಳನ್ನು ಪೂರ್ತಿಯಾಗಿ ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ. ಕುಟುಂಬ, ದಾಂಪತ್ಯಗಳ ವಿಚಾರದಲ್ಲಿ ಹಳೆಯ ನಂಬಿಕೆ, ಮೌಲ್ಯಗಳನ್ನೇ ನಿರೀಕ್ಷಿಸುತ್ತಿದ್ದರು. ಅವರ ಹೆಚ್ಚಿನ ಕಾದಂಬರಿಗಳು ಸ್ತ್ರೀ ಕೇಂದ್ರಿತವಾಗಿದ್ದು ಅನೇಕ ಕಾರಣಗಳಿಂದಾಗಿ ಹೆಣ್ಣು ಅನುಭವಿಸುವ ಸಂಕಟಗಳು, ಎದುರಿಸಬೇಕಾಗಿ ಬರುವ ಸಮಸ್ಯೆಗಳು ಅವಳ ವಿಚಾರ, ಧ್ಯೇಯೋದ್ದೇಶಗಳನ್ನು ವಿಸ್ತೃತವಾಗಿ ವಿವರಿಸಿದ್ದಾರೆ. ಹೆಣ್ಣಿನ ಸಮಸ್ಯೆಗೆ ಸ್ವತಃ ಅವಳ ತೀರಾ ಅತಿರೇಕದ ನೆಲೆಯ ಸ್ವಾತಂತ್ರ್ಯ, ಉದ್ದಟತನಗಳು ಒಂದೆಡೆಯಾದರೆ, ಮತ್ತೊಂದು ಕಡೆ ಮನುಷ್ಯ ಗ್ರಹಿಕೆಗೆ ಸಿಗಲಾರದ ವಿಧಿ, ಪೂರ್ವಜನ್ಮ ಕರ್ಮ, ಪುನರ್ಜನ್ಮ ಇತ್ಯಾದಿಗಳೂ ಕಾರಣವೆಂಬುದನ್ನು ಕಾಣಿಸುತ್ತಾರೆ. ನಲವತ್ತರ ದಶಕ, ನವೋದಯ ಕಾಲಘಟ್ಟದಲ್ಲಿ ಪ್ರಚಲಿತವಿದ್ದ ದೃಷ್ಟಿ, ಧೋರಣೆ, ಮೌಲ್ಯನಿಷ್ಠೆ ಸನಾತನ ಪರಂಪರೆಯಲ್ಲಿನ ಶ್ರದ್ಧೆ – ಇವೆಲ್ಲವೂ ಅವರ ಸೃಜನಶೀಲ ಬರಹಗಳನ್ನು ಪ್ರಭಾವಿಸಿವೆ ಎನ್ನುವುದರಲ್ಲಿ ಸಂಶಯವಿಲ್ಲ. ಇನಾಂದಾರರು ನಿಜವಾಗಿಯೂ ಒಂದು ದೊಡ್ಡ ಪ್ರತಿಭೆ. ಆದರೆ ಅವರಿಗೆ ಸಲ್ಲಬೇಕಾಗಿದ್ದ ಸ್ಥಾನಮಾನಗಳು ಸಲ್ಲದೆ ಹೋದದ್ದು ಒಂದು ದೊಡ್ಡ ದುರಂತ. ಆದರೂ ಮೋಹಿನಿ, ಚಿತ್ರಲೇಖಾ ಇತ್ಯಾದಿ ಕಾದಂಬರಿಗಳಂತೂ ಎಂದೆಂದಿಗೂ ಅವರ ಹೆಸರನ್ನು ಚಿರಸ್ಥಾಯಿಯಾಗಿ ಮಾಡುವುದರಲ್ಲಿ ಸಂಶಯವಿಲ್ಲ.

■

## ಅನುಬಂಧ – ಒಂದು

# ಇನಾಂದಾರರ ಕೃತಿಗಳು

**ಕಾದಂಬರಿಗಳು**

೧. ಎರಡು ಧ್ರುವ – ಆನಂದ್ ಬ್ರದರ್ಸ್, ಬೆಂಗಳೂರು, ೧೯೩೭, ೧೯೪೯, ೧೯೬೦, ಕಿ : iv + ೩೮೭.

೨. ಮೂರಾಬಟ್ಟೆ – ಗೀತಾ ಬುಕ್ ಹೌಸ್, ಮೈಸೂರು, ೧೯೪೬, ೧೯೪೮, ೧೯೫೨, ೧೯೭೩, ಕಿ. ೨೪೮.

೩. ಕನಸಿನ ಮನೆ – ಗೀತಾ ಬುಕ್ ಹೌಸ್, ಮೈಸೂರು, ೧೯೪೭, ೧೯೫೦, ೧೯೫೮, ೧೯೭೨, ಕಿ. ೨೨೪.

೪. ವಿಜಯ ಯಾತ್ರೆ – ಗೀತಾ ಬುಕ್ ಹೌಡ್, ಮೈಸೂರು, ೧೯೪೮, ೧೯೫೫, ೧೯೭೮, ಕಿ: ೧೨೮.

೫. ಶಾಪ – ವಿಶ್ವ ಕನ್ನಡ ಸಮ್ಮೇಳನ, ಕರ್ನಾಟಕ ಸರಕಾರ, ಬೆಂ. ೧೯೪೯, ೧೯೫೭, ೧೯೬೯, ೧೯೭೮, ೧೯೮೨, ಕಿ: ೩೦೯.

೬. ಸ್ವರ್ಗದ ಬಾಗಿಲು – ಗೀತಾ ಬುಕ್ ಹೌಸ್, ಮೈಸೂರು, ೧೯೫೧, ೧೯೬೧, ೧೯೬೬, ೧೯೬೬, ೧೯೬೬, ೧೯೭೯.

೭. ಈ ಪರಿಯ ಸೊಬಗು – ಗೀತಾ ಬುಕ್ ಹೌಸ್, ಮೈಸೂರು, ೧೯೫೩, ೧೯೬೦, ೧೯೬೨, ೧೯೭೮, ಕಿ: ೧೬೫.

೮. ಕಟ್ಟಿದ ಮನೆ – ಗೀತಾ ಬುಕ್ ಹೌಸ್, ಮೈಸೂರು, ೧೯೫೩, ೧೯೫೮, ೧೯೭೨, ಕಿ: ೩೪೩.

೯. ಮುಗಿಯದ ಕತೆ – ಗೀತಾ ಬುಕ್ ಹೌಸ್, ಮೈಸೂರು, ೧೯೫೩, ೧೯೭೮, ಕಿ: ೧೩೦.

೧೦. ಚಿತ್ರಲೇಖಾ – ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೫೨, ೧೯೭೨, ೧೯೭೩, ೧೯೭೯, ಕಿ: ೩೬೯.

೧೧. ಮಂಜು ಮುಸುಕಿದ ದಾರಿ – ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೫, ೧೯೭೨, ಕಿ : viii + ೨೬೩.

೧೨. ಊರ್ವಶಿ – ಗೀತಾ ಬುಕ್ ಹೌಸ್, ಮೈಸೂರು, ೧೯೬೮, ೧೯೭೯, ಕಿ: ೩೪೪.

೧೩. ನವಿಲುನೌಕೆ – ಗೀತಾ ಬುಕ್ ಹೌಸ್, ಮೈಸೂರು, ೧೯೭೧, ೧೯೭೮, ಕಿ: ೨೩೫.

೧೪. ಬಾಡಿದ ಹೂವು – ಗೀತಾ ಬುಕ್ ಹೌಸ್, ಮೈಸೂರು, ೧೯೭೨, ಕಿ: ೩೪೪.

೧೫. ಕತ್ತಲೆಯ ಕಡಲು – ಗೀತಾ ಬುಕ್ ಹೌಸ್, ಮೈಸೂರು, ೧೯೭೨, ಕಿ: ೩೦೪.

೧೬. ಯಾತ್ರಿಕರು – ಗೀತಾ ಬುಕ್ ಹೌಸ್, ಮೈಸೂರು, ೧೯೭೬, ೧೭೫.

೧೭. ಯಯಾತಿ – ಉಷಾ ಸಾಹಿತ್ಯ ಮಾಲೆ, ಮೈಸೂರು, (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ – ಉತ್ತಮ ಅನುವಾದ – ೧೯೭೯).

೧೮. ತ್ರಿಶಂಕು – ಗೀತಾ ಬುಕ್ ಹೌಸ್, ಮೈಸೂರು, ೧೯೮೦, ಕಿ: ೨೨೬.

**ಸಾಹಿತ್ಯ ವಿಮರ್ಶೆ**

೧೯. ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೩, ೧೯೮೨, ೧೨೮.

೨೦. ವಿ.ಸೀ. ೭೫ (ಸಂಪಾದಿತ) ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಡೆ. xx + ೩೩೬, ೧೯೭೪, ಬೆಂಗಳೂರು.

೨೧. ಪಾಶ್ಚಾತ್ಯ ವಿಮರ್ಶೆಯ ಮಧ್ಯಯುಗ, (ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ೧೯೭೬, ಡೆ. xii + ೧೬೨.

೨೨. ಶರಚ್ಚಂದ್ರ ವ್ಯಕ್ತಿ ಮತ್ತು ಕಲಾವಿದ (ಅನುವಾದ) (ಸಾಹಿತ್ಯ ಅಕಾಡೆಮಿ, ಹೊಸ ದೆಹಲಿ, ೧೯೭೭, ೧೪೦.

೨೩. ಪಾಶ್ಚಾತ್ಯ ವಿಮರ್ಶೆಯ ಸಂಪ್ರದಾಯ ಯುಗ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ – ೧೯೭೮, ಡೆ. viii + ೨೦೩.

೨೪. ಶಿವರಾಮ ಕಾರಂತ ಬದುಕು ಬರೆಹ : ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, (ಪರಿಷ್ಕೃತ ೧೯೮೨: ಡೆ. viii + ೧೪೩.

೨೫. ಕುವೆಂಪು ಕಾದಂಬರಿಗಳು; ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, ಡೆ. iv + ೧೧೬.

೨೬. ಶ್ರೀರಾಮ ಪಟ್ಟಾಭಿಷೇಕ, ಉಷಾ ಸಾಹಿತ್ಯಮಾಲೆ, ಮೈಸೂರು (ದೇವರಾಜ ಬಹಾದ್ದೂರ್ ಬಹುಮಾನ) ೧೯೮೦, ಡೆಮಿ ೮೧.

೨೭. ಶ್ರೀನಿವಾಸರ ಕಾದಂಬರಿಗಳಲ್ಲಿ ಜೀವನ ದರ್ಶನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಡೆ. viii + ೮೧.

೨೮. ಗೋವಿಂದ ಪೈಗಳ ಕಾವ್ಯ, ಮಹಾತ್ಮಾ ಗಾಂಧಿ, ಮೆಮೋರಿಯಲ್ ಕಾಲೇಜ್, ಉಡುಪಿ, ೧೯೬೫, ಕಿ: vi + ೫೧.

೨೯. ಆಲೋಕ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೧, ಕಿ: iv + ೧೫೨.

೩೦. ಪಾಶ್ಚಾತ್ಯ ವಿಮರ್ಶೆಯ ರೊಮ್ಯಾಂಟಿಕ್ ಯುಗ, (ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨, iv + ೧೨೪.

೩೧. ಪಾಶ್ಚಾತ್ಯ ವಿಮರ್ಶೆಯ ಆಧುನಿಕ ಯುಗ, (ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨, ಡೆ. viii + ೧೬೮.

೩೨. ಪಾಶ್ಚಾತ್ಯ ಕಾವ್ಯ ಮೀಮಾಂಸೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨, ಡೆ. viii + ೬೧೯.

(ಪ್ರೊ. ಮಾಳವಾಡ ಸಾಹಿತ್ಯ ಪ್ರಶಸ್ತಿ, ಕರ್ನಾಟಕ ವಿವಿ ಧಾರವಾಡ, ೧೯೮೩, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸೃಜನೇತರ ಪ್ರಕಾರ, ೧೯೮೨ರ ಅತ್ಯುತ್ತಮ ಗ್ರಂಥ – ೧೯೮೩.

೩೩. ಬಿ.ಎಂ.ಶ್ರೀ. ಬದುಕು – ಬರೆಹ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೩, viii + ೧೧೫.

ಇತರ

೩೪. ದೃಷ್ಟಿಲಾಭ, ಅನುವಾದಿತ ಕಥೆಗಳು, ಕರ್ನಾಟಕ ವೈಭವ ಪ್ರಕಟನಾ ಮಂದಿರ, ಬಿಜಾಪುರ ೯೧.

೩೫. ಬಿಡುಗಡೆ, (ನಾಟಕ), ಉಷಾ ಸಾಹಿತ್ಯ ಮಾಲೆ, ಮೈಸೂರು ೧೯೫೫, ೧೯೮೦, ಕಿ: xvi + ೯೧.

೩೬. ಕಾಳಿದಾಸನ ಕಥಾನಕಗಳು, ಉಷಾ ಸಾಹಿತ್ಯ ಮಾಲೆ, ಮೈಸೂರು ೧೯೫೬, ೧೯೭೫, ಕಿ: vi + ೧೫೫.

೩೭. ಡಾ. ಅಂಬೇಡ್ಕರ್ (ವ್ಯಕ್ತಿ ಮತ್ತು ವಿಚಾರ), ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೧, ಕಿ: xii + ೨೦೧, (ಅಮ್ಮನ ಭಾವಿ ಬಹುಮಾನ, ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ೧೯೮೩.

೩೮. ಮಂಗಲ್ಯಾಂಡಿನಲ್ಲಿ ಮೂರು ವಾರ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೨, ೧೯೮೨, ಕಿ: vii + ೧೫೬.

೩೯. Heroins in Sanskrit Drama (Criticism) V.N. Mandalik K-Gold medal prize of the Bombay university, 1936.

೪೦. Vidushaka in Sanskrit Drama (Criticism) Bharathiya Vidhya Bhavan, Gold medal 1945.

೪೧. Uttararama Charitam - A preface, Published by Mrs. Nirmala Enamdar, Dharwad, 1957, pp iv + 112. (New Edition)

೪೨. Shivarama Karanth : (Institute of Kannada Studies, University of Mysore 1973, pp 98.

೪೩. Govinda Pai, Institute of Kannada Studies mysore, 1983, pp vii + 120.

■

೨೩. ಪಾಶ್ಚಾತ್ಯ ವಿಮರ್ಶೆಯ ಸಂಪ್ರದಾಯ ಯುಗ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ – ೧೯೭೮, ಡೆ. viii + ೨೦೩.

೨೪. ಶಿವರಾಮ ಕಾರಂತ ಬದುಕು ಬರೆಹ : ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, (ಪರಿಷ್ಕೃತ ೧೯೮೨: ಡೆ. viii + ೧೪೩.

೨೫. ಕುವೆಂಪು ಕಾದಂಬರಿಗಳು; ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, ಡೆ. iv + ೧೧೬.

೨೬. ಶ್ರೀರಾಮ ಪಟ್ಟಾಭಿಷೇಕ, ಉಷಾ ಸಾಹಿತ್ಯಮಾಲೆ, ಮೈಸೂರು (ದೇವರಾಜ ಬಹಾದ್ದೂರ್ ಬಹುಮಾನ) ೧೯೮೦, ಡೆಮಿ ೮೧.

೨೭. ಶ್ರೀನಿವಾಸರ ಕಾದಂಬರಿಗಳಲ್ಲಿ ಜೀವನ ದರ್ಶನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಡೆ. viii + ೮೧.

೨೮. ಗೋವಿಂದ ಪೈಗಳ ಕಾವ್ಯ, ಮಹಾತ್ಮಾ ಗಾಂಧಿ, ಮೆಮೋರಿಯಲ್ ಕಾಲೇಜ್, ಉಡುಪಿ, ೧೯೬೫, ಕಿ: vi + ೫೧.

೨೯. ಆಲೋಕ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೧, ಕಿ: iv + ೧೫೨.

೩೦. ಪಾಶ್ಚಾತ್ಯ ವಿಮರ್ಶೆಯ ರೊಮ್ಯಾಂಟಿಕ್ ಯುಗ, (ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨, iv + ೧೨೪.

೩೧. ಪಾಶ್ಚಾತ್ಯ ವಿಮರ್ಶೆಯ ಆಧುನಿಕ ಯುಗ, (ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨, ಡೆ. viii + ೧೬೮.

೩೨. ಪಾಶ್ಚಾತ್ಯ ಕಾವ್ಯ ಮೀಮಾಂಸೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨, ಡೆ. viii + ೬೧೯.

(ಪ್ರೊ. ಮಾಳವಾಡ ಸಾಹಿತ್ಯ ಪ್ರಶಸ್ತಿ, ಕರ್ನಾಟಕ ವಿವಿ ಧಾರವಾಡ, ೧೯೮೩, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸೃಜನೇತರ ಪ್ರಕಾರ, ೧೯೮೨ರ ಅತ್ಯುತ್ತಮ ಗ್ರಂಥ – ೧೯೮೩.

೩೩. ಬಿ.ಎಂ.ಶ್ರೀ. ಬದುಕು – ಬರೆಹ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೩, viii + ೧೧೫.

ಇತರ

೩೪. ದೃಷ್ಟಿಲಾಭ, ಅನುವಾದಿತ ಕಥೆಗಳು, ಕರ್ನಾಟಕ ವೈಭವ ಪ್ರಕಟನಾ ಮಂದಿರ, ಬಿಜಾಪುರ ೯೧.

೩೫. ಬಿಡುಗಡೆ, (ನಾಟಕ), ಉಷಾ ಸಾಹಿತ್ಯ ಮಾಲೆ, ಮೈಸೂರು ೧೯೫೫, ೧೯೮೦, ಕಿ: xvi + ೯೧.

೩೬. ಕಾಳಿದಾಸನ ಕಥಾನಕಗಳು, ಉಷಾ ಸಾಹಿತ್ಯ ಮಾಲೆ, ಮೈಸೂರು ೧೯೫೬, ೧೯೭೫, ಕಿ: vi + ೧೫೫.

೩೭. ಡಾ. ಅಂಬೇಡ್ಕರ್ (ವ್ಯಕ್ತಿ ಮತ್ತು ವಿಚಾರ), ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೧, ಕಿ: xii + ೨೦೧, (ಅಮ್ಮನ ಭಾವಿ ಬಹುಮಾನ, ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ೧೯೮೩.

೩೮. ಮಂಗಲ್ಯಾಂಡಿನಲ್ಲಿ ಮೂರು ವಾರ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೨, ೧೯೮೨, ಕಿ: vii + ೧೫೬.

೩೯. Heroins in Sanskrit Drama (Criticism) V.N. Mandalik K-Gold medal prize of the Bombay university, 1936.

೪೦. Vidushaka in Sanskrit Drama (Criticism) Bharathiya Vidhya Bhavan, Gold medal 1945.

೪೧. Uttararama Charitam - A preface, Published by Mrs. Nirmala Enamdar, Dharwad, 1957, pp iv + 112. (New Edition)

೪೨. Shivarama Karanth : (Institute of Kannada Studies, University of Mysore 1973, pp 98.

೪೩. Govinda Pai, Institute of Kannada Studies mysore, 1983, pp vii + 120.

■

## ಅನುಬಂಧ – ಎರಡು

# ಇನಾಂದಾರರ ಜೀವನದ ಮೈಲುಗಲ್ಲುಗಳು

೧೯೧೨ : ಒಂದನೆಯ ಅಕ್ಟೋಬರ್, ಜನನ, ಹುದಲಿ ಬೆಳಗಾಂವಿ ತಾಲೂಕು, ತಂದೆ: ಮಧ್ವರಾಜ್ ಇನಾಂದಾರ್, ತಾಯಿ: ಕಮಲಾಬಾಯಿ.

೧೯೧೮–೨೩ : ಪ್ರಾಥಮಿಕ ಶಿಕ್ಷಣ : ಅಲ್ಲಿಯೇ.

೧೯೨೩–೩೦ : ಹೈಸ್ಕೂಲು ಶಿಕ್ಷಣ, ಬೆಳಗಾಂವಿ, ಅಥಣಿ ಮತ್ತು ಬಿಜಾಪುರ, ಮುಂಬಯಿ ವಿಶ್ವವಿದ್ಯಾಲಯ, ಮೆಟ್ರಿಕ್ಯುಲೇಶನ್ (೧೯೩೦) ರ್‍ಯಾಂಕು.

೧೯೩೦–೩೪ : ಮುಂದುವರಿದ ಶಿಕ್ಷಣ : ಕರ್ನಾಟಕ ಕಾಲೇಜು, ಧಾರವಾಡ ಮತ್ತು ಎಲ್ಫಿನ್‌ಸ್ಟನ್ ಕಾಲೇಜು, ಮುಂಬಯಿ.

೧೯೩೪ : ಮುಂಬಯಿ ವಿಶ್ವವಿದ್ಯಾಲಯ, ಬಿ.ಎ. ಆನರ್ಸ್ (ಇಂಗ್ಲಿಷ್ ಸಾಹಿತ್ಯ ಪದವಿ (೧೯೩೪), ಸುವರ್ಣ ಪದಕ.

೧೯೩೫–೪೦ : ಬಿಜಾಪುರ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಕೋರ್ಟಿನಲ್ಲಿ ಕೆಲಸ.

೧೯೩೬ : ಸಂಸ್ಕೃತ ನಾಟಕಗಳಲ್ಲಿಯ ನಾಯಿಕೆಯರು' ಪುಸ್ತಕ ಗಾತ್ರದ ಪ್ರಬಂಧಕ್ಕೆ ಮುಂಬಯಿ ವಿವಿಯ ಮಾಂಡಲಿಕ ಸುವರ್ಣ ಪದಕ ಪಾರಿತೋಷಕ.

೧೯೩೭ : 'ದೃಷ್ಟಿಲಾಭ' (ಅನುವಾದಿತ ಕಥೆಗಳು ಮತ್ತು ಎರಡು ಧ್ರುವ (ಅನುವಾದಿತ ಕಾದಂಬರಿ) ಪ್ರಕಟಣೆ.

೧೯೩೮ : ಮುಂಬಯಿ ಬಾರ್ ಕೌನ್ಸಿಲ್‌ನ ಅಡ್ವೊಕೇಟ್ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ.

೧೯೪೦–೪೩ : ಪಿ.ಇ.ಎನ್. ಮತ್ತು 'ಆರ್ಯನ್ ಪಾಥ್' ಪತ್ರಿಕೆಗಳ ಉಪ ಸಂಪಾದಕ.

೧೯೪೧ : ಮುಂಬಯಿ ವಿವಿ, ಎಂ.ಎ. (ಇಂಗ್ಲಿಷ್ ಸಾಹಿತ್ಯ) ಪದವಿ.

೧೯೪೩ : ಇಂಗ್ಲಿಷ್ ಅಧ್ಯಾಪಕರಾಗಿ ನೇಮಕ - ಸಿಡೇನ್‌ಹ್ಯಾಂ ಕಾಲೇಜು, ಮುಂಬಯಿ, ೧೯೪೩-೪೭, ಕರ್ನಾಟಕ ಕಾಲೇಜು, ಧಾರವಾಡ (೧೯೪೭-೫೦).

೧೯೪೫ : 'ಸಂಸ್ಕೃತ ನಾಟಕಗಳಲ್ಲಿ ವಿದೂಷಕ' ಪುಸ್ತಕ ಗಾತ್ರದ ಇಂಗ್ಲಿಷ್ ಪ್ರಬಂಧಕ್ಕೆ ಭಾರತೀಯ ವಿದ್ಯಾಭವನದ ಸುವರ್ಣ ಪದಕ.

೧೯೪೬ : 'ಮೂರಾಬಟ್ಟೆ' ಮೊದಲ ಸ್ವತಂತ್ರ ಕಾದಂಬರಿ.

೧೯೫೦-೫೨ : ಉಪ ಪ್ರಾಧ್ಯಾಪಕರಾಗಿ ಬಡ್ತಿ, ಗುಜರಾತ್ ಕಾಲೇಜು, ಅಹಮದಾಬಾದ್.

೧೮೫೨-೫೮ : ಉಪಪ್ರಾಧ್ಯಾಪಕ, ಕರ್ನಾಟಕ ಕಾಲೇಜು, ಧಾರವಾಡ.

೧೯೫೮-೬೦ : ವೈಸ್ ಪ್ರಿನ್ಸಿಪಾಲ್, ಸರಕಾರಿ ಕಾಲೇಜು, ಮಂಗಳೂರು.

೧೯೬೦-೬೭ : ಇಂಗ್ಲಿಷ್ ಪ್ರಾಧ್ಯಾಪಕರಾಗಿ ಬಡ್ತಿ ಮತ್ತು ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನ ಪ್ರಿನ್ಸಿಪಾಲ್.

೧೯೬೮ : ಸಹ್ಯಾದ್ರಿ ಕಾಲೇಜ್, ಶಿವಮೊಗ್ಗೆಯಿಂದ ಸೇವಾ ನಿವೃತ್ತಿ.

೧೯೬೮-೭೦ : ಬೆಂಗಳೂರು ವಿವಿಯಲ್ಲಿ ಯು.ಜಿ.ಸಿ. ಗೌರವ ಪ್ರಾಧ್ಯಾಪಕ.

೧೯೭೦ : ಇಂಗ್ಲೆಂಡ್ ಅಮೆರಿಕಕ್ಕೆ ಪ್ರಯಾಣ. ಬ್ರಿಟಿಷ್ ಕೌನ್ಸಿಲ್‌ನ ಆಂಶಿಕ ಸಹಾಯದಿಂದ.

೧೯೭೦ : ಕನ್ನಡ ಸಾಹಿತ್ಯ ಪರಿಷತ್ತಿನ ಸ್ವರ್ಣಮಹೋತ್ಸವದಲ್ಲಿ ಸನ್ಮಾನ.

೧೯೭೩-೭೫ : ಅಮೆರಿಕಾ ಕೆನಡಾಗಳಿಗೆ ಪ್ರಯಾಣ.

೧೯೭೭ : ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ.

೧೯೮೧ : ಮೈಸೂರಿಗೆ ಸ್ಥಳಾಂತರ.

೧೯೮೨ : 'ಪಾಶ್ಚಾತ್ಯಕಾವ್ಯ ಮೀಮಾಂಸೆ' ಪ್ರಕಟನೆ.

ಪತ್ನಿ : ಶ್ರೀಮತಿ ನಿರ್ಮಲಾ ಇನಾಂದಾರ್, ಬಿ.ಎ(ಆನರ್ಸ್).

ಮಕ್ಕಳು : ೧. ಪ್ರಿಯಂವದಾ, ಬಿ.ಎ (ಶ್ರೀಮತಿ ಪ್ರಮೀಳಾ ಬೈಚವಾಳ್, ಟೊರೆಂಟೊ, ಕೆನಡಾ), ೨. ಶ್ರೀಕಾಂತ ಇನಾಂದಾರ್, ಎಂ.ಎಸ್. ಕೆನಡಾದ ಅಣು ವಿಜ್ಞಾನ ಸಂಸ್ಥೆಯಲ್ಲಿ ಸಂಶೋಧಕ ಎಂಜಿನಿಂಯರ್, ೩. ಜಾನಕಿ ಬಿ.ಎ, ಬಿ.ಜೆ (ಮೀನಾವಾಂಗೀಕರ್) ಪುಣೆ.

■



ಹೊಸ ತಿಳಿವನ್ನು ಹೆಚ್ಚಿಸುವ ಕೆಲಸವಲ್ಲದೆ, ಪುಸ್ತಕ ಪ್ರಕಟಣೆಯ ಮೂಲಕವೂ ಜ್ಞಾನದ ಪರಿಧಿಯನ್ನು ವಿಸ್ತರಿಸುವ ಕೆಲಸವನ್ನು ಪ್ರತಿಷ್ಠಾನ ಹಿಂದಿನಿಂದಲೂ ಮಾಡುತ್ತ ಬಂದಿದೆ. ಆ ದಿಸೆಯಲ್ಲಿ ಪ್ರೊ. ಎಂ.ವಿ. ಇನಾಂದಾರ್ ಅವರನ್ನು ಕುರಿತ ಡಾ. ವಿಜಯಾ ಸುಬ್ಬರಾಜು ಅವರ ಈ ಪುಸ್ತಿಕೆ ಈಚಿನದು. ಪ್ರೊ. ಇನಾಂದಾರರು ಕಾದಂಬರಿ ಹಾಗೂ ವಿಮರ್ಶಾ ಕ್ಷೇತ್ರಗಳಲ್ಲಿ ಗಣನೀಯ ಕಾರ್ಯಗೈದಿರುವ ಹಿರಿಯರು ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಈ ಕೃತಿಯನ್ನು ರಚಿಸಿಕೊಡಲು ಡಾ. ವಿಜಯಾ ಅವರನ್ನು ಕೇಳಿಕೊಳ್ಳಲಾಗಿತ್ತು. ಇನಾಂದಾರರ ಬದುಕು-ಬರಹಗಳನ್ನು ಆತ್ಮೀಯವಾಗಿಯೂ ತಲಸ್ಪರ್ಶಿಯಾಗಿಯೂ ಪರಿಚಯ ಮಾಡಿಕೊಡುವ ಈ ಗ್ರಂಥವನ್ನು ಓದುಗರು ಆದರದಿಂದ ಬರಮಾಡಿಕೊಳ್ಳುವರೆಂಬ ನಂಬಿಕೆಯಿದೆ.




ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ ಬಿ.ಎಂ.ಶ್ರೀ ಕಲಾಭವನ (ರಿ.) ೩ನೇ ಮುಖ್ಯ ರಸ್ತೆ,
ನರಸಿಂಹರಾಜ ಕಾಲೋನಿ ಬೆಂಗಳೂರು ೫೬೦೦೧೯